


( ಸಚಿತ್ರ ಮಾಸ ಪುಸ್ತಕಾವಳಿ )

# ೧೯

**ಸುಬೋಧ ಪ್ರಕಟನಾಲಯ,**

ಬೆಂಗಳೂರು ನಗರ

# ವಿಷಯಾನುಕ್ರಮಣಿಕೆ

ಹೆಸರು

|| ಶ್ರೀ ರಾಮಸಹಾಯಂ ||

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

ಶ್ರೀ ಚಾಮುಂಡಿಕಾಂಬೆಯ ಪರಮಾನುಗ್ರಹಕ್ಕೆ ಪಾತ್ರವಾಗಿ ದಿನ ದಿನಕ್ಕೆ ಅಭಿವೃದ್ಧಿಗೊಳ್ಳುತ್ತಲಿರುವ, ನಮ್ಮ ಮೈಸೂರಿನ ರಾಜವಂಶವು, ಯದುರಾಯರಿಂದ ಪ್ರಾರಂಭವಾಗಿ ಈವರೆಗೆ ಅನೇಕಮಂದಿ ತೇಜಃಪುಂಜರಾದ ನರಪತಿಗಳಿಂದ ಅಲಂಕೃತವಾಗಿರುವುದು. ಯದುರಾಯರು, ರಾಜಒಡೆಯರು, ಬೆಟ್ಟದ ಚಾಮರಾಜಒಡೆಯರು, ರಣಧೀರ ಕಂಠೀರವ ನರಸಿಂಹರಾಜ ಒಡೆಯರು, ದೊಡ್ಡ ದೇವರಾಜಒಡೆಯರು, ಚಿಕ್ಕ ದೇವರಾಜ ಒಡೆಯರು ಮುಂತಾದ ನರವೀರರು ಮೈಸೂರಿನ ರತ್ನಸಿಂಹಾಸನಾಸೀನರಾಗಿ ಮಾಡಿದ ಮಹತ್ಕಾರ್ಯಗಳ ಫಲವಾಗಿಯೇ ಇಂದು ನಮ್ಮ ಸಂಸ್ಥಾನವು ಭಾರತದೇಶದ ಮಿಕ್ಕ ದೇಶೀಯ ಸಂಸ್ಥಾನಗಳೆಲ್ಲಕ್ಕೂ ಶಿರೋಭೂಷಣಪ್ರಾಯವಾಗಿರಲು ಯೋಗ್ಯವಾಗಿದೆಯೆಂದರೆ ಅದರಲ್ಲಿ ತಪ್ಪಿಲ್ಲ. ರಾಜ್ಯವಿಸ್ತರಣದಲ್ಲೂ, ಕೆರೆ ಕಾಲುವೆ ರಸ್ತೆ ಸಾಲುಮರ ತೋಪುಗಳು, ದೇವಾಲಯ ಧರ್ಮಸ್ಥಳಗಳು ಕೋಟೆಕೊತ್ತಲುಗಳು ಮುಂತಾದುವುಗಳ ನಿರ್ಮಾಣದಿಂದ ರಾಜ್ಯವನ್ನು ಅಂದಗೊಳಿಸುವುದರಲ್ಲೂ, ಸುರಕ್ಷಿತಗೊಳಿಸುವುದರಲ್ಲೂ ಈ ಪೂರ್ವಿಕ ರಾಜವರೇಣ್ಯರು ಮೈಸೂರು ರಾಜ್ಯಕ್ಕೆ ಮಾಡಿರುವ ಉಪಕಾರವು ಚಿರಸ್ಮರಣೀಯವಾಗಿದೆ. ಧಾರ್ಮಿಕರೂ, ಪ್ರಜಾನುರಾಗಿಗಳೂ, ಉದಾರಹೃದಯರೂ ಆದ ಪೂರ್ವಜರ ಪರಂಪರೆಯಲ್ಲಿ ಬಂದ ಈಚಿನ ದೊರೆಗಳ ಕಾಲದಲ್ಲೇ ರಾಜ್ಯವು ಪರಾಕ್ರಾಂತವಾಗಿ ಕೆಲಕಾಲ ನರಳಬೇಕಾಯಿತು. ಜೀವನಕ್ಕೆ ಮಾರ್ಗಕಾಣದೆ ಬಂದು ನೌಕರಿಗೆ ಸೇರಿಕೊಂಡ ಹೈದರಾಲಿಯು ದಿನದಿನಕ್ಕೆ ಪ್ರಬಲಿಸಿ, ಕೊನೆಗೆ ದೊರೆಗಳನ್ನೇ

ಮೂಲೆಗೊತ್ತರಿಸಿ, ರಾಜ್ಯವನ್ನು ಆಕ್ರಮಿಸಿಬಿಟ್ಟನು. ಇವನ ಮಗನಾದ ಟಿಪ್ಪುವಿನ ಕಾಲದಲ್ಲಂತೂ ಮೈಸೂರು ರಾಜವಂಶವು ಉಳಿಯುವುದೇ ಸಂದೇಹಾಸ್ಪದವಾಗಿದ್ದಿತು. ಆ ದುರಂತವೇಳೆಯಲ್ಲೇ ಮಹಾ ಮಾತೃಶ್ರೀ ಲಕ್ಷ್ಮಮ್ಮಣ್ಣಿಯವರು ಆಂಗ್ಲೇಯ ಸರದಾರರೊಂದಿಗೆ ಕಾಗದಪತ್ರ ನಡೆಸಿ, ಅವರ ಸಹಾಯದಿಂದ, ದೇಶದ ಸಿಂಹಾಸನಕ್ಕೂ ರಾಜವಂಶಕ್ಕೂ ಒದಗಿದ್ದ ಆ ಅಪಮೃತ್ಯುವನ್ನು ಪರಿಹರಿಸಿಕೊಂಡು, ರಾಜ್ಯವನ್ನು ಆರ್ಷೇಯ ರಾಜವಂಶಕ್ಕೆ ಪುನಃ ಗಳಿಸಿಕೊಂಡರು. ಹಾಗೆ ಟಿಪ್ಪುವಿನ ಆಳಿಕೆಯ ತರುವಾಯ ದೊರೆತ ರಾಜ್ಯಕ್ಕೆ ಬಾಲ್ಯವಯಸ್ಕರಾದ ಮುಮ್ಮಡಿ ಕೃಷ್ಣರಾಜ ಒಡೆಯರು ಪಟ್ಟಾಭಿಷಿಕ್ತರಾಗಿ, ಆಧಿಪತ್ಯವನ್ನು ಮುಂದರಿಸಿದರು. ಆಗಿನ ಸಂದರ್ಭದಲ್ಲಿ ಮಹಾರಾಣೀ ಲಕ್ಷ್ಮಮ್ಮಣ್ಣಿಯವರಿಂದ ಅಂತಹ ಮಹತ್ಪ್ರಯತ್ನವೊಂದು ನಡೆದು ರಾಜ್ಯವು ಈ ಆರ್ಷೇಯ ರಾಜವಂಶಕ್ಕೆ ದೊರೆಯದಿದ್ದಲ್ಲಿ ಇಂದಿನ ಮೈಸೂರುದೇಶದ ಚರಿತ್ರೆಯು ಅತಿಶಯ-ಭಿನ್ನರೀತಿಯಿಂದ ಬರೆಯಲ್ಪಡಬೇಕಾಗುತ್ತಿದ್ದಿತೆಂಬುದಕ್ಕೆ ಸಂದೇಹವಿಲ್ಲ.

ಮುಮ್ಮಡಿ ಕೃಷ್ಣರಾಜಒಡೆಯರು ಪ್ರಾಪ್ತವಯಸ್ಕರಾಗಿ ರಾಜ್ಯಾಧಿಕಾರವನ್ನು ಸ್ವತಃ ಸ್ವೀಕರಿಸಲು ಶಕ್ತರಾಗುವವರೆಗೂ, ರಾಜ್ಯಭಾರವು ಪೂರ್ಣಯ್ಯನವರ ಅಧಿಕಾರಕ್ಕೊಳಪಟ್ಟು ದರ್ಪದಿಂದಲೇ ನಡೆದುಬಂತು. ರಾಜ್ಯವಿಸ್ತಾರದಲ್ಲೂ ಕೋಶಾಭಿವೃದ್ಧಿಯಲ್ಲೂ ಪೂರ್ಣಯ್ಯನವರು ಮಹಾಸಮರ್ಥರಾಗಿದ್ದರು. ಅವರ ಆಳ್ವಿಕೆಯು ೧೮೧೧ನೆಯ ಸಂವತ್ಸರದಲ್ಲಿ ಮುಗಿಯಲು ತರುವಾಯ ಆ ವೇಳೆಗೆ ಪ್ರಾಪ್ತವಯಸ್ಕರಾಗಿದ್ದ ಮುಮ್ಮಡಿ ಕೃಷ್ಣರಾಜಒಡೆಯರೇ ಆಳ್ವಿಕೆಯನ್ನು ಸ್ವೀಕರಿಸಿದರು. ಅವರ ಆಳ್ವಿಕೆಯೂ ಇಪ್ಪತ್ತುವರ್ಷಕಾಲ ನಡೆಯಿತು. ಆದರೆ ಅಷ್ಟರೊಳಗೇ ರಾಜ್ಯದಲ್ಲಿ ಅಧಿಕಾರಿಗಳ ದುಷ್ಪ್ರಭಾವವು ಹೆಚ್ಚಾಗಿ, ಆಡಳಿತದ ಬಿಗಿತಪ್ಪಿ ಪ್ರಜೆಗಳು ದಂಗೆಯೇಳಲು ಅವಕಾಶವಾಯಿತು. ಈ ಅವ್ಯವಸ್ಥೆಯನ್ನು ಕಂಡ ಬ್ರಿಟಿಷ್ ಸರ್ಕಾರದವರು ರಾಜ್ಯದ ಆಡಳಿತವನ್ನು ೧೮೩೧ನೆಯ ಸಂವತ್ಸರದಲ್ಲಿ ತಮ್ಮ ವಶಕ್ಕೆ ತೆಗೆದುಕೊಂಡರು. ಹೀಗೆ ತೆಗೆದುಕೊಂಡ ರಾಜ್ಯಾಡಳಿತವು ಐವತ್ತು ವರ್ಷಕಾಲ, ಚೀಫ್ ಕಮಿಷನರೆಂಬ ಅಧಿಕಾರಿಗಳ

ವ್ಯಾಪಕ ನಡೆಯಿಸಲ್ಪಡುತ್ತಿದ್ದಿತು. ಮುಮ್ಮಡಿ ಕೃಷ್ಣರಾಜ ಒಡೆಯ
ರವರು, ತಮ್ಮ ಕಾಲದಲ್ಲಿ ಸಂಸ್ಥಾನದ ಆಡಳಿತ ಸ್ವಾತಂತ್ರ್ಯವು ತಪ್ಪಿಹೋ
ದ ದಕ್ಕಾಗಿ ವಿಶೇಷವಾಗಿ ಪರಿತಪಿಸಿ ಅದನ್ನು ಹಿಂದಕ್ಕೆ ಪಡೆಯಲು ಮಹ
ತ್ಪ್ರಯತ್ನಗಳನ್ನು ನಡೆಯಿಸಿದರು. ರಾಜ್ಯಾಡಳಿತವು ಅವರಿಗೆ ಹಿಂದಿರುಗಿ
ವಹಿಸಲ್ಪಡದಿರಲು ಅವರಿಗೆ ಔರಸ ಸಂತತಿ ಇಲ್ಲದಿದ್ದುದೂ ಒಂದು ಕಾರಣ
ವಾಗಿ ಪರಿಣಮಿಸಿತು. ಆಗ ದೂರದರ್ಶಿಗಳಾದ ಆ ಮಹಾರಾಜರು ಬಾಲ್ಯ
ವಯಸ್ಸಿನಲ್ಲಿದ್ದ ನಮ್ಮ ಕಥಾನಾಯಕರನ್ನು ದತ್ತುಸ್ವೀಕಾರಮಾಡಿಕೊಂಡು,
ದಶವಿಧ ಸಂತಾನಗಳಲ್ಲಿ ಒಂದಾದ ಈ ದತ್ತುಸ್ವೀಕಾರವನ್ನಾದರೂ ಮಂ
ಜೂರುಮಾಡಿಕೊಂಡು ನಮ್ಮ ರಾಜ್ಯವನ್ನು ಕೊಡಿಸಿಕೊಡಿರೆಂದು ಪ್ರಾರ್ಥ
ಸಿದರು. ದೈವಯೋಗದಿಂದ ಆ ಪ್ರಾರ್ಥನೆಯು ಬ್ರಿಟಿಷ್ ಸರ್ಕಾರದವರ
ಒಪ್ಪಿಗೆಯನ್ನು ಪಡೆದು, ರಾಜ್ಯವನ್ನು ಶ್ರೀ ಚಾಮರಾಜಒಡೆಯರು ಪ್ರಾಪ್ತ
ವಯಸ್ಕರಾದಮೇಲೆ ಅವರಿಗೆ ಒಪ್ಪಿಸತಕ್ಕುದೆಂದು ನಿರ್ಣಯವಾಯಿತು.
ಈ ಬಗೆಯಿಂದ ಆಡಳಿತವು ಆರ್ಷೇಯ ರಾಜಮನೆತನಕ್ಕೆ ಪ್ರಾಪ್ತವಾಗ
ದಿದ್ದ ಭಾಗದಲ್ಲಿ, ಆಗಲೂ ಇಂದಿನ ಮೈಸೂರು ಚರಿತ್ರೆಯು ಭಿನ್ನರೀತಿ
ಯಲ್ಲೇ ಬರೆಯಲ್ಪಡಬೇಕಾಗುತ್ತಿದ್ದಿತು.

ಸಕಲ ಕಾರ್ಯಗಳೂ ದೈವನಿಯಾಮಕವಿದ್ದಂತೆಯೇ ನಡೆಯತಕ್ಕು
ವಾದುದರಿಂದ ಹೀಗೆ ವಿಶೇಷ ಪರಿಸ್ಥಿತಿಗಳೊದಗಿದ್ದರೂ, ಭಗವದನುಗ್ರಹ
ದಿಂದ ಆಧಿಪತ್ಯವು ರಾಜವಂಶದವರಿಗೇ ದೊರೆಯಿತು. ೧೮೮೧ ನೆಯ
ಸಂವತ್ಸರದ ವೇಳೆಗೆ ಶ್ರೀ ಚಾಮರಾಜೇಂದ್ರ ಒಡೆಯರು ಪ್ರಾಪ್ತವಯಸ್ಕ
ರಾಗಲು, ಆ ವರ್ಷದ ಮಾರ್ಚಿ ೨೫ನೆಯ ಶುಭದಿನದಲ್ಲೇ ರಾಜ್ಯಾಧಿ
ಪತ್ಯವು ಪುನಃ ರಾಜಮನೆತನಕ್ಕೆ ವಹಿಸಲ್ಪಟ್ಟಿತು. ಶ್ರೀ ಚಾಮರಾಜೇಂ
ದ್ರರು ತಮ್ಮ ಸದ್ಗುಣಸನ್ನಡತೆಗಳಿಂದಲೂ, ಧೈರ್ಯೌದಾರ್ಯಾದಿಗಳಿಂ
ದಲೂ, ದೇಶೀಯರಿಗೂ ಆಂಗ್ಲೇಯರಿಗೂ, ಬ್ರಿಟಿಷ್ ಸರ್ಕಾರದವರಿಗೂ
ವಿಶೇಷ ಪ್ರೀತಿಪಾತ್ರರಾಗಿದ್ದು ಯಶಸ್ಸಂಪನ್ನರಾಗಿದ್ದ ರಾಜವರೇಣ್ಯರು.
ಅಗಾಧ ವಿದ್ಯಾವೈದುಷ್ಯಾದಿಗಳಿಂದ ಕೂಡಿ ರಾಜ್ಯದಲ್ಲಿನ ಪ್ರಜಾಸಮುದಾ
ಯದ ಸುಖಸಂತೋಷಗಳನ್ನು ಹೆಚ್ಚಿಸುವ ವಿಷಯದಲ್ಲಿ ಸದಾಕಾರ್ಯ
ತತ್ಪರರಾಗಿರುತ್ತಿದ್ದ ರಾಜಶೇಖರರು. ಇವರ ಸಮಗ್ರ ಚರಿತ್ರೆಯೂ,

ಮನೋರಂಜಕವೂ, ಬೋಧಪ್ರದವೂ ಆದುದು. ಅದನ್ನು ಕರ್ಣಾಟಕ ದೇಶದ ಬಾಲಕ ಬಾಲಕಿಯರು ಅಗತ್ಯ ತಿಳಿದಿರಬೇಕು. ಆದುದರಿಂದ ಆ ಮಹನೀಯರ ಚರಿತ್ರೆಯನ್ನು ಈ ಚಿಕ್ಕ ಪುಸ್ತಕದಲ್ಲಿ, ಸಂಗ್ರಹವಾಗಿ ಕೊಡಲೆಳಸುತ್ತೇವೆ. ಗ್ರಂಥಮಾಲಾಭಿಮಾನಿಗಳು ಎಂದಿನಂತೆಯೇ ನಮ್ಮ ಭಾಷಾಸೇವಾ ಕಾರ್ಯವನ್ನು ಸ್ವೀಕರಿಸಿ, ಪ್ರೋತ್ಸಾಹಿಸುತ್ತಾ ಬರಬೇಕೆಂದು ಪ್ರಾರ್ಥನೆ.

ಬೆಂಗಳೂರು<br>
ತಾ. ೧೪--೨--೩೨

ಇತಿ ಸುಜನವಿಧೇಯ,<br>
**ಎಂ. ರಾಮರಾವ್**



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ



ಆಳಿದ ಶ್ರೀಮನ್ಮಹಾರಾಜಾ
ಚಾಮರಾಜೇಂದ್ರ ಒಡೆಯರವರು

॥ ಶ್ರೀರಾಮಸಹಾಯಂ ॥

## ಆಳಿದ ಶ್ರೀಮನ್ಮಹಾರಾಜಾ

# ಚಾಮರಾಜೇಂದ್ರ ಒಡೆಯರವರು

**ಅಧ್ಯಾಯ ೧** **"ಕಿಂಚಿತ್ಪೂರ್ವಕಥಾ"**

ನಮ್ಮ ಮಾತೃಭೂಮಿಯಾದ, ಈ ಪವಿತ್ರ ಭಾರತದೇಶವಾದ್ಯಂತವೂ, ಭಾರತಪುತ್ರರ ಸ್ವಾಧೀನದಲ್ಲೇ ಇದ್ದು ಆಳಲ್ಪಡುತ್ತಿದ್ದ ಕಾಲವೊಂದಿದ್ದಿತಲ್ಲವೆ? ಆಗ ನಮ್ಮ ದೇಶಕ್ಕೆ ಪರಕೀಯರ ಪ್ರವೇಶವಾಗಿರಲಿಲ್ಲ. ಪವಿತ್ರತಮವಾದ ಭಾರತಭೂಮಿಯು ಹೂಣ ಮ್ಲೇಂಛಾದಿಗಳ ಪಾದಧೂಳಿಯಿಂದ ದೂಷಿತವಾಗದಿದ್ದ, ಆ ಕಾಲದಲ್ಲಿ ಈ ದೇಶದ ಪೂರ್ವದಕ್ಷಿಣ ಪಶ್ಚಿಮೋತ್ತರ ಪ್ರದೇಶಗಳಲ್ಲಿ ಹಲವು ರಾಜ್ಯಗಳು ಧೀರರೂ ಉದಾರರೂ ಧಾರ್ಮಿಕರೂ ಆದ ಹಲವುಮಂದಿ ರಾಜವರೇಣ್ಯರಿಂದ ಆಳಲ್ಪಡುತ್ತಿದ್ದುವು. ಅಂಗವಂಗ ಕಳಿಂಗ ಕಾಶ್ಮೀರವೆಂದು ಮುಂತಾಗಿ ಹೇಳುವ ಛಪ್ಪನ್ನ ಎಂದರೆ ಐವತ್ತಾರು ದೇಶಗಳಲ್ಲಿ ನಮ್ಮ ತಾಯ್ನಾಡಾದ ಕರ್ಣಾಟಕವೂ ಒಂದು. ಆದುದರಿಂದ ನಮ್ಮ ಕರ್ಣಾಟಕ ನಾಡು ಇಂದು ನಿನ್ನೆಯದಲ್ಲ - ಪುರಾಣ ಕಾಲದಿಂದಲೂ, ಪ್ರಸಿದ್ಧವಾಗಿದ್ದು ನಡೆದು ಬಂದುದು ಎಂದು ಸಕಲರೂ ನಂಬಬಹುದು ಈ ಕರ್ಣಾಟಕವನ್ನು ಬಹುಕಾಲದಿಂದ ಕದಂಬರು ಪಲ್ಲವರು ಗಂಗರು ಚಾಲುಕ್ಯರು ಹೊಯ್ಸಳರು ರಾಷ್ಟ್ರಕೂಟದವರು ಮುಂತಾದ ಹಲವು ಮನೆತನಗಳ ಅರಸರು ಬನವಾಸಿ, ಕಾಂಚೀಪುರ, ತಲಕಾಡು, ಬಾದಾಮಿ, ಕಲ್ಯಾಣ, ದ್ವಾರಸಮುದ್ರ ಮುಂತಾದ ಪ್ರಾಂತಗಳಲ್ಲಿ ತಮ್ಮ ರಾಜ್ಯಗಳನ್ನು ಸ್ಥಾಪಿಸಿಕೊಂಡು ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ಕಾಲಗಳಲ್ಲಿ ಆಧಿಪತ್ಯಮಾಡಿದರು. ಅಂತಹ ರಾಜವಂಶಗಳಲ್ಲಿ ಮೈಸೂರಿನ ಯಾದವ ರಾಜವಂಶವೂ ಒಂದು ಗಣನೀಯವಾದುದು.

ಯದುವಂಶವು, ದ್ವಾರಕಾನಗರ ಪ್ರಾಂತದಿಂದ ಕ್ರಿ. ಶ ಹದಿನಾಲ್ಕನೆಯ ಶತಮಾನದ ಅಂತ್ಯಭಾಗದಲ್ಲಿ ಈ ಪ್ರಾಂತ ಹೊರಟು ಬಂದು, ಈಗಿನ ರಾಜಧಾನಿ ಮೈಸೂರಿನ ಸಮೀಪದಲ್ಲಿರುವ ನಂಜನಗೂಡಿನ ಬಳಿ ಇರುವ ಹದಿನಾಡೆಂಬ ಗ್ರಾಮದಲ್ಲಿ ನೆಲೆಸಿದ ಯದುರಾಯರು ಮತ್ತು ಅವರ ತಮ್ಮ ಕೃಷ್ಣರಾಯರು ಎಂಬ ಕ್ಷತ್ರಿಯೋತ್ತಮರಿಂದ ಈ ದೇಶದಲ್ಲಿ ಸ್ಥಾಪಿತವಾಯಿತು ಈ ಅಣ್ಣತಮ್ಮಂದಿರಲ್ಲಿ ಹಿರಿಯರಾದ ಯದುರಾಯರು, ಆಗ ಬಹು ಕಷ್ಟಕ್ಕೆ ಸಿಕ್ಕಿದ್ದ ಇಲ್ಲಿಯ ರಾಜವಂಶದವರಿಗೆ ಸಹಾಯಕರಾಗಿ, ಅವನ್ನು ಜೀರ್ಣೋದ್ಧಾರಗೊಳಿಸಿದರು ರಾಜ್ಯಕ್ಕೆ ಪ್ರಭುವಾಗಿದ್ದ ಚಾಮರಾಜರ ಅಕಾಲ ಮರಣದಿಂದ ಅನಾಥರಾಗಿದ್ದ ರಾಜಪತ್ನಿಗೆ ಧೈರ್ಯಹೇಳಿ, ಅವರನ್ನು ಬೆದರಿಸಿ ರಾಜ್ಯವನ್ನೂ ರಾಜಪುತ್ರಿಯನ್ನೂ ಅಪಹರಿಸಲು ಹೊಂಚಕಾದಿದ್ದ ಮಾರನಾಯಕನೆಂಬ ದುರುಳನನ್ನು ಸಂಹರಿಸಲು, ಸಂತುಷ್ಟಳಾದ ರಾಜಪತ್ನಿಯು ತಮ್ಮ ಪುತ್ರಿಯಾದ ದೇವಾಜಮ್ಮಣ್ಣಿಯೆಂಬ ಕನ್ಯಾರತ್ನವನ್ನೂ ರಾಜ್ಯವನ್ನೂ ಅವರ ಸ್ವಾಧೀನಕ್ಕೆ ವಹಿಸಿ, ತಾವೂ ಅವರ ಪೋಷಣೆಯಲ್ಲಿ ಸುರಕ್ಷಿತವಾಗಿರಲು ಸಮ್ಮತಿಸಿದರು. ಯದುರಾಯರು ವಿದೇಶಕ್ಕೆ ಬಂದ ತಮಗೆ ಈಶಾನುಗ್ರಹದಿಂದ ದೊರೆತ ರಾಜ್ಯವನ್ನು ಸ್ವೀಕರಿಸಿ, ಸರ್ವಸುಲಕ್ಷಣ ಸಂಪನ್ನೆಯಾದ ಆ ರಾಜಪುತ್ರಿಯನ್ನು ವಿಧ್ಯುಕ್ತರೀತಿಯಿಂದ ಪಾಣಿಗ್ರಹಣಮಾಡಿಕೊಂಡು, ಇದನ್ನೇ ತಮ್ಮ ಸ್ವದೇಶವನ್ನಾಗಿಸಿಕೊಂಡು ಇಲ್ಲೇ ನಿಂತುಬಿಟ್ಟರು. ರಣಧೀರರಾದ ಇವರು ತಮ್ಮ ರಾಜ್ಯದ ಸುತ್ತುಮುತ್ತಲೂ ಇದ್ದು ಕಿರುಕುಳಕೊಡುತ್ತಿದ್ದ ಹಲವುಮಂದಿ ಪಾಳೆಯಗಾರರನ್ನು ಜಯಿಸಿ, ರಾಜ್ಯವನ್ನೂ ಕೋಶವನ್ನೂ ವಿಸ್ತರಿಸಿ, ಇಪ್ಪತ್ತೆರಡು ವರ್ಷ ಕಾಲ ರಾಜ್ಯಭಾರಮಾಡಿ ತರುವಾಯ ಕೀರ್ತಿಶೇಷರಾದರು.

ಮೂಲಪುರುಷರಾದ ಯದುರಾಯರ ತರುವಾಯ, ಕ್ರಮವಾಗಿ ಹಿರಿಯ ಬೆಟ್ಟದ ಚಾಮರಾಜ ಒಡೆಯರು, ತಿಮ್ಮರಾಜ ಒಡೆಯರು, ಹಿರಿಯ ಚಾಮರಾಜ ಒಡೆಯರು, ಬೆಟ್ಟದ ಚಾಮರಾಜ ಒಡೆಯರು ಎಂಬೀ ಅರಸರು ಪಟ್ಟಾಭಿಷಿಕ್ತರಾಗಿ ರಾಜ್ಯವಾಳಿದರು. ತರುವಾಯ ಬೋಳಚಾಮರಾಜ ಒಡೆಯರು, ರಾಜಒಡೆಯರು, ಚಾಮರಾಜ ಒಡೆಯರು, ಇಮ್ಮಡಿರಾಜ ಒಡೆಯರು ಎಂಬ ಪರಾಕ್ರಮಶಾಲಿಗಳಾದ ಅರಸರು ಆಳಿದರು. ಇಮ್ಮಡಿ ರಾಜ

ಒಡೆಯರ ತರುವಾಯ ರಣಧೀರ ಕಂಠೀರವನರಸರಾಜ ಒಡೆಯರು, ಆಮೇಲೆ ದೊಡ್ಡ ದೇವರಾಜ ಒಡೆಯರು, ನಂತರ ಚಿಕ್ಕದೇವರಾಜ ಒಡೆಯರು ಎಂಬೀ ನರಪಾಲಾಗ್ರಣಿಗಳು ರಾಜ ಸಿಂಹಾಸನವನ್ನೇರಿ ವಂಶ ಗೌರವವನ್ನು ಕಾಪಾಡಿಕೊಂಡು ಬಂದುದಲ್ಲದೆ, ದಿನದಿನಕ್ಕೆ ರಾಜ್ಯದಲ್ಲಿ ಪ್ರಜೆಗಳ ಸುಖಸಂತೋಷಗಳನ್ನು ಹೆಚ್ಚಿಸುವಂತಹ ಸಕಲವಿಧ ಅನುಕೂಲತೆಗಳನ್ನೂ ಕಲ್ಪಿಸಿಕೊಂಡು ಬಂದರು. ಇವರಲ್ಲಿ ಇಮ್ಮಡಿರಾಜ ಒಡೆಯರು ಮತ್ತು ಚಿಕ್ಕದೇವರಾಜ ಒಡೆಯರು ಎಂಬ ನೃಪೋತ್ತಮರ ಕಾಲದಲ್ಲಿ ಕರ್ಣಾಟಕ ಭಾಷಾಸೇವಾಕಾರ್ಯವೂ ಅಗಾಧ ರೀತಿಯಿಂದ ನಡೆಯಿತು. ಹೀಗೆ ಯದುರಾಯನಿಂದ ಕ್ರಿ. ಶ. ೧೪೦೦ರಲ್ಲಿ ಪ್ರಾರಂಭವಾದ ಈ ವಂಶವು ಸಮರ್ಥರಾದ ಮೇಲ್ಕಂಡ ಹಲವುಮಂದಿ ರಾಜವರೇಣ್ಯರಿಂದ ಅಲಂಕೃತವಾಗಿ ಬಂದು ೧೭೦೪ರಲ್ಲಿ ಪಾರ್ಥಿವ ದೇಹವನ್ನು ಕಳೆದು ಸ್ವರ್ಗಸ್ಥರಾದ ಚಿಕ್ಕದೇವರಾಜ ಒಡೆಯರ ಆಳ್ವಿಕೆಯೊಂದಿಗೆ, ತನ್ನ ಪೂರ್ವದ ಸೌಭಾಗ್ಯವನ್ನೂ ಉಚ್ಛ್ರಾಯಸ್ಥಿತಿಯನ್ನೂ ಸಂಪತ್ಸಮೃದ್ಧಿಯನ್ನೂ ಕಳೆದುಕೊಂಡು ಕಳೆಗುಂದತೊಡಗಿತು.

ಚಿಕ್ಕದೇವರಾಜ ಒಡೆಯರ ಆಳ್ವಿಕೆಯು ಮುಗಿದೊಡನೆಯೇ ಪಟ್ಟಾಭಿಷಿಕ್ತರಾದ ಇವರ ಮಕ್ಕಳು ಕಂಠೀರಾಯ ಒಡೆಯರು ಮೂಕರಾಗಿದ್ದುದರಿಂದ ರಾಜ್ಯದಲ್ಲಿನ ಆಡಳಿತದ ಬಿಗಿಯು ಇವರ ಕಾಲದಿಂದಲೇ ಶಿಥಿಲವಾಗತೊಡಗಿತು. ರಾಜ್ಯದಲ್ಲಿನ ಸ್ಥಿತಿಯನ್ನು ತಿಳಿದ ಪರಕೀಯ ಶತ್ರುಗಳು ಒಬ್ಬೊಬ್ಬರಾಗಿ ಈ ದೇಶವನ್ನು ವಕ್ರದೃಷ್ಟಿಯಿಂದ ನೋಡಲಾರಂಭಿಸಿದರು. ಮೊಗಲಾಯರು ದೇಶದಮೇಲೆ ದಂಡೆತ್ತಿ ಬಂದು, ದೇಶವನ್ನು ಆಕ್ರಮಿಸತೊಡಗಿದರು. ಅಶಕ್ತರಾದ ರಾಜರು ಅವರೊಂದಿಗೆ ಸಂಧಿಮಾಡಿಕೊಂಡು, ಅವರನ್ನು ಸಂತೃಪ್ತಿಪಡಿಸಿ ಕಳುಹಿಸಿದರು. ಇವರ ತರುವಾಯ ದೊಡ್ಡ ಕೃಷ್ಣರಾಜ ಒಡೆಯರೆಂಬುವರು ಪಟ್ಟವನ್ನೇರಿದರಾದರೂ ರಾಜ್ಯಕ್ಕೆ ಸುರಕ್ಷಣೆಯೇನೂ ಉಂಟಾಗಲಿಲ್ಲ. ಇವರು ವಿಷಯಾಭಿಲಾಷಿಗಳಾಗಿ ರಾಜ್ಯವಿಚಾರವನ್ನು ಮಾನಸಿಕಮಾಡಿದ್ದರಿಂದ ಇವರ ಕಾಲದಲ್ಲೂ ದೇಶಕ್ಕೆ ಶತ್ರುಪೀಡೆಯು ತಪ್ಪದೆ ಪ್ರಾಪ್ತವಾಯಿತು. ಮರಾಠೆಯವರು ಪ್ರಬಲ ಸೈನ್ಯದೊಂದಿಗೆ ಬಂದು ದೇಶವನ್ನು ಆಕ್ರಮಿಸಲು, ರಾಜರು ಉಪಾಯಕಾಣದೆ

ಒಂದು ಕೋಟಿ ರೂಪಾಯಿ ಕೊಟ್ಟು ಸಮಾಧಾನಮಾಡಿಕೊಂಡು, ದೇಶವನ್ನು ಉಳಿಸಿಕೊಂಡರು. ಸ್ವಸುಖಾಭಿಲಾಷಿಗಳಾದ ಇವರ ಕಾಲದಲ್ಲೇ ರಾಜ್ಯಭಾರವು ರಾಜರ ಕೈತಪ್ಪಿ ಅಧಿಕಾರಿಗಳ ಕೈಸೇರಿದುದು. ಇವರು ಅಪುತ್ರವಂತರಾಗಿ ಮೃತರಾಗಲು, ದಳವಾಯಿ ದೇವರಾಜಯ್ಯನೆಂಬುವನೂ ಸರ್ವಾಧಿಕಾರಿಯಾಗಿದ್ದ ನಂಜರಾಜಯ್ಯನೆಂಬುವನೂ ಚಾಮ ಅರಸಿನವರೆಂಬುವರಿಗೆ ಪಟ್ಟಗಟ್ಟಿ-ಎಂದಿನಂತೆ ಸಕಲ ಆಡಳಿತಗಳನ್ನೂ, ರಾಜರ ಅನುಮತಿಯನ್ನು ಕೋರದೆ ತಾವೇ ನಡೆಯಿಸಲಾರಂಭಿಸಿದರು. ಈ ಪರಾಧೀನದಲ್ಲಿ ಹದಿನೆಂಟು ತಿಂಗಳಕಾಲ ಇರುವವೇಳೆಗೆ ಚಾಮರಾಜಒಡೆಯರಿಗೆ ಸಾಕುಸಾಕಾಯಿತು. ಕೇವಲ ರಾಜವೇಷದಿಂದ ಅಲಂಕಾರಸಾಮಗ್ರಿಯಾಗಿ ಕುಳಿತಿದ್ದ ತಮ್ಮ ನಿರರ್ಥಕ ಜೀವನವು ಬೇಸರತೋರಿ, ಒಡೆಯರು ತಮ್ಮ ಅಧಿಕಾರವನ್ನು ಸ್ಥಾಪಿಸಿಕೊಳ್ಳಲೆಳಸಲು ದೇವರಾಜಯ್ಯನಿಗೂ ಅವರಿಗೂ ಮನಸ್ತಾಪವಂಕುರಿಸಿತು. ಆ ಮನಸ್ತಾಪವೇ ಬರುಬರುತ್ತಾ ಪ್ರಬಲವಾಗಿ, ಕೊನೆಗೆ ನೀಚನಾದ ದೇವರಾಜಯ್ಯನು ಚಾಮರಾಜಒಡೆಯರನ್ನೂ ಅವರ ಪತ್ನಿಯನ್ನೂ ಕೈಸೆರೆಹಿಡಿದು ಕಬ್ಬಾಳದುರ್ಗಕ್ಕೆ ಕಳುಹಿಸಿ, ಅಲ್ಲಿ ನಿರ್ಬಂಧದಲ್ಲಿರಿಸಿದನು ಮಾತ್ರವಲ್ಲ-ಇತ್ತ ಮೂರುವರ್ಷ ವಯಸ್ಸಿನ ಒಂದು ಮಗುವಿಗೆ ಇಮ್ಮಡಿ ಕೃಷ್ಣರಾಜ ಒಡೆಯರೆಂದು ಹೆಸರಿಟ್ಟು ಪಟ್ಟಗಟ್ಟಿ ಅದರ ಹೆಸರಿನಲ್ಲಿ ತಾನೇತಾನಾಗಿ ಸರ್ವಾಧಿಕಾರಗಳನ್ನೂ ನಿರಂಕುಶವಾಗಿ ನಡೆಯಿಸತೊಡಗಿದನು.

ಈ ದೇವರಾಜಯ್ಯ ನಂಜರಾಜಯ್ಯ ಎಂಬಿಬ್ಬರು ಅಧಿಕಾರಿಗಳು ಸರ್ವಾಧಿಪತ್ಯವನ್ನೂ ಆಕ್ರಮಿಸಿ ಪ್ರಬಲರಾಗಿದ್ದ ಸಂದರ್ಭದಲ್ಲೇ, ಮೈಸೂರು ಸೈನ್ಯದಲ್ಲಿ ನೌಕರಿಗೆ ಸೇರಿದ್ದ ಹೈದರನೆಂಬ ಮಹಮ್ಮದೀಯ ತರುಣನೊಬ್ಬನು ಪ್ರಸಿದ್ಧಿಗೆ ಬಂದು ಕ್ರಮಕ್ರಮವಾಗಿ ಅಭಿವೃದ್ಧಿಗೊಳ್ಳುತ್ತಿದ್ದನು. ಹೀಗೆ ಸಾಮಾನ್ಯ ನೌಕರನಾಗಿದ್ದ ಈ ಹೈದರನು ತನ್ನ ಶೌರ್ಯಧೈರ್ಯ ಪರಾಕ್ರಮಾದಿಗಳ ಮುಂದೆ ಕೆಲವು ವರ್ಷಗಳೊಳಗಾಗಿಯೇ, ಆ ಇಬ್ಬರು ಸರ್ವಾಧಿಕಾರಿಗಳ ಸತ್ವವನ್ನೂ ಅಡಗಿಸಿ, ರಾಜ್ಯದ ಸಮಸ್ತ ಆಡಳಿತಗಳಲ್ಲೂ ತನ್ನ ಸ್ವಾಮ್ಯವನ್ನು ಸ್ಥಾಪಿಸಲಾರಂಭಿಸಿದನು. ಸುಖಾಭಿಲಾಷಿಗಳಾದ ಇಮ್ಮಡಿ ಕೃಷ್ಣರಾಜ ಒಡೆಯರು ಕೇವಲ ಇವನ

ಕೈಗೊಂಬೆಯಂತಾದರು. ಇವರು ಹೀಗೆ ಹೈದರನಿಂದ ಶ್ರೀರಂಗಪಟ್ಟಣ ದಲ್ಲಿ ರಾಜಕೀಯ ಕಾರಾಗಾರ ದುಃಖವನ್ನನುಭವಿಸಿ ಕಾಲವಾಗಲು, ನವಾ ಬನು ಅವರ ಮಗನಾದ ನಂಜರಾಜ ಒಡೆಯರೆಂಬಾತನಿಗೆ ನಾಮ ಮಾತ್ರಕ್ಕೆ ಪಟ್ಟಗಟ್ಟಿ - ಅರಮನೆಯ ಸಮಸ್ತ ಸಂಪತ್ತನ್ನೂ ದೋಚಿಕೊಂಡನು. ನಾಮ ಮಾತ್ರಕ್ಕೆ ರಾಜರಾಗಿದ್ದ ಈ ನಂಜರಾಜರ ಇರುವಿಕೆಯೂ ಅವನಿಗೆ ಸಹನವಾಗಲಿಲ್ಲ. ಮುಂದೆ ಕೆಲವು ದಿನಗಳೊಳಗಾಗಿ ಅವರನ್ನೂ ಕಾರ ಣಾಂತರದಿಂದ ಕೊಲೆಮಾಡಿಸಿ, ಅವರ ತಮ್ಮ ಬೆಟ್ಟದ ಚಾಮರಾಜ ಒಡೆಯ ರನ್ನು ಗಾದಿಯಮೇಲೆ ಕೂರಿಸಿದನು. ಇವರೂ ಮುಂದೆ ಸ್ವಲ್ಪದಿನಗ ಳಲ್ಲೇ ಏನು ಕಾರಣವೋ ಮೃತರಾದರು. ತರುವಾಯ ಒಂದು ವಿಚಿತ್ರ ರೀತಿಯಿಂದ ಖಾಸಾ ಚಾಮರಾಜ ಒಡೆಯರೆಂಬೊಬ್ಬ ರಾಜಪುತ್ರನನ್ನು ಇಮ್ಮಡಿ ಕೃಷ್ಣರಾಜ ಒಡೆಯರವರ ಪತ್ನಿ ಲಕ್ಷ್ಮಮ್ಮಣ್ಣಿಯವರಿಗೆ ಬಲ ವಂತದಿಂದ ದತ್ತುಮಾಡಿಸಿ ಅವರಿಗೆ ಪಟ್ಟಗಟ್ಟಿದನು. ಇವರಿಗೆ ಪಟ್ಟ ವಾದ ಕೆಲವರ್ಷಗಳೊಳಗಾಗಿ ಹೈದರನು ಬೆನ್ನುಫಣೆಯೆಂಬ ರೋಗಕ್ಕೆ ತುತ್ತಾಗಲು, ರಾಜ್ಯವು ಅವನ ಮಗ ಟಿಪ್ಪೂಸುಲ್ತಾನನ ಕೈಗೆ ಸಿಕ್ಕಿತು. ಅವನ ಕಾಲದಲ್ಲಂತೂ ಮೈಸೂರರಸರು ವಾಸ್ತವವಾಗಿ ಸೆರೆಮನೆಯಲ್ಲಿದ್ದೇ ತಮ್ಮ ಕಾಲವನ್ನು ಕಳೆದರು.

ರಾಜವಂಶದಲ್ಲಿ ಅಳಿದುಳಿದಿದ್ದ ಒಬ್ಬಿಬ್ಬರು ಸೆರೆಮನೆಯಲ್ಲಿದ್ದುದು ಮಾತ್ರವಲ್ಲ- ಕಾಲಕ್ರಮದಲ್ಲಿ ಆರ್ಷೇಯ ರಾಜಸಿಂಹಾಸನವೇ ಯವನಾ ಕ್ರಾಂತವಾಗಿ ಮೈಸೂರಲ್ಲಿ ಹಿಂದೂರಾಜ್ಯವೇ 'ನಷ್ಟವಾಗಲಿರುವುದೆಂಬ ವಿಚಾರವನ್ನು ಕುರಿತು ದೀರ್ಘವಾಗಿ ಯೋಚಿಸಿ ಯೋಚಿಸಿ, ಆಗ ಸೆರೆಯ ಲ್ಲಿದ್ದ ಮಹಾರಾಣಿ ಲಕ್ಷ್ಮಮ್ಮಣ್ಣಿಯವರು, ಅದಕ್ಕೆ ಪರಿಹಾರೋಪಾಯ ವನ್ನು ಕುರಿತು ಚಿಂತಿಸತೊಡಗಿದರು. ಮದ್ರಾಸಿನಲ್ಲಿದ್ದ ಇಂಗ್ಲಿಷ್ ಸರ ದಾರರೊಂದಿಗೆ ಗಟ್ಟಾಗಿ ತಮ್ಮ ಆಪ್ತರಾದ ರಾಯಭಾರಿಗಳ ಮೂಲಕ ಸಂಧಾನ ನಡೆಯಿಸತೊಡಗಿದರು. ಅದು ಸಫಲವಾಗಿ ಇಂಗ್ಲೀಷರು ತಮ್ಮ ಪ್ರಬಲ ಸೇನೆಯೊಂದಿಗೆ ಈ ದೇಶದಮೇಲೆ ದಂಡೆತ್ತಿಬಂದು ೧೭೯೯ ರಲ್ಲಿ ನಡೆದ ಶ್ರೀರಂಗಪಟ್ಟಣದ ನಾಲ್ಕನೆ ಯುದ್ಧದಲ್ಲಿ ಟಿಪ್ಪೂಸುಲ್ತಾನನನ್ನು ಸಂಹರಿಸಿ, ರಾಜ್ಯವನ್ನು ಪೂರ್ವದ ರಾಜವಂಶಕ್ಕೆ ಕೊಟ್ಟು ಅದನ್ನು

ಜೀರ್ಣೋದ್ಧಾರಗೊಳಿಸಿದರು. ಈ ಸಂದರ್ಭದಲ್ಲಿ ಪಟ್ಟಾಭಿಷಿಕ್ತರಾದ ಮುಮ್ಮಡಿ ಕೃಷ್ಣರಾಜ ಒಡೆಯರು ಬಾಲ್ಯ ವಯಸ್ಸಿನಲ್ಲಿದ್ದುದರಿಂದ ರಾಜ್ಯಭಾರವು ಪೂರ್ಣಯ್ಯನವರ ದಿವಾನಗಿರಿಯಲ್ಲಿ ನಡೆದುದೂ, ತರುವಾಯ ಅಧಿಕಾರಿಗಳ ದುರ್ವರ್ತನೆಯಿಂದ ರಾಜ್ಯದಲ್ಲಿ ದಂಗೆಯುಂಟಾಗಿ ಪ್ರಭುತ್ವವು ಮಹಾರಾಜರ ಕೈತಪ್ಪಿ ಬ್ರಿಟಿಷ್ ಕಮಿಷನರ ಆಳ್ವಿಕೆಗೊಳಪಟ್ಟ ವೃತ್ತಾಂತವೂ ಈವರೆಗೇ ಸೂಕ್ಷ್ಮವಾಗಿ ತಿಳಿಸಲ್ಪಟ್ಟಿದೆಯಲ್ಲವೆ? ಹೀಗೆ ಆಗ ಮತ್ತೊಮ್ಮೆ ಪ್ರಾಪ್ತವಾಗಿದ್ದ ಅಪಘಾತದಿಂದ ತಪ್ಪಿಸಿ ರಾಜಸಿಂಹಾಸನವನ್ನು ಪುನಃ ತಮ್ಮ ವಂಶಕ್ಕೇ ಗಳಿಸಿಕೊಳ್ಳುವುದಕ್ಕಾಗಿ ಮುಮ್ಮಡಿ ಕೃಷ್ಣರಾಜ ಒಡೆಯರವರು ಅಗಾಧ ಪ್ರಯತ್ನಮಾಡಿದರು. ಈ ಪ್ರಯತ್ನಗಳಲ್ಲೆಲ್ಲ ಮುಖ್ಯವಾದುದೆಂದರೆ, ಅಪುತ್ರವಂತರಾದ ತಾವು, ನಮ್ಮ ಕಥಾನಾಯಕರನ್ನು ದತ್ತುಸ್ವೀಕಾರಮಾಡಿಕೊಂಡು, ರಾಜವಂಶಕ್ಕೊಂದು ಗತಿಯನ್ನು ಕಲ್ಪಿಸಿದುದು. ಹೀಗೆ ಬಹುದಿನಗಳವರೆಗೆ ಮಹತ್ಪ್ರಯತ್ನ ನಡೆದಮೇಲೆ, ದುರ್ದೈವದಿಂದ ಕಳೆದುಹೋಗಿದ್ದ ರಾಜ್ಯಭಾರವು ಪುನಃ ರಾಜವಂಶಕ್ಕೆ ಪ್ರಾಪ್ತಿಸಿತು. ಈ ಕಿಂಚಿತ್ಪೂರ್ವಕಥಾಪರಿಚಯದಿಂದ ನಾವು, ಆಗ ರಾಜವಂಶಕ್ಕೆ ದತ್ತುಪುತ್ರರಾಗಿ ಬಂದ ಬಾಲಕರ ಮಾತಾಪಿತೃಗಳು, ಜನನ, ಬಾಲ್ಯ, ಅವರ ವಿದ್ಯಾಭ್ಯಾಸ ಗುಣನಡತೆಗಳು ಮುಂತಾದ ವಿಚಾರಗಳನ್ನು ತಿಳಿದುಕೊಳ್ಳಲು ಮುಂದರಿಸೋಣ!—



## ಅಧ್ಯಾಯ ೨ "ದತ್ತು ಸ್ವೀಕಾರ"

ರಾಜ್ಯಕ್ಕೆ ಹಕ್ಕುದಾರನಾದ ಒಬ್ಬ ಪುತ್ರನು ಉದಯಿಸಲಿಲ್ಲವಲ್ಲಾ, ಪಿತೃಗಳಿಗೆ ಗತಿಗಾಣಿಸುವ ಒಂದು ಸಂತಾನಾಂಕುರವನ್ನು ಭಗವಂತನು ದಯೆಪಾಲಿಸಲಿಲ್ಲವಲ್ಲಾ- ಎಂಬೀ ಚಿಂತೆಯೇ ಚಿತೆಯಾಗಿ ಮಹಾರಾಜರಾದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರನ್ನು ಹಗಲಿರುಳೂ ಬಾಧಿಸತೊಡಗಿತು ಮಹಾರಾಜರು ತಾವೂ ಅನೇಕ ದಾನಧರ್ಮ ಜಪಹೋಮ ಮುಂತಾದ

ಸತ್ಕರ್ಮಗಳನ್ನು ಮಾಡುತ್ತಲೂ, ಮಹಾರಾಣಿಯವರಿಂದಲೂ ಅನೇಕ ವ್ರತನಿಯಮಗಳನ್ನು ಮಾಡಿಸುತ್ತಲೂ ತಮ್ಮ ಆಶಾಪೂರ್ಣವಾಗುವುದೇನೋ ಎಂದು ಬಹುಕಾಲ ನಿರೀಕ್ಷಿಸಿದರು. ಮಹಾರಾಣಿಯವರೂ, ಕಂಡ ಕಂಡ ದೇವರಿಗೆಲ್ಲ ಕಂದನನ್ನು ಕರುಣಿಸೆಂದು ಕೈಮುಗಿದು ಹರಕೆಹೊತ್ತು, ಬೇಡಿಕೊಳ್ಳುತ್ತಿದ್ದರು. ಆದರೂ ಏನೂ ಪ್ರಯೋಜನತೋರಲಿಲ್ಲ. ಮಹಾರಾಜರಿಗಾದರೋ ೬೭-೬೮ ವರುಷ ವಯಸ್ಸಾಗಿ, ಸಂತಾನೋದಯದ ಆಸೆಯೇ ಕೊನೆಗಂಡಿತು. ಆ ಸಂದರ್ಭದಲ್ಲಿ ಮತ್ತಾವ ಮಾನುಷ ಪ್ರಯತ್ನದಿಂದ ರಾಜ್ಯಕ್ಕೂ ವಂಶಕ್ಕೂ ಒಂದು ದಿಕ್ಕನ್ನು ಕಲ್ಪಿಸಬಹುದೆಂದು, ಆಪ್ತೇಷ್ಟರೊಂದಿಗೆ ದೀರ್ಘವಾಗಿ ಯೋಚಿಸಿದರು. ಔರಸ ಸಂತತಿಯಿಲ್ಲದ ಸಂದರ್ಭದಲ್ಲಿ ದತ್ತುಸ್ವೀಕಾರ ಮಾಡಿಕೊಳ್ಳತಕ್ಕುದೂ ಶಾಸ್ತ್ರವಿಹಿತವಾದ ಸಂಪ್ರದಾಯವೆಂದು ತಿಳಿದುಬರಲು, ಮಹಾರಾಜರಿಗೆ ಸ್ವಲ್ಪಮಟ್ಟಿಗೆ ಮನಸ್ಸಮಾಧಾನವಾದಂತಾಯಿತು.

ಹೀಗೆ ಕೆಲವು ದಿನಗಳು ನಡೆದುಬರಲು, ಮಹಾರಾಜರು ತಮ್ಮ ಆಪ್ತರಿಂದ ಆಗಿನ ತಮ್ಮ ಸಮೀಪದ ರಕ್ತಸಂಬಂಧಿಗಳಲ್ಲಿ ಯಾರಮನೆಯಲ್ಲಿ ಸರ್ವಲಕ್ಷಣಸಂಪನ್ನರಾಗಿ ರಾಜತ್ವಕ್ಕೆ ಯೋಗ್ಯಗುಣವಿಶಿಷ್ಟರಾದ ಬಾಲಕರಿರಬಹುದೆಂದು ವಿಚಾರಿಸಿನೋಡಿದರು. ಜ್ಯೋತಿಷ ಸಾಮುದ್ರಿಕ ಆಯುರ್ವೇದ ಮುಂತಾದ ಸಕಲ ಶಾಸ್ತ್ರಗಳಲ್ಲೂ ಪರಿಶ್ರಮವನ್ನು ಪಡೆದಿದ್ದ ಮಹಾರಾಜರ ಮನಸ್ಸಿಗೆ ತೃಪ್ತಿಯುಂಟಾಗುವಂತಹ ಯಾವ ಬಾಲಕನೂ ದೊರೆಯಲಿಲ್ಲ. ತರುವಾಯ ಸದ್ಯಃ ಗರ್ಭಸ್ಥನಾಗಿರುವ ಯಾವನಾದರೂ ಸುಚೇತನನು ತಮ್ಮ ಆಶಾಪೂರ್ಣಮಾಡಲು ಯೋಗ್ಯನಾಗಿರಬಹುದೋ ಎಂದು, ಆಗ ಗರ್ಭಿಣಿಯರಾಗಿದ್ದ ರಾಜಾನುಬಂಧಿಗಳಾದ ಸ್ತ್ರೀಶಿರೋಮಣಿಯರ ಜಾತಕಾದಿಗಳನ್ನೆಲ್ಲ ತರಿಸಿ ಪರೀಕ್ಷಿಸಿ ನೋಡತೊಡಗಿದರು. ಹಾಗೆ ನೋಡುತ್ತಿರುವಲ್ಲಿ ತಮ್ಮ ಅಳಿಯಂದಿರು ಚಿಕ್ಕಕೃಷ್ಣೇ ಅರಸಿನವರ ಪತ್ನಿ ದೇವಾಜಮ್ಮಣ್ಣಿಯವರ ಗರ್ಭಸ್ಥವಾಗಿದ್ದ ಸುಜೀವಿಯೊಬ್ಬನು, ತಮ್ಮ ವಂಶದ ಕೀರ್ತಿಯನ್ನು ಬೆಳಗಿಸಿ, ವಂಶೋದ್ಧಾರಮಾಡುವ ಸಮಸ್ತ ಸಲ್ಲಕ್ಷಣಗಳಿಂದಲೂ ಯುಕ್ತನಾಗುವನಿರುವನೆಂಬ ಸಂಗತಿಯು ಜ್ಯೋತಿಶ್ಶಾಸ್ತ್ರಮುಖದಿಂದ ಹೊರಬಿದ್ದಿತು. ಒಡನೆ ಮಹಾರಾಜರು ಸ್ನಾನಾಹ್ನಿಕಗಳನ್ನು

ಮುಗಿಸಿಕೊಂಡು ತಮ್ಮ ಕುಲದೇವತೆಯಾದ ಶ್ರೀ ಚಾಮುಂಡಾಂಬಿಕೆಯನ್ನು ವಿಶೇಷ ರೀತಿಯಿಂದ ಆರಾಧಿಸಿ, ತಮ್ಮ ಪತ್ನಿಯಾದ ರಮಾವಿಲಾಸ ಸನ್ನಿಧಾನದವರೊಡನೆಯೂ ಆಲೋಚಿಸಿ ಅವರ ಸಮ್ಮತಿಯನ್ನೂ ಪಡೆದು, ತಮ್ಮ ಅಳಿಯ ಚಿಕ್ಕಕೃಷ್ಣೇ ಅರಸಿನವರನ್ನೂ ಅವರ ಪತ್ನಿ ದೇವಾಜಮ್ಮಣ್ಣಿಯವರನ್ನೂ ಅರಮನೆಗೆ ಕರೆತರಲು ಅಂದಣವನ್ನೂ, ಊಳಿಗದವರನ್ನೂ ಕಳುಹಿಸಿದರು. ಆ ದಿವಸ ಯಾವ ವಿಶೇಷ ಸಂದರ್ಭವೂ ಇರಲಿಲ್ಲವಾದುದರಿಂದ ಕೃಷ್ಣೇ ಅರಸಿನವರು ಮಹಾರಾಜರವರು ತಮ್ಮನ್ನು ಕರೆಸಿಕೊಂಡ ನಿಮಿತ್ತವೇನೋ ತಿಳಿಯದೆ, ರಾಜಾಜ್ಞೆಯನ್ನು ಶಿರಸಾವಹಿಸಿ ಗರ್ಭಿಣಿಯಾದ ತಮ್ಮ ಪತ್ನಿಯೊಂದಿಗೆ ಹೊರಟು ಅರಮನೆಯನ್ನು ಸೇರಿ ಮಹಾರಾಜರವರನ್ನು ಕಂಡರು. ಶ್ರೀ ಕೃಷ್ಣಭೂಪತಿಗಳು, ಪುಣ್ಯಶಾಲಿಗಳಾದ ಆ ದಂಪತಿಗಳನ್ನು ಕಂಡು ಸಂತುಷ್ಟರಾಗಿ ಉಚಿತವಚನಗಳಿಂದ ಆದರಿಸಿ, ಯೋಗಕ್ಷೇಮವನ್ನು ವಿಚಾರಿಸಿ, ತರುವಾಯ—'ಅಪ್ಪಾ, ನಾನು ಆಯುರ್ದಾಯವನ್ನೂ ನಿಮ್ಮ ದಂಪತಿಗಳ ದಶಾಫಲಗಳನ್ನೂ ಸಂತಾನಪ್ರಾಪ್ತಿವಿಚಾರವನ್ನೂ ಜ್ಯೋತಿಶ್ಶಾಸ್ತ್ರ ಬಲದಿಂದ ವಿಚಾರಮಾಡಿರುವೆನು. ನಿಮ್ಮ ಗರ್ಭದಲ್ಲಿ ಇನ್ನು ಕೆಲವು ದಿನಗಳಲ್ಲೇ ಒಂದು ಪುತ್ರಸಂತಾನವಾಗುವುದು. ಆ ಪುತ್ರನನ್ನು ನಾನು ಸ್ವೀಕಾರಮಾಡಿಕೊಳ್ಳಬೇಕೆಂದಿರುವೆನು. ಅದಕ್ಕೆ ನೀವು ಸಮ್ಮತಿಸಬೇಕು' ಎಂದು ಕೇಳಿದರು. ಆ ಮಾತನ್ನು ಕೇಳಿದೊಡನೆಯೇ ಆ ದಂಪತಿಗಳಿಗೆ ಪರಮಾನಂದವೂ ಆಶ್ಚರ್ಯವೂ ಉಂಟಾದುವು. ತಮ್ಮ ಮಗನು ಮೈಸೂರಿನ ರಾಜಸಿಂಹಾಸನವನ್ನು ಏರುವನೆಂಬ ಸಂತೋಷವು ಅವರ ಮೈಯ್ಯನ್ನುಬ್ಬಿಸಲು, ಆ ದಂಪತಿಗಳು ತಮಗುಂಟಾದ ಸಂತೋಷವನ್ನು ತಡೆದುಕೊಳ್ಳಲಾರದೆ, ಕೆಲಹೊತ್ತು ಏನು ಹೇಳಲೂ ಬಾಯಿ ಬಾರದೆ ಸುಮ್ಮನಿದ್ದು- ಅನಿರ್ವಚನೀಯವಾದ ಸುಖಾನುಭವಮಾಡಿ ತರುವಾಯ, ಮಹಾರಾಜರಿಗೆ ಮಣಿದು- 'ಮಹಾಪ್ರಭೋ ಈ ವಿಷಯದಲ್ಲಿ ತಮ್ಮನ್ನು ಕೇಳತಕ್ಕುದೇನಿದೆ. ದಿವ್ಯಚಿತ್ತಕ್ಕೆ ಹೇಗೆ ಸೂಕ್ತತೋರಿದರೆ ಹಾಗೆ ನಡೆಯಿಸಬಹುದು' ಎಂದು ವಿಜ್ಞಾಪಿಸಿದರು.

ತರುವಾಯ ಮಹಾರಾಜರು ಆ ಗರ್ಭಿಣೀ ಸುಮಂಗಲೆಗೆ ರಾಜಯೋಗ್ಯವಾದ ಉಡುಗೆರೆ ಹಣ್ಣುಹಂಪಲು ಹರಿದ್ರಾಕುಂಕುಮಾದಿಗಳನ್ನು

ಕೊಡಿಸಿ ಸಂತೋಷಪಡಿಸಿ ಕಳುಹಿಸಿದರು. ಮುಂದೆ ಆ ದಂಪತಿಗಳ ಯೋಗಕ್ಷೇಮವು ಮಹಾರಾಜರ ಯೋಚನೆಗೆ ವಿಷಯವಾಯಿತು. ಅವರ ಮೇಲೆ ದಿನದಿನಕ್ಕೆ ಸ್ನೇಹ ಪ್ರೇಮಗಳು ಹೆಚ್ಚುತ್ತಾ ಹೋದುವು. ಗರ್ಭಿಣಿಗೆ ನಡೆಯಬೇಕಾದ ಸೀಮಂತವೇ ಮುಂತಾದ ಸಕಲ ಶುಭಕಾರ್ಯಗಳೂ ಅರಮನೆಯಲ್ಲಿಯೇ ನಡೆಯಿಸಲ್ಪಟ್ಟುವು. ದೇವಾಜಮ್ಮಣ್ಣಿಯವರ ಮತ್ತು ಕೃಷ್ಣೇಅರಸಿನವರ ಸುಖಸಂತೋಷಗಳಿಗೆ ಪಾರವುಂಟೆ? ಆದರೆ ಸುಕೃತಶಾಲಿಯಾದ ತಮ್ಮ ಆ ಮಗನ ಮುದ್ದು ಮುಖವನ್ನು ನೋಡುವ ಸುಯೋಗವಾಗಲೀ, ಆತನು ರಾಜಪದವಿಗೆ ಯೋಗ್ಯನಾದ ಸುಸಂದರ್ಭವನ್ನು ಈಕ್ಷಿಸುವ ಪುಣ್ಯವಾಗಲೀ ಕೃಷ್ಣೇ ಅರಸಿನವರ ಪ್ರಾಪ್ತಿಯಲ್ಲಿರಲಿಲ್ಲ. ಅಕಸ್ಮಾತ್ತಾಗಿ ಅವರಿಗೊಂದು ರೋಗಪ್ರಾಪ್ತವಾಗಿ ಅವರು, ೧೮೬೩ನೆಯ ಫೆಬ್ರವರಿ ೧೩ನೆಯ ದಿನವೇ ಕಾಲಾಧೀನರಾದರು. ದೇವಾಜಮ್ಮಣ್ಣಿಯವರ ದುಃಖವನ್ನು ವರ್ಣಿಸಲಳವೇ? ಆದರೆ ದೈವಯತ್ನಕ್ಕೆ ಯಾರೇನು ಮಾಡಲಾಗುವುದು! ಪತಿ ಮರಣ ದುಃಖವು ಇನ್ನೂ ಘನೀಭೂತವಾಗಿ ಅವರನ್ನು ಕೊಂಡಿರುವಾಗಲೇ- ಇನ್ನೂ ಆಶೌಚವೂ ನಿವೃತ್ತಿಯಾಗುವುದಕ್ಕೆ ಮುಂಚೆಯೇ, ಹಿಂದೆ ಮಹಾರಾಜರವರು ಅಪ್ಪಣೆಕೊಡಿಸಿದ್ದಂತೆ, ಅವರಿಗೆ ಒಂದು ಪುರುಷ ಶಿಶುವೇ ಜನನವಾಯಿತು. ಪುತ್ರನ ಮುದ್ದು ಮುಖವನ್ನು ನೋಡಿದ ಆನಂದವೂ, ಆ ತಮ್ಮ ಪುತ್ರನು ಮುಂದೆ ಮಹಾರಾಜರಿಂದ ಸ್ವೀಕೃತನಾಗಿ ರಾಜಸಿಂಹಾಸನವನ್ನು ಏರುವನೆಂಬ ಭರವಸೆಯೂ, ಪತಿವಿಯೋಗಾಗ್ನಿಯಿಂದ ಬೆಂದ ಆ ಸಾಧ್ವಿಯ ಹೃದಯವನ್ನು ಸ್ವಲ್ಪಮಟ್ಟಿಗೆ ಸಮಾಧಾನಗೊಳಿಸಲು ಕಾರಣವಾದುವು. ಆದರೂ, -'ಅಕ್ಕಟಾ, ಈ ಸಂತೋಷ ಸಮಯದಲ್ಲಿ ತಮ್ಮೊಂದಿಗಿದ್ದು ಸುಖಾನುಭವ ಮಾಡಲು ತಮ್ಮ ಭರ್ತನಿಲ್ಲವಲ್ಲಾ!' ಎಂಬ ಚಿಂತೆಯು ಅವರ ಹೃದಯದ ಒಂದು ಭಾಗವನ್ನು ಸದಾ ದಹಿಸುತ್ತಲೇ ಇದ್ದಿತು.

ಶಿಶು ಜನನವಾದ ಶುಭವಾರ್ತೆಯು ಶ್ರೀಮನ್ಮಹಾರಾಜರವರಿಗೆ ಅರಿಕೆಯಾಯಿತು. ಒಡನೆ ಜ್ಯೋತಿಷಜ್ಞರಿಂದ ಅವರು ಶಿಶುವಿನ ಜನನ ಕಾಲದ ಗ್ರಹಸ್ಥಿತಿಯ ಉಚ್ಚದೆಸೆಗಳನ್ನು ಗಮನಿಸಿ ಪರಮಾನಂದಗೊಂಡು, ಶಿಶುವನ್ನೂ ಬಾಣಂತಿಯನ್ನೂ ಜಾಗರೂಕತೆಯಿಂದ ನೋಡಿಕೊಳ್ಳುವಂತೆ ಅವ

ಶ್ಯಕವೆನ್ನಿಸಿದ ಸಕಲ ಅನುಕೂಲತೆಗಳನ್ನೂ ಒದಗಿಸಿ, ಆಜ್ಞೆಮಾಡಿದರು. ಜ್ಯೋತಿಷ್ಕರು, ಶಿಶುವಿನ ಗ್ರಹಸಂಪತ್ತಿಯನ್ನು ನೋಡಿ ಅದು ಮಹಾರಾಜಯೋಗವುಳ್ಳ ದಿವ್ಯ ಜಾತಕವೆಂದು ನಿರ್ಣಯಿಸಿಬಿಟ್ಟರು. ಆ ಸಂಗತಿಯು ಸಕಲರ ಮನಸ್ಸಿಗೂ ಪರಮಾನಂದವನ್ನುಂಟುಮಾಡಿತೆಂದು ಹೇಳಬೇಕಾದುದೇನು? ಕೃಷ್ಣೇ ಅರಸಿನವರ ಬಂಧುಬಾಂಧವರೆಲ್ಲರೂ ಆ ವಾರ್ತೆಯನ್ನು ಕೇಳಿ ತಮ್ಮ ಸಮಾನ ಭಾಗ್ಯಶಾಲಿಗಳು ಮತ್ತಾರೂ ಇಲ್ಲವೆಂದುಕೊಂಡರು ಆಗ ಬದುಕಿದ್ದು ಸುಖಸಂತೋಷಗಳನ್ನನುಭವಿಸುವ ಭಾಗ್ಯವು ಕೃಷ್ಣೇ ಅರಸಿಗೆ ಲಭ್ಯವಿಲ್ಲವಾಯಿತಲ್ಲಾ ಎಂದು ಮರುಗಿದರು ಆದರೂ ಯಾರೇನು ಮಾಡಲಾಗುವುದು!

ಶಿಶು ಜನನವಾದ ವಾರ್ತೆಯನ್ನು ಕೇಳಿದೊಡನೆಯೇ ಮಹಾರಾಜರವರು ತಮಗೇ ಪುತ್ರೋದಯವಾದಷ್ಟು ಸಂತೋಷಗೊಂಡು ತಮ್ಮ ಧರ್ಮಪತ್ನಿಯವರೊಂದಿಗೆ ಅರಮನೆಯಿಂದ ಅಂದಣದಲ್ಲಿ ಹೊರಟು ಕೃಷ್ಣೇ ಅರಸಿನವರ ಮನೆಗೆ ಸ್ವತಃ ದಯಮಾಡಿಸಿ, ಶಿಶುವಿನ ರಾಜಲಕ್ಷಣಯುಕ್ತವಾದ ಅಂಗೋಪಾಂಗಗಳ ಸೌಂದರ್ಯವನ್ನೂ ಮುಖದಮೇಲೆ ಎದ್ದು ಕಾಣುತ್ತಿದ್ದ ರಾಜತೇಜಸ್ಸನ್ನೂ ನೋಡಿ ಪರಮಾನಂದಪಟ್ಟರು. ಮತ್ತು ಆ ಶುಭಮುಹೂರ್ತದಲ್ಲಿ ಅಲ್ಲಿ ನೆರೆದಿದ್ದ ಬ್ರಾಹ್ಮಣಸುವಾಸಿನೀ ಜನರಿಗೆ ತಾವೇ ದಕ್ಷಿಣೆ ತಾಂಬೂಲಗಳನ್ನು ಕೊಡಿಸಿ, ಶಿಶು ಬಾಣಂತಿಯರನ್ನು ಜೋಕೆಯಿಂದ ನೋಡಿಕೊಳ್ಳಬೇಕೆಂದು ಆಜ್ಞಾಪಿಸಿ ಅರಮನೆಗೆ ಹೊರಟು ಬಂದರು. ತಂದೆಯಿಲ್ಲದ ಮಗುವಾದ್ದರಿಂದ ಆ ಮನೆಯವರ ಯೋಗಕ್ಷೇಮವನ್ನು ತಾವು ನೋಡಿಕೊಳ್ಳುತ್ತಿರುವರೆಂದೇ ಸರ್ವರೂ ಭಾವಿಸುವಂತೆ ನಟಿಸಿದರಲ್ಲದೆ, ತಾವು ಆ ಶಿಶುವನ್ನು ಪುತ್ರನನ್ನಾಗಿ ಸ್ವೀಕರಿಸುವ ಇಷ್ಟವುಳ್ಳವರಾಗಿದ್ದಾರೆಂಬ ಸಂಗತಿಯನ್ನು ಮಾತ್ರ ಆಗ ಯಾರಿಗೂ ಸೂಚನೆ ಕೊಡಲಿಲ್ಲ.

ಹೀಗೆ ಸುಮಾರು ಎರಡೂವರೆ ವರ್ಷಗಳು ಕಳೆದುವು. ಅಷ್ಟು ದಿನಗಳೂ ಮಗುವು ತಾಯಿಯ ಮನೆಯಲ್ಲಿಯೇ ಬೆಳೆಯಿತು. ರಾಜತೇಜದಿಂದ ವಿರಾಜಮಾನವಾಗಿದ್ದ ಮುಖಕಮಲದಿಂದ ಸರ್ವರ ದೃಷ್ಟಿಯನ್ನೂ ತನ್ನೆಡೆಗೆ ಆಕರ್ಷಿಸುತ್ತಿದ್ದ ಆ ಬಾಲ ಚಂದ್ರಮನ ಅನುಪಮ ಬಾಲಲೀಲಾ

ವಿನೋದಗಳನ್ನು ನೋಡಿ ತಾಯಿಯೂ, ನೆರೆಹೊರೆಯವರೂ ಬಾಂಧವರೂ ಆನಂದವಾರಿಧಿಯಲ್ಲಿ ಮುಳುಗುವರು. ಮಹಾರಾಜರೂ ಆಗಾಗ ವ್ಯಾಜಾಂತರವನ್ನಿಟ್ಟುಕೊಂಡು ಆ ಮನೆಯ ಕಡೆಗೆ ಬಂದು ಆ ತಾಯಿಮಕ್ಕಳ ಯೋಗಕ್ಷೇಮವನ್ನು ವಿಚಾರಿಸುತ್ತಲೂ, ಮಗುವಿನ ಬಾಲಲೀಲೆಗಳನ್ನು ಪರಾಂಬರಿಸುತ್ತಲೂ ಇದ್ದರು. ಅಂತಹ ಸಂದರ್ಭಗಳಲ್ಲೆಲ್ಲ, ತಮ್ಮ ಉದರಸಂಭೂತವಾದ ಆ ಪುತ್ರರತ್ನದ ಪ್ರಾದುರ್ಭಾವವನ್ನು ಕಂಡು ಆನಂದಿಸುವ ಭಾಗ್ಯವು ತಮ್ಮ ಪತಿಗೆ ಲಭ್ಯವಾಗಲಿಲ್ಲವಲ್ಲಾ ಎಂದು ದೇವಾಜಮ್ಮಣ್ಣಿಯವರು ಮರುಗಿ ಏಕಾಂತವಾಗಿಯೇ ಕಣ್ಣೀರಿಟ್ಟು ಪುನಃ ತಮಗೆ ತಾವೇ ಸಮಾಧಾನಗೊಳ್ಳುವರು. ಹೀಗೆಯೇ ಮೇಲೆ ಹೇಳಿದಂತೆ ಎರಡೂವರೆ ವರ್ಷ ಕಾಲಕಳೆಯಲು, ಕೊನೆಗೆ ೧೮೬೫ನೆಯ ಸಂವತ್ಸರದ ಜೂನ್ ೨ನೆಯ ಒಂದು ಶುಭದಿನದಲ್ಲಿ ಮಹಾರಾಜರವರು ತಮ್ಮ ಆಪ್ತೇಷ್ಟರನ್ನು ಬಳಿಗೆ ಕರೆಯಿಸಿಕೊಂಡು, ಪುತ್ರಸ್ವೀಕಾರ ವಿಷಯವಾಗಿ ತಮ್ಮ ಮನಸ್ಸಿನಲ್ಲಿದ್ದ ವಿಚಾರವನ್ನೆಲ್ಲಾ ಸಂಪೂರ್ಣವಾಗಿ ಹೇಳಿಬಿಟ್ಟರು.—'ಮಂತ್ರಿಗಳಿರಾ, ಆಪ್ತರಿರಾ, ದುಷ್ಕರ್ಮವಶವಾಗಿ ನನಗಂತೂ ಪುತ್ರಸಂತಾನವಾಗಲಿಲ್ಲ. ಪುತ್ರಸಂತಾನವಿಲ್ಲದವರಿಗೆ ಪರಲೋಕವಿಲ್ಲವೆಂದು ಶಾಸ್ತ್ರಗಳು ಹೇಳುತ್ತಿವೆ ಇಂತಹ ಸ್ಥಿತಿಯಲ್ಲಿ ಮುಂದೆ ಕುಲಕ್ರಮಾಗತವಾಗಿ ನಡೆದು ಬಂದ ನಮ್ಮ ರಾಜ್ಯಕ್ಕೂ, ನಮಗೆ ತಿಲತರ್ಪಣಾದಿಗಳನ್ನು ಕೊಡುವುದಕ್ಕೂ ದಿಕ್ಕಾರು ಎಂಬೊಂದು ಚಿಂತೆಯು ಸದಾ ನನ್ನ ಮನಸ್ಸನ್ನು ಕೊರೆಯುತ್ತಿದೆ. ಈಗಾಗಲೇ ಎಪ್ಪತ್ತೆರಡು ವರ್ಷಗಳ ವೃದ್ಧನಾದ ನಾನು ಮುಂದೆ ಬಹುಕಾಲವಿರಬಹುದೆಂಬ ಭರವಸೆಯಾಗಲೀ ಅಥವ ಇನ್ನು ಮುಂದೆ ಪುತ್ರಸಂತಾನವನ್ನು ಪಡೆಯಬಹುದೆಂಬ ಆಸೆಯಾಗಲಿ ಇಲ್ಲ. ಹೀಗಿರುವಲ್ಲಿ ಔರಸಪುತ್ರನಿಲ್ಲದ ಸಂದರ್ಭಗಳಲ್ಲಿ ಸ್ವೀಕೃತಪುತ್ರನನ್ನಾದರೂ ಪಡೆದು ತನ್ಮೂಲಕ ಗತಿಗಾಣಿಸುವ ಒಂದು ಸಂತತಿಯನ್ನು ಏರ್ಪಡಿಸಿಕೊಂಡು ತನ್ಮೂಲಕ ವಂಶವನ್ನು ಊರ್ಜಿತಪಡಿಸಿಕೊಳ್ಳಲು ಅವಕಾಶವಿರುವ ಶಾಸ್ತ್ರವಚನದ ಆಧಾರವನ್ನು ಏಕೆ ಸ್ವೀಕರಿಸಬಾರದೆಂದು ಮನಸ್ಸು ಹಂಬಲಿಸುತ್ತಿದೆ. ಸಾಲದುದಕ್ಕೆ, ರಾಜ್ಯಭಾರವು ಅಧಿಕಾರಿಗಳ ದುಷ್ಪ್ರವರ್ತನೆಗೊಳಗಾಗಿ ಬ್ರಿಟಿಷ್ ಸರ್ಕಾರದವರ ವಶವಾಗಿ ಈಗಾಗಲೇ ಮೂವ

ತ್ತು ವರ್ಷಗಳಿಗೆ ಮೇಲ್ಪಟ್ಟಿತು. ನಮ್ಮ ವಂಶದಲ್ಲೊಂದು ಮೊಳಕೆ ಯಿಲ್ಲದೆ, ನಾನೂ ಹೀಗೆಯೇ ನನ್ನ ಕಾಲವನ್ನು ಕಳೆದುಕೊಂಡು ಹೊರಟು ಹೋದಮೇಲೆ, ರಾಜ್ಯವು ವಾರಸುದಾರರಿಲ್ಲವೆಂಬ ಕಾರಣದಮೇಲೆ, ಬ್ರಿಟಿಷ್ ಸರ್ಕಾರದವರ ಪಾಲಿಗೇ ಸೇರಿ ಹೋಗುವ ವಿಷಯದಲ್ಲಿ ಸಂದೇಹವಿಲ್ಲ ಆದುದರಿಂದ ಈ ಸಂದರ್ಭದಲ್ಲಿ ನಮ್ಮ ಕರ್ತವ್ಯವೇನು, ಅದರ ಸಾಧಕ ಬಾಧಕಗಳೇನು ಎಂಬುದನ್ನು ಕುರಿತು ನಿಮ್ಮ ನಿಮ್ಮ ಅಭಿಪ್ರಾಯಗಳನ್ನು ಸ್ಪಷ್ಟಗೊಳಿಸಬೇಕು!'' ಎಂದು ಭಾಷಿಸಿದರು.

ಶ್ರೀಮನ್ಮಹಾರಾಜರವರ ಯುಕ್ತಿಯುಕ್ತವಾದ ಆ ಭಾಷಣವು ಸರ್ವರಿಗೂ ಸಮಂಜಸವಾದುದೆಂದು ತೋರಿತು. ವಾರಸ್ಸಿಲ್ಲದೆ ಹೋಗುವುದರಿಂದ ಮುಂದೆ ರಾಜ್ಯಕ್ಕೆ ಪ್ರಾಪ್ತಿಸಬಹುದಾದ ಹಾನಿಯ ವಿಚಾರದಲ್ಲಿ ಯಾರಿಗೂ ಸಂದೇಹ ತೋರಲಿಲ್ಲ. ಅಲ್ಲದೆ ಪಿತೃಗಳಿಗೆ ಗತಿಗಾಣಿಸುವುದಕ್ಕಾಗಿ ಇರಬೇಕಾದ ದಶವಿಧ ಪುತ್ರರಲ್ಲಿ ಸ್ವೀಕೃತಪುತ್ರ ಸಂತಾನವನ್ನಾದರೂ ಮಾಡಿಕೊಳ್ಳುವ ವಿಷಯದಲ್ಲಿ ಸರ್ವರೂ ತಮ್ಮ ಸಮ್ಮತಿಯನ್ನು ಮಾತ್ರವಲ್ಲ- ತಮ್ಮ ಮನಸ್ಸಿನಲ್ಲಿ ಹುಟ್ಟಿದ ಆನಂದಾತಿಶಯವನ್ನೂ ಸೂಚಿಸಿದರು. ಅಧಿಕಾರಿಗಳ ಮನೋಗತವನ್ನು ತಿಳಿದು ಸಂತುಷ್ಟರಾದ ಮಹಾರಾಜರು ಏನೂ ಅರಿಯದವರಂತೆ,—'ಹಾಗಾದರೆ ನಮ್ಮಿಂದ ಸ್ವೀಕೃತವಾಗಲು ಯೋಗ್ಯವಾದ ಮಗುವು ನಮ್ಮ ದಶರಾತ್ರಿ ಜ್ಞಾತಿಗಳಲ್ಲೀ ಎಲ್ಲಿದೆ?' ಎಂದು ವಿಚಾರಯುಕ್ತರಾದವರಂತೆ ಪ್ರಶ್ನೆ ಮಾಡಿಕೊಂಡರು. ಆ ಪ್ರಶ್ನೆಗೆ-'ದಶರಾತ್ರಿ ಜ್ಞಾತಿಗಳಲ್ಲಿ ಅಂತಹ ಮಕ್ಕಳಾರೂ ಇಲ್ಲ. ಸಗೋತ್ರರಲ್ಲೂ ಇಲ್ಲ. ಅಸಗೋತ್ರದಲ್ಲಾದರೆ ಬಾಳೇ ಅರಸಿನವರ ಮನೆಯಲ್ಲೊಂದು ಮತ್ತು ಕೃಷ್ಣೇ ಅರಸಿನವರ ಮನೆಯಲ್ಲೊಂದು ಈ ಎರಡು ಮಕ್ಕಳವೆ! ಈ ಇಬ್ಬರಲ್ಲಿ ಯಾರನ್ನಾದರೂ ಸ್ವೀಕರಿಸಬಹುದು' ಎಂಬ ಸಲಹೆಬಂತು. ಒಡನೆ ಮಹಾರಾಜರು, ಪುರೋಹಿತರನ್ನು ಸಂಬೋಧಿಸಿ -'ನಾಳೆಯೇ ಹವನಹೋಮಾದಿಗಳೂ - ಸ್ವೀಕಾರಕಾರ್ಯವೂ ನಡೆಯಬೇಕಾಗುತ್ತದೆ. ಆದುದರಿಂದ ಗೋಪ್ಯವಾಗಿಯೇ ಆವಶ್ಯಕವಾದ ಸಕಲ ಸಾಮಗ್ರಿಗಳನ್ನೂ ಸಿದ್ಧಪಡಿಸಿಕೊಳ್ಳಿರಿ' ಎಂದಾಜ್ಞಾಪಿಸಿದರು. ಅಲ್ಲದೆ, ಆಪ್ತೇಷ್ಟರಾದ ಸಕಲ ಅರಸುಮನೆತನದವರಿಗೂ ಅಧಿಕಾರಿಗಳಿಗೂ, ವಿದ್ವಾಂಸರಿಗೂ ಗಣ್ಯರಾದ

ಪುರಜನರಿಗೂ ಆಹ್ವಾನಗಳನ್ನು ಕಳುಹಿಸುವಂತೆಯೂ, ಬಾರ್ ಕಚೇರಿ, ಜಿಲ್ಲಾ ಕಚೇರಿ, ಸವಾರ್ ಕಚೇರಿಗಳಿಂದ ಬಕ್ಷೀಯುಗಳು ತಮ್ಮ ತಮ್ಮ ಸೈನ್ಯ ಸಮೇತ ಬರುವಂತೆ ತಾಕೀತಿಗಳನ್ನು ಕಳುಹಿಸುವಂತೆಯೂ ಅಪ್ಪಣೆ ಮಾಡಿದರು. - ಒಂದಿಗೇ ಈ ವಿಚಾರವು ಕಾರ್ಯಪರ್ಯವಸಾನದವರೆಗೂ ಬಹು ಗೋಪ್ಯವಾಗಿರಬೇಕು—ಎಂದು ಸಂಬಂಧಪಟ್ಟವರಿಗೆಲ್ಲ ಖಂಡಿತವಾದ ಆಜ್ಞೆ ಮಾಡಿದರು ಅತಿಮುಖ್ಯವಾದ ಈ ವಿಚಾರವನ್ನು ಕುರಿತು ಆಗಿನ ಬ್ರಿಟಿಷ್ ರೆಸಿಡೆಂಟರಾದ ಬೌರಿಂಗ್ ಸಾಹೇಬರಲ್ಲಿ ಪ್ರಸ್ತಾಪಿಸಲಿಲ್ಲವಾದರೂ, ತಮ್ಮ ಅಂತರಂಗ ಮಿತ್ರರಾದ ಅಷ್ಟಗ್ರಾಮ ಡಿವಿಜನ್ ಸೂಪರಿಂಟೆಂಡೆಂಟ್ ಮೇಜರ್ ಛಾರ್ಲ್ಸ್ ಎಲಿಯಟ್ ಸಾಹೇಬರವರಿಗೆ ಮಾತ್ರ ಆ ಸಂಗತಿಯನ್ನು ಸೂಚಿಸಿ ಒಂದು ಕಾಗದವನ್ನು ಬರೆದು ತಿಳುಹಿಸಿದುದಲ್ಲದೆ ಮಾರನೆಯ ದಿನ ಪ್ರತ್ಯುಷ್ಟ್ಯಕಾರ ಕಾಲಕ್ಕೆ ತಪ್ಪದೆ ಬರಬೇಕೆಂದೂ ಆಹ್ವಾನಿಸಿದರು.

ಮರುದಿನ ಶ್ರೀಮನ್ಮಹಾರಾಜರವರ ಆಯುರ್ಹೋಮವಿಧಿಯು ಅರಮನೆಯಲ್ಲಿ ನಡೆಯಲಿರುವುದೆಂಬ ವಾರ್ತೆಯು ಒಡನೆ ರಾಜಧಾನಿಯಲ್ಲಿ ಹಬ್ಬಿತು. ಪುರೋಹಿತರೂ ಅಧಿಕಾರಿಗಳೂ ರಾಜಾಜ್ಞೆಯನ್ನನುಸರಿಸಿ ಸಕಲ ಸಾಮಗ್ರಿಗಳನ್ನೂ ಸಿದ್ಧಗೊಳಿಸಿಕೊಂಡಿದ್ದರು. ಮಾರನೆಯ ಪ್ರಾತಃಕಾಲವಾಗುವವೇಳೆಗೆ ಆಹ್ವಾನಿತರಾದ ಅರಸರೂ, ಅಧಿಕಾರಿಗಳೂ, ವಿದ್ವಾಂಸರೂ, ಸುಪ್ರಸಿದ್ಧರಾದ ಸೆಟ್ಟಿಸಾಹುಕಾರರೇ ಮುಂತಾದವರೂ ರಾಜದರ್ಶನಕ್ಕೆ ಯೋಗ್ಯವಾದ ದಿವ್ಯವಸ್ತ್ರ ವಿಭೂಷಿತರಾಗಿ ತಂಡತಂಡವಾಗಿ ನಡೆದು ಬಂದು ಅರಮನೆಯ ಪ್ರಾಸಾದದಲ್ಲಿ ನೆರೆದರು ರಾಜಾಜ್ಞೆಯಂತೆ ಬೇರೆ ಬೇರೆ ಕಚೇರಿಗಳ ಬಕ್ಷಿಯರುಗಳೂ ತಮ್ಮತಮ್ಮ ಸೈನ್ಯಗಳನ್ನು ಕರೆತಂದು ಅರಮನೆಯ ಮುಂದಿನ ಬಯಲಿನಲ್ಲಿ ನಿಲ್ಲಿಸಿಕೊಂಡು ರಾಜಾಜ್ಞೆಯನ್ನು ನಿರೀಕ್ಷಿಸುತ್ತಾ ನಿಂತುಕೊಂಡರು. ಇನ್ನು ಈ ಮಹದುತ್ಸವವನ್ನು ನೋಡಲಿಕ್ಕಾಗಿ ಜನಸಾಮಾನ್ಯರು ಸಹಸ್ರಾರು ಸಂಖ್ಯೆಯಿಂದ ಅರಮನೆಯ ವಿಸ್ತಾರವಾದ ಅಂಗಣದಲ್ಲಿ ನೆರೆದು ಆನಂದಕೋಲಾಹಲಮಾಡುತ್ತಲಿದ್ದರು.— ಹೀಗೆ ಸಕಲವೂ ಸಿದ್ಧವಾಗಿರಲು ಶ್ರೀಮನ್ಮಹಾರಾಜರು ಮಂಗಳಸ್ನಾನ ಮಾಡಿ ಶುಭ್ರವಸ್ತ್ರಧಾರಿಗಳಾಗಿ ಇಷ್ಟದೇವತೆ ಕುಲದೇವತೆಯರ ಸೇವೆ ಮಾಡಿಕೊಂಡು, ಹೋಮ ಕಾರ್ಯವು ನಡೆಯಬೇಕೆಂದು ಗೊತ್ತಾಗಿದ್ದ

ಅಂಬಾವಿಲಾಸವೆಂಬ ವಿಶಾಲವಾದ ಒಂದು ಸಭಾಂಗಣಕ್ಕೆ ದಯಮಾಡಿಸಿದರು ಆ ವೇಳೆಗೇ ಅಲ್ಲಿ ಆಹ್ವಾನಿತರಾದ ಸಕಲರೂ ಸಭೆಸೇರಿ ಮಹಾರಾಜರ ಬರುವನ್ನೇ ನಿರೀಕ್ಷಿಸುತ್ತಿದ್ದು ಅವರು ಒಂದೊಡನೆಯೇ ಜಯಘೋಷಮಾಡಿ ಎದ್ದು ಗೌರವಿಸಿದರು.

ಒಡನೆ ಹೋಮಾದಿಗಳಿಗೆ ಪ್ರಾರಂಭವಾಯಿತು. ಸಭಾಸದರೆಲ್ಲರೂ ಅಂದು ಶ್ರೀಮನ್ಮಹಾರಾಜರವರ ಆಯುರ್ಹೋಮವೆಂಬುದಾಗಿಯೇ ತಿಳಿದಿದ್ದರು. ಸಭೆಯಲ್ಲಿ ಹೋಮಾಂಗವಾದ ಕಾರ್ಯಗಳೆಲ್ಲವೂ ಮುಗಿಯಲು ಮಹಾರಾಜರವರು ಎದ್ದು ಕೈ ಜೋಡಿಸಿಕೊಂಡು ಸಭೆಗೆ ವಂದನೆಮಾಡಿ, ಕಣ್ಣಲ್ಲಿ ನೀರು ತುಂಬಿಕೊಂಡಿರಲು ಸಭೆಯನ್ನುದ್ದೇಶಿಸಿ— 'ಮಿತ್ರರೇ, ಆಪ್ತಬಾಂಧವರೇ, ಮಂತ್ರಿ ಸೇನಾಧೀಶರೇ, ಗೌರವಸ್ಥರಾದ ಪ್ರಜಾಪ್ರಮುಖರೇ, ಸಾವಧಾನದಿಂದ ನಾನು ಹೇಳುವ ಮಾತುಗಳನ್ನು ಲಾಲಿಸಬೇಕು. ನಮ್ಮ ವಂಶವು ಪೂಜ್ಯರಾದ ಯದುರಾಯರು ರಾಜಒಡೆಯರು ಮುಂತಾದ ರಾಜಾಗ್ರಣಿಗಳಿಂದ ಈವರೆಗೆ ಆಳಲ್ಪಟ್ಟು ಈಗ ದುರ್ದೈವಿಯಾದುದರಿಂದ ಪುತ್ರಸಂತಾನವಿಲ್ಲದ ನನ್ನಿಂದ ಕೊನೆಗಾಣುವ ಸ್ಥಿತಿಯು ಪ್ರಾಪ್ತಿಸಿದೆ ಪುರಾತನವಾದ ನಮ್ಮಾ ವಂಶವು ಹಾಗೆ ನಿಸ್ಸಂತಾನವಾಗುವುದರೊಂದಿಗೆ ರಾಜ್ಯವೂ ಪರಾಧೀನವಾಗಿಹೋಗುವುದು. ಮಕ್ಕಳಿಲ್ಲದವರಿಗೆ ಪರಗತಿಯು ದೊರಕದೆಂದು ಶಾಸ್ತ್ರವಾಕ್ಯವುಂಟಲ್ಲವೆ ? ನನಗೆ ಈಗಾಗಲೇ ಎಪ್ಪತ್ತೆರಡು ವರ್ಷ ವಯಸ್ಸಾಯಿತಾದುದರಿಂದ ಇನ್ನು ಸಂತಾನೋದಯವಾಗ ವುದೆಂಬ ಭರವಸೆಯೂ ತಪ್ಪಿದೆ. ಆದುದರಿಂದ ನಮ್ಮ ವಂಶವು ಮುಂದರಿಯುವುದಕ್ಕಾಗಿಯೂ, ರಾಜ್ಯಕ್ಕೊಂದು ದಿಕ್ಕನ್ನು ಕಲ್ಪಿಸಲಿಕ್ಕಾಗಿಯೂ, ಈಗ ನಾನು ದತ್ತು ವಿಧಿಯಿಂದ ಪುತ್ರಸ್ವೀಕಾರಮಾಡಿಕೊಳ್ಳಬೇಕೆಂದು ಸಂಕಲ್ಪಿಸಿದ್ದೇನೆ. ಈ ವಿಚಾರದಲ್ಲಿ ನಿಮ್ಮ ಮನೋಗತ ಅಭಿಪ್ರಾಯವನ್ನು ನಿರ್ಭೀತಿಯಿಂದ ತಿಳಿಯಿಸಬೇಕಲ್ಲದೆ, ಸ್ವೀಕಾರಮಾಡಿಕೊಳ್ಳುವುದು ಯುಕ್ತವೆಂದು ನಿಮಗೆ ತೋರಿದರೆ ಯಾವ ಕುಟುಂಬದ ಬಾಲಕನನ್ನು ಆರಿಸಿಕೊಳ್ಳಬಹುದು ಎಂಬುದನ್ನೂ ಸೂಚಿಸಿರಿ' ಎಂದು ನುಡಿದನು. ಮಹಾರಾಜರವರ ಈ ಮಾತುಗಳು ಕಿವಿಗೆ ಬಿದ್ದೊಡನೆಯೇ ಸಭೆಯಲ್ಲಿದ್ದ ಸಮಸ್ತರೂ ಪುಳಕಾಂಕಿತಗಾತ್ರರಾಗಿ ಕಣ್ಣಲ್ಲಿ ಆನಂದಬಾಷ್ಪವು ಧಾರೆಯಾಗಿ ಸುರಿಯುತ್ತಿ

ರಲು, ಶ್ರೀಮನ್ಮಹಾರಾಜರವರು ಅಗತ್ಯವಾಗಿ ತಮಗೆ ಯೋಗ್ಯವಾದುದೆಂದ ತೋರಿದ ಕುಟುಂಬದಿಂದ ಪುತ್ರನನ್ನು ಆರಿಸಿ ಸ್ವೀಕಾರಮಾಡಿಕೊಳ್ಳಬಹುದು ಎಂದು ಏಕವಾಕ್ಯದಿಂದ ಸಮ್ಮತಿಯನ್ನಿತ್ತರು.

ತರುವಾಯ ಮಹಾರಾಜರವರು ಅಂತಃಪುರಸ್ತ್ರೀಯರು ಕುಳಿತಿದ್ದ ತೆರೆಯೊಳಕ್ಕೆ ಹೋಗಿ, ಅಲ್ಲಿ ಶ್ರೀಮತಿ ದೇವಾಜಮ್ಮಣ್ಣಿಯವರ ತೊಡೆಯ ಮೇಲೆ ಆಡುತ್ತಾ ಕುಳಿತಿದ್ದ ಮಗುವನ್ನು ಎತ್ತಿಕೊಂಡು ಹೊರಕ್ಕೆ ಬಂದರು ದಿವ್ಯವಸ್ತ್ರಾಭರಣ ವಿಭೂಷಿತವಾಗಿ ರಾಜತೇಜದಿಂದ ಒಪ್ಪುತ್ತಿದ್ದ ಆ ಮಗುವನ್ನು ಕಂಡು ಸಭಿಕರೆಲ್ಲರೂ ಕರತಾಡನಾದಿಗಳಿಂದ ತಮ್ಮ ಸಂತೋಷವನ್ನು ವ್ಯಕ್ತಗೊಳಿಸುತ್ತಿರಲು, ಶ್ರೀಮನ್ಮಹಾರಾಜರವರು, ಆ ಮಗುವನ್ನು ಸಭಿಕರಿಗೆ ತೋರಿಸಿ, ಆ ಮಗುವು ಜನಿಸಿದ ಕುಟುಂಬಕ್ಕೂ ತಮ್ಮ ವಂಶಕ್ಕೂ ಇರುವ ಸಮೀಪ ಬಾಂಧವ್ಯವನ್ನೂ, ಆ ಕುಟುಂಬದವರ ಶೀಲ ಸ್ವಭಾವಗಳನ್ನೂ ವರ್ಣಿಸಿ ಹೇಳಿ, ಸಕಲ ಶುಭಲಕ್ಷಣಗಳಿಂದಲೂ, ಒಪ್ಪುತ್ತಿರುವ ಆ ಮಗುವನ್ನು ಪುತ್ರತ್ವೇನ ಸ್ವೀಕಾರಮಾಡಬಹುದೇ ಎಂದು ಸಭೆಯವರ ಅನುಜ್ಞೆಯನ್ನು ಕೇಳಿದರು. ಸಭೆಯವರು 'ತಥಾಸ್ತು'ಎಂದು ಸಮ್ಮತಿಯನ್ನೀಯಲು, ಮಹಾರಾಜರು, ಆ ಮಹಾಜನ ವಾಕ್ಯವನ್ನೇ ಜನಾರ್ದನನ ವಾಕ್ಯವೆಂದು ಭಾವಿಸಿ, ಒಡನೆ ವಿಧ್ಯುಕ್ತವಾದ ಹೋಮಾದಿಕರ್ಮಗಳಿಗೆ ಪ್ರಾರಂಭಿಸಿದರು. ಸಕಲ ಕರ್ಮಗಳೂ ಲೇಶಮಾತ್ರವೂ ಲೋಪವಿಲ್ಲದೆ ಸಾಂಗವಾಗಿ ನೆರವೇರಿದುವು. ಆ ವೇಳೆಗೆ ಮಹಾರಾಜರವರ ಆಹ್ವಾನವನ್ನು ಸ್ವೀಕರಿಸಿ ಅಲ್ಲಿಗೆ ಬಂದಿದ್ದ ಮೇಜರ್ ಎಲಿಯಟ್ ಸಾಹೇಬರನ್ನು ಕುರಿತು ತಾವು ಅಷ್ಟು ಕಾಲದವರೆಗೂ ಅಪುತ್ರವಂತರಾದುದರಿಂದ ಮುಂದೆ ತಮ್ಮ ವಂಶೋದ್ಧಾರಕ್ಕಾಗಿಯೂ, ಹಿಂದಿನ ಇಪ್ಪತ್ತೂರು ತಲೆಗಳಿಂದಲೂ ನಡೆದುಬಂದ ತಮ್ಮ ಸಂಸ್ಥಾನದ ರಾಜಪೀಠಕ್ಕೆ ಒಂದು ವಾರಸನ್ನು ಕಲ್ಪಿಸುವ ನಿಮಿತ್ತವಾಗಿಯೂ, ಅಂದು ಸಕಲರ ಸಮ್ಮತಿಯಿಂದಲೂ ಶಾಸ್ತ್ರ ವಿಧಿಯನ್ನು ಮೀರದೆಯೂ ದತ್ತು ಸ್ವೀಕಾರಮಾಡಿಕೊಂಡಿದ್ದೇವೆಂದೂ ಅದನ್ನು ಶ್ರೀ ವಿಕ್ಟೋರಿಯಾ ಮಹಾರಾಜ್ಞೀಯವರು ೧೮೬೮ ನೆಯ ಸಂವತ್ಸರದಲ್ಲಿ ದಯೆಪಾಲಿಸಿದ ಪ್ರಸಿದ್ಧಪತ್ರಿಕೆಯ ವಾಗ್ದಾನವನ್ನನುಸರಿಸಿ ಪರಿಪಾಲಿಸಿ, ತಮ್ಮ ರಾಜವಂಶಕ್ಕೆ ಕುಲಪರಂಪರೆಯಾಗಿ ನಡೆದು ಬಂದ ಸಕಲ

ಮರ್ಯಾದೆಗಳನ್ನೂ ರಾಜತ್ವವನ್ನೂ ತಮ್ಮ ಆ ಸ್ವೀಕೃತಪುತ್ರನಿಗೆ ನಡೆಯಿಸಿಕೊಂಡು ಬರುವಂತೆ, ಸಭೆಯಲ್ಲಿದ್ದು ಈ ಎಲ್ಲಾ ವಿಚಾರಗಳನ್ನೂ ಪ್ರತ್ಯಕ್ಷವಾಗಿ ನೋಡಿದ ಅವರು, ಅದನ್ನೆಲ್ಲಾ ಬ್ರಿಟಿಷ್ ರೆಸಿಡೆಂಟರಿಗೂ ತನ್ಮೂಲಕ ಬ್ರಿಟಿಷ್ ಸರ್ಕಾರಕ್ಕೂ ತಿಳಿಸಿ ಸಹಾಯಮಾಡಬೇಕೆಂದೂ ಕೇಳಿಕೊಂಡರು. ತರುವಾಯ ಮಿಕ್ಕ ಸಕಲ ಕರ್ಮಗಳೂ ಸಾಂಗವಾಗಿ ನೆರವೇರಿದುವು. ಆ ಶುಭಕಾರ್ಯದ ಜ್ಞಾಪಕಾರ್ಥವಾಗಿ ಇಪ್ಪತ್ತೊಂದು ತೋಪುಗಳಾದುವು. ಸಕಲ ಮಂಗಳವಾದ್ಯಗಳೂ ಭೋರ್ಗರೆದುವು. ವಿಪ್ರರು ಮಂಗಳಕರಗಳಾದ ವೇದಘೋಷಮಾಡಿದರು. ನೆರೆದ ಸಕಲರೂ ಜಯ ಜಯಕಾರಮಾಡಿದರು. ಸ್ತ್ರೀಯರು ಪುಷ್ಪಾಂಜಲಿಗಳನ್ನು ಚಿಕ್ಕಮಹಾರಾಜರಮೇಲೆರೆಚಿ ತಮ್ಮ ಉತ್ಸಾಹಾತಿಶಯವನ್ನೂ ಆನಂದಾತಿಶಯವನ್ನೂ ಸೂಚಿಸಿದರು. ಆ ಸಂತೋಷದ ಜ್ಞಾಪಕಾರ್ಥವಾಗಿ ಮಹಾರಾಜರು, ಅನೇಕ ಬಗೆಯ ದಾನಧರ್ಮಗಳನ್ನು ಮಾಡಿದ್ದಲ್ಲದೆ, ಭಂಡಿಭಂಡಿಗಳಲ್ಲಿ ಸಕ್ಕರೆಯನ್ನು ತುಂಬಿಸಿ ಊರಲ್ಲೆಲ್ಲ ಹಂಚಿಸಿದರು ತರುವಾಯ ಚಿಕ್ಕ ಮಹಾರಾಜರನ್ನು ಚಿನ್ನದ ಪಾಲಕಿಯಲ್ಲಿ ಕೂರಿಸಿ ಕೋಟೆಯ ಮುಖ್ಯ ಮುಖ್ಯ ಬೀದಿಗಳಲ್ಲೆಲ್ಲ ಮೆರೆವಣಿಗೆ ಮಾಡಿಸಿದರು. ಸಕಲರಿಗೂ ಅವರವರ ಸ್ಥಾನಮಾನಗಳನ್ನನುಸರಿಸಿ, ಗಂಧಪುಷ್ಪತಾಂಬೂಲಾದಿಗಳು ಸಮರ್ಪಿಸಲ್ಪಟ್ಟುವು. ಸಕಲರೂ ಆ ಮಹೋತ್ಸವದ ವಿಚಾರವನ್ನೇ ಮನಸಾರೆ ವರ್ಣಿಸಿಕೊಳ್ಳುತ್ತ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಆ ದಿನದಿಂದ ಮುಂದೆ ಮೂರು ದಿನಗಳವರಿಗೆ ಬ್ರಾಹ್ಮಣರಿಗೂ ಇತರ ವರ್ಣಗಳವರಿಗೂ ಅಗಾಧ ಅನ್ನಸಂತರ್ಪಣೆಗಳು ನಡೆದುವು. ಸಕಲರೂ, ದಿವ್ಯಭಕ್ಷಭೋಜ್ಯಗಳನ್ನು ಮನಸಾರೆ ಭುಜಿಸಿ ತೃಪ್ತರಾಗಿ ನೂತನ ರಾಜಪುತ್ರರೂ, ರಾಜಕುಟುಂಬವೂ ಆಚಂದ್ರಾರ್ಕವಾಗಿ ಶ್ರೇಯೋವಂತರಾಗಿರಲೆಂದು ಹರಸಿದರು. ಶ್ರೀಮನ್ಮಹಾರಾಜರವರು ಆ ದಿನ ಮಧ್ಯಾಹ್ನವೇ, ತಮ್ಮ ಆಪ್ತಮಂತ್ರಿಗಳೊಂದಿಗೆ ಏಕಾಂತವಾಗಿ ಯೋಚಿಸಿ ಬ್ರಿಟಿಷ್ ಸರ್ಕಾರದ ಅವಗಾಹನೆಗಾಗಿ ಒಂದು ಮನವಿಯನ್ನು ಬರೆಸಿದರು ತಾವು ದತ್ತು ವಿಧಾನವನ್ನನುಸರಿಸಿ ಪುತ್ರಸ್ವೀಕಾರಮಾಡಿರುವ ವಿಷಯವನ್ನೆಲ್ಲ ಸಂಪೂರ್ಣವಾಗಿ ಅದರಲ್ಲಿ ಕಾಣಿಸಿ, ಅದನ್ನು ಬ್ರಿಟಿಷ್ ಸರ್ಕಾರ

ದವರು ಮಾನ್ಯಮಾಡಿ, ತಮಗೆ ಚಿಕ್ಕಂದಿನಲ್ಲಿ ರಾಜ್ಯಪಟ್ಟಾಭಿಷೇಕಮಾಡಿ ವಂಶೋದ್ಧಾರಮಾಡಿದಂತೆಯೇ, ತಮ್ಮ ಆ ಪುತ್ರರನ್ನೂ ಪ್ರವರ್ಧಮಾನಕ್ಕೆ ತಂದು ರಾಜ್ಯದಲ್ಲಿ ಪಟ್ಟಾಭಿಷಿಕ್ತರನ್ನಾಗಿ ಮಾಡಿ ಯಶೋವಂತರಾಗಬೇಕೆಂದು ಅದರಲ್ಲಿ ಕೋರಿಕೊಂಡರು. ಈ ವಿಸ್ತಾರವಾದ ವಿಜ್ಞಾಪನಾಪತ್ರಿಕೆಯಲ್ಲದೆ, ದತ್ತು ಸ್ವೀಕಾರವಿಚಾರವನ್ನು ಕುರಿತು ಆ ದಿನ ಮಧ್ಯಾಹ್ನವೇ ವೈಸರಾಯಿಯವರಿಗೂ ಮತ್ತು ಇಂಡಿಯಾಸ್ಟೇಟ್ ಸೆಕ್ರಿಟರಿಯವರಿಗೂ ತಂತೀಸಮಾಚಾರಗಳನ್ನೂ ಕಳುಹಿಸಿದರು. ದತ್ತು ಸ್ವೀಕಾರದ ಸಂತೋಷವಾರ್ತೆಯು ಸಂಸ್ಥಾನದಲ್ಲೆಲ್ಲ ವಿದ್ಯುದ್ವೇಗದಿಂದ ವ್ಯಾಪಿಸಿತು. ಸಕಲರೂ ಆ ಶುಭ ವಾರ್ತೆಯನ್ನು ಕೇಳಿ ಪರಮಾನಂದ ಭರಿತರಾದರು.



## ಅಧ್ಯಾಯ ೩ "ಪಟ್ಟಾಭಿಷೇಕ ಮಹೋತ್ಸವ"

ಮನುಷ್ಯಪ್ರಾಣಿಗೆ ಸಂತೋಷವೂ ವ್ಯಸನವೂ ಸಮುದ್ರದ ತೆರೆಗಳಂತೆ ಒಂದಾದಮೇಲೊಂದರಂತೆ ತಪ್ಪದೆ ಬರುತ್ತಿರುವುವು ಇಂದು ಪುತ್ರೋತ್ಸವವೋ ವಿವಾಹವೋ ಎಂಬ ಕಾರಣದಿಂದ ಸಕಲವಿಧ ಸಂತೋಷಗಳಿಗೂ ನೆಲೆವೀಡೆನ್ನಿಸಿಕೊಂಡಿದ್ದ ಮನೆಯು ನಾಳೆಯೇ ಸ್ಮಶಾನವೋ ಎಂಬಂತೆ ಶೋಭಾಹೀನವೂ ದುಃಖಭಾಜನವೂ ಆಗುವುದು. ಇಂದು ಸುಖಕ್ಕಾಗಿ ಹಿಗ್ಗಿದ ಮನುಷ್ಯನು ನಾಳೆ ದುಃಖದಿಂದ ತಗ್ಗದಿರುವನೆಂಬುವಕ್ಕೆ ಆಧಾರವೇನೂ ಇಲ್ಲ. ಈ ಸುಖ ಅಥವ ದುಃಖಗಳು ವ್ಯಕ್ತಿಯ ಐಶ್ವರ್ಯ ಬಡತನಗಳನ್ನನುಸರಿಸಿಯಲ್ಲ - ಅವನವನು ಪೂರ್ವಾರ್ಜಿತಕರ್ಮಾನುಸಾರವಾಗಿ ಪ್ರಾಪ್ತಿಸುವುದು. ಪ್ರಾಜ್ಞರು ಅದಕ್ಕಾಗಿ ಉಬ್ಬುವುದೂ ಇಲ್ಲ. ತಗ್ಗುವುದೂ ಇಲ್ಲ ಅಲ್ಪರು ಸ್ವಲ್ಪ ಸುಖವುಂಟಾಯಿತೆಂದೊಡನೆ ತಮ್ಮ ಸಮಾನ ಭಾಗ್ಯಶಾಲಿಗಳೇ ಇಲ್ಲವೆಂದು ಮೈಮರೆತು ಮೆರೆಯುವರು ಹಾಗೆಯೇ ಸ್ವಲ್ಪ ದುಃಖವುಂಟಾಯಿತೆಂದೊಡನೆ ಧರೆಗಿಳಿದು ವ್ಯಸನವಾರಿಧಿಯಲ್ಲಿ ಮುಳುಗಿಹೋಗುವರು.

ಪುತ್ರಸ್ವೀಕಾರ ವಿಚಾರದ ವಿಸ್ತಾರವಾದ ವರದಿಯು ವೈಸರಾಯಿಯವರಿಗೂ ಇಂಡಿಯಾ ಸ್ಟೇಟ್‌ಸೆಕ್ರೆಟರಿಯವರಿಗೂ ಕಳುಹಿಸಲ್ಪಟ್ಟಿದ್ದಿತಷ್ಟೆ! ಅದಕ್ಕೆ ಮುಂದೆ ಕೆಲವು ದಿನಗಳಲ್ಲೇ ಪ್ರತ್ಯುತ್ತರ ಬಂತು. ಅದರಲ್ಲಿ, ಮಹಾರಾಜರಿಂದ ಸ್ವೀಕೃತರಾದ ಪುತ್ರರು, ಅವರ ಸ್ವಂತ ಆಸ್ತಿಗೆ ಮಾತ್ರವೇ ಬಾಧ್ಯರಾಗುವುದಲ್ಲದೆ, ರಾಜ್ಯಾಧಿಪತ್ಯಕ್ಕೆ ಅರ್ಹರಾಗಲಾರರು ಎಂದಿತ್ತು. ಆ ವಾರ್ತೆಯು ಮಹಾರಾಜರಿಗೆ ಸಿಡಿಲುಬಡಿದಂತೆ ಕೇಳಿಸಿತು ರಾಜಭಕ್ತರಾದ ಪ್ರಜೆಗಳೆಲ್ಲರೂ ಆ ವಾರ್ತೆಯನ್ನು ಕೇಳಿ ದಿಕ್ಕು ತೋರದಂತಾದರು. ಕೊನೆಗೆ ಚಿಂತಿಸಿ ಪ್ರಯೋಜನವಿಲ್ಲವೆಂದುಕೊಂಡು. ರಾಜಧಾನಿಯ ಮಹಾಜನಗಳನ್ನೊಳಗೊಂಡ ದೊಡ್ಡದೊಂದು ಸಭೆಯನ್ನು ನೆರೆಯಿಸಿ, ಅದಕ್ಕೆ ನಾನಾಭಾಯಿ ನಸರ್‌ವಾಂಜೀ ಎಂಬೊಬ್ಬ ಪಾರ್ಸಿ ದೊಡ್ಡಮನುಷ್ಯರನ್ನು ಅಧ್ಯಕ್ಷರನ್ನಾಗಿ ಆರಿಸಿಕೊಂಡು ಅದರಲ್ಲಿ- ಮೈಸೂರು ರಾಜವಂಶದ ಪ್ರಾಚೀನತೆಯನ್ನೂ ಅದನ್ನು ಗೌರವಿಸಿ ೧೭೯೯ ನೆಯ ಸಂವತ್ಸರದಲ್ಲಿ ರಾಜ್ಯವನ್ನು ಆ ವಂಶಕ್ಕೇ ವಹಿಸಿಕೊಟ್ಟು ಅದನ್ನು ಜೀರ್ಣೋದ್ಧಾರಗೊಳಿಸಿದ ಬ್ರಿಟಿಷ್ ಸರ್ಕಾರದವರ ಔದಾರ್ಯವನ್ನೂ, ೧೮೫೮ನೆಯ ಸಂವತ್ಸರದಲ್ಲಿ ಕೊಟ್ಟ ವಿಕ್ಟೋರಿಯಾ ಮಹಾರಾಣಿಯವರ ಪ್ರಸಿದ್ಧಪತ್ರಿಕೆಯನ್ನೂ, ಅದನ್ನನುಸರಿಸಿ, ಉತ್ತಮವಾದ ರಾಜ್ಯಭಾರವನ್ನು ಸ್ಥಾಪಿಸುವುದಕ್ಕಾಗಿ ಮಾತ್ರ ವಹಿಸಿಕೊಂಡ ಈ ರಾಜ್ಯವನ್ನು ಈಗ ಹಿಂದಿರುಗಿ ಅದರ ಹಕ್ಕುದಾರರಿಗೆ ವಹಿಸಿಕೊಡಬೇಕಾದುದರ ಔಚಿತ್ಯವನ್ನೂ ಉದಹರಿಸಿ ದೊಡ್ಡದೊಂದು ಮನವಿಯನ್ನು ಬರೆದು, ಅದಕ್ಕೆ ೭೩೪೫ ಜನರ ಕೈಬರಹಗಳನ್ನು ಹಾಕಿಸಿ ಅದನ್ನೂ, ಅದರಂತೆಯೇ ಮತ್ತೊಂದು ಪ್ರಾರ್ಥನಾಪತ್ರಿಕೆಯನ್ನು ಬರೆದು ಅದಕ್ಕೆ ಮೈಸೂರು ಹಾಸನ ಶಿವಮೊಗ್ಗಾ ಕಡೂರು ತುಮಕೂರು ಜಿಲ್ಲಾಗಳ ಪ್ರಜೆಗಳ ಕೈಬರಹಗಳನ್ನು ಮಾಡಿಸಿ ಅದನ್ನೂ ಮೇಲಕ್ಕೆ ಕಳುಹಿಸಿದರು. ಅದಕ್ಕೂ ಸಕಾಲದಲ್ಲಿ ಯಾವ ಪ್ರತ್ಯುತ್ತರವೂ ಬರಲಿಲ್ಲ. ಪುತ್ರಸ್ವೀಕಾರವು ಬ್ರಿಟಿಷ್ ಸರ್ಕಾರದವರಿಂದ ಅಂಗೀಕೃತವಾಗುವುದೋ ಇಲ್ಲವೋ ಎಂಬ ಶಂಕೆಯು ಎಲ್ಲರನ್ನೂ ಬಾಧಿಸತೊಡಗಿತು. ಈ ಪ್ರಶ್ನೆಯು ಪಾರ್ಲಿಮೆಂಟಿನ ಹೌಸ್ ಆಫ್ ಕಾಮನ್ಸ್ ಸಭೆಯಲ್ಲಿ ವಿಮರ್ಶೆಗೆ ಬರುವಂತೆ ಬೇಕಾದ ಪ್ರಯತ್ನಗಳನ್ನೆಲ್ಲ ಮಾಡಿದರೂ ಅದಕ್ಕೂ ಏನೂ ಪ್ರಯೋಜನವಾಗಲಿಲ್ಲ.

ಕೊನೆಗೆ ೧೮೬೪ ನೆಯ ಸಂವತ್ಸರದಲ್ಲಿ ಶ್ರೀಕೃಷ್ಣರಾಜ ಒಡೆಯರವರು ಮದರಾಸಿನಲ್ಲಿ ಬ್ಯಾರಿಸ್ಟರಾಗಿದ್ದ ಜಾರ್ಜ ಡಾಸನ್ ನೋರ್ಟ ಎಂಬ ಐರೋಪ್ಯರನ್ನು ಕರೆಸಿ ಅವರಿಂದ ಮೈಸೂರು ರಾಜವಂಶಕ್ಕೆ ಈ ಸಂಸ್ಥಾನದಮೇಲಿರುವ ಹಕ್ಕುದಾರಿಯನ್ನೂ ಬ್ರಿಟಿಷ್ ಸರ್ಕಾರದ ವಿಷಯದಲ್ಲಿ ಈ ಸಂಸ್ಥಾನವು ನಡೆಯಿಸಿಕೊಂಡುಬಂದ ರಾಜಭಕ್ತಿ ವಿಶ್ವಾಸವನ್ನೂ ಕಾಣಿಸಿ ಒಂದು ದೊಡ್ಡ ಮನವಿಯನ್ನು ಬರೆಯಿಸಿದರು. ಅದನ್ನು ಮಹಾರಾಜರವರ ಮಿತ್ರರಾದ ಡಾ ಕ್ಯಾಂಬಲ್ ಎಂಬುವರು ಸ್ವಂತವಾಗಿ ಪಾರ್ಲಿಮೆಂಟ್ ಸಭೆಗೆ ಅರ್ಪಿಸಬೇಕೆಂದು ತೆಗೆದುಕೊಂಡು ಹೊರಟರು. ಮಾತ್ರವಲ್ಲ ಮಾರನೆಯ ವರ್ಷ ಮೇಲ್ಕಂಡ ಬ್ಯಾರಿಸ್ಟರ್ ನೋರ್ಟ ಸಾಹೇಬರು ಇಂಗ್ಲೆಂಡಿಗೆ ಪ್ರಯಾಣಹೊರಟಾಗ್ಗ್ಯ, ಅವರೂ ಆಗ ಇಂಡಿಯಾ ವೈಸರಾಯ್‌ಯವರ ಲೆಜಿಸ್ಲೆಟಿವ್ ಸಭೆಯಲ್ಲಿ ಮೆಂಬರಾಗಿದ್ದ ಆನರೆಬಲ್ ಹೆನ್ರಿಸಮ್ನರ್‌ಮೇನ್ ಸಾಹೇಬರೂ ಒಂದೇ ಹಡಗಿನಲ್ಲಿ ಪ್ರಯಾಣಮಾಡುವ ಸೌಕರ್ಯ ಒದಗಿತು. ಆ ಸಂದರ್ಭದಲ್ಲಿ ಬ್ಯಾರಿಸ್ಟರ್ ನೋರ್ಟವರು ಮೈಸೂರಿನ ರಾಜಕೀಯ ವಿಚಾರವನ್ನು ಅವರೊಂದಿಗೆ ವಿಸ್ತಾರವಾಗಿ ಚರ್ಚಿಸಿ ರಾಜವಂಶವನ್ನು ಜೀರ್ಣೋದ್ಧಾರಗೊಳಿಸುವ ವಿಷಯದಲ್ಲಿ ಅವರ ಮನಸ್ಸಿನಲ್ಲಿ ಅಭಿಮಾನ ಹುಟ್ಟುವಂತೆ ಮಾಡಿದರು.

ಇಷ್ಟು ಬಗೆಯಿಂದ ಪ್ರಯತ್ನಿಸಿದರೂ ಮುಂದೆ ಒಂದೆರಡು ವರ್ಷಗಳವರೆಗೆ ಯಾವ ಇತ್ಯರ್ಥವೂ ಆಗಲೇ ಇಲ್ಲ. ಕೊನೆಗೆ ೧೮೬೬ ನೆಯ ವರ್ಷದಲ್ಲಿ ಸರ್ ಹೆನ್ರಿ ರಾಲಿನ್‌ಸನ್ ಸಾಹೇಬರೆಂಬುವರು, ಆಗ ಸ್ಟೇಟ್ ಸೆಕ್ರಿಟೆರಿಯವರಾಗಿದ್ದ ಲಾರ್ಡ್ ಕ್ರ್ಯಾನ್‌ಬೋರ್ನ ಎಂಬವರ ಬಳಿಗೆ ಹೋಗಿ ಶ್ರೀಕೃಷ್ಣರಾಜ ಒಡೆಯರವರ ಪರವಾಗಿ ವಾದಿಸಿ, ಈ ಸಂಸ್ಥಾನವು ಪೂರ್ವ ರಾಜಮನೆತನಕ್ಕೆ ದಕ್ಕುವಂತೆ ಮಾಡಿಕೊಡಬೇಕೆಂದು ತಿಳಿಸಿದರು. ಇವರಂತೆಯೇ ಜಾರ್ಜ ಸ್ಟ್ಯುಯರ್ಟ್ ಮಿಲ್ ಸಾಹೇಬರೂ ಒಂದು ಮನವಿಯನ್ನು ಬರೆದು ಅದಕ್ಕೆ ಹಿಂದೂದೇಶದಲ್ಲಿ ದೊಡ್ಡದೊಡ್ಡ ಅಧಿಕಾರಗಳನ್ನು ಮಾಡಿ ಇಂಗ್ಲೆಂಡಿನಲ್ಲಿ ವಿಶ್ರಾಂತಿಗೊಳ್ಳುತ್ತಿದ್ದ ಹಲವು ಮಂದಿ ಐರೋಪ್ಯರ ಕೈಬರಹ ಮಾಡಿಸಿ ಅದನ್ನೂ ಪಾರ್ಲಿಮೆಂಟ್ ಸಭೆಗೆ ಒಪ್ಪಿಸಿದರು. ಈ ಎಲ್ಲಾ ಪ್ರಯತ್ನಗಳ ಫಲವಾಗಿ ೧೮೬೭ನೆಯ ಏಪ್ರಿಲ್

ತಿಂಗಳಲ್ಲಿ ಈ ಪ್ರಶ್ನೆಯು ಮುಮುಖವಾಯಿತು. ಆ ತಿಂಗಳು ೧೬ನೆಯ ತಾರೀಖಿನ ದಿನ ಆಗಿನ ಸ್ಟೇಟ್ ಸೆಕ್ರಿಟರಿಯಾಗಿದ್ದ ಸರ್ ಸ್ಟ್ಯಾಫರ್ಡ್ ನಾರ್ತ್‌ಕೋಟ್ ಎಂಬುವರು ಹಿಂದೂದೇಶದ ವೈಸರಾಯರಿಗೆ ಒಂದು ಲೇಖನವನ್ನು ಬರೆಸಿ ಕಳಹಿಸಿದರು. ಅದರಲ್ಲಿ-'ಶ್ರೀಕೃಷ್ಣರಾಜ ಒಡೆಯರಿಗೆ ರಾಜ್ಯವನ್ನು ಸ್ವಾಧೀನಪಡಿಸುವ ವಿಷಯದಲ್ಲಿ ಹಿಂದೆ ಮಾಡಿರುವ ತೀರ್ಮಾನವನ್ನು ಈಗ ಬದಲಾಯಿಸಲಾಗುವುದಿಲ್ಲ. ಆದರೆ ದತ್ತುಪುತ್ರಸ್ವೀಕಾರವನ್ನು ಮಾತ್ರ ಅಂಗೀಕಾರಮಾಡಿ, ರಾಜಪುತ್ರರು ಯುಕ್ತವಯಸ್ಕರಾದ ತರುವಾಯ ಸಿಂಹಾಸನವನ್ನು ಅವರಿಗೆ ವಹಿಸಿ ರಾಜ್ಯವನ್ನು ಕಾಪಾಡಿಕೊಂಡುಬರಲಾಗುವುದು' ಎಂದು ಬರೆದಿದ್ದರು. ಅಲ್ಲದೆ ಅವರಿಗೆ ಬಾಲಮಹಾರಾಜರು ಮುಂದೆ ಸಿಂಹಾಸನಕ್ಕೂ ಪ್ರಜಾಪಾಲನೆಗೂ ತಕ್ಕ ಶಕ್ತಿ ಸಾಮರ್ಥ್ಯಗಳನ್ನು ಸಂಪಾದಿಸಲು ಯೋಗ್ಯವಾದ ವಿದ್ಯಾಬುದ್ಧಿಗಳನ್ನು ಅವರಿಗೆ ಕಲಿಸಬೇಕೆಂದೂ, ಅವರು ಯುಕ್ತವಯಸ್ಕರಾಗುವುದಕ್ಕೆ ಮುಂಚಿತವಾಗಿಯೇ ವೃದ್ಧರಾಜರು ಕಾಲವಶರಾದರೆ. ಆ ಸಂದರ್ಭದಲ್ಲಿ ರಾಜ್ಯಭಾರವು ಈಗಿನಂತೆಯೇ ನಡೆಯುತ್ತಿದ್ದು ತರುವಾಯ ಅವರಿಗೆ ವಯಸ್ಸು ಪ್ರಾಪ್ತವಾಗಿ ವಹಿಸಿಕೊಡಬೇಕಾದಾಗ್ಗೆ ಪ್ರಜೆಗಳಿಗೆ ಯಾವ ಕೊರತೆಯೂ ಉಂಟಾಗದಂತೆಯೂ, ಬ್ರಿಟಿಷ್ ರಾಜ್ಯಭಾರಕ್ಕೆ ಹಿತವಾಗಿರುವಂತೆಯೂ, ಪೊಗದಿಯನ್ನು ಸ್ವಲ್ಪ ಹೆಚ್ಚಿಸುವಂತೆಯೂ ಬೇಕಾದ ಏರ್ಪಾಡುಗಳನ್ನೆಲ್ಲ ಮಾಡಲು ಸೂಚನೆಗಳೂ ಇದ್ದುವು.

ಅಷ್ಟು ದಿನಗಳ ಅಗಾಧ ಪ್ರಯತ್ನವು ಆ ರೂಪವಾಗಿ ಫಲೋನ್ಮುಖವಾದುದು ಮಹಾರಾಜರಿಗೆ ಒಂದು ಬಗೆಯಿಂದ ಸಂತೋಷಪ್ರದವಾಯಿತಾದರೂ, ತಾವು ಪುನಃ ಸಿಂಹಾಸನಾರೋಹಣಮಾಡಿ ರಾಜ್ಯಭಾರಮಾಡುವ ಯೋಗ ಒದಗಲಿಲ್ಲವಲ್ಲಾ ಎಂಬ ಕೊರತೆಯು ಮನಸ್ಸಿನಲ್ಲಿ ಇದ್ದೇ ಇತ್ತು. ಆದರೂ ತಪ್ಪಿಹೋಗಿದ್ದ ರಾಜ್ಯಾಧಿಪತ್ಯವು ತಮ್ಮ ವಂಶೀಕರಿಗಾದರೂ ದೊರೆಯಿತಲ್ಲಾ, ತಮ್ಮ ಚಿರಂಜೀವಿಯು ರಾಜ್ಯಾಧಿಕಾರಮಾಡಬಹುದಲ್ಲಾ ಎಂಬ ಒಂದು ಸಮಾಧಾನವನ್ನು ತಂದುಕೊಂಡು ಚಿಕ್ಕ ಮಹಾರಾಜರ ಬಾಲಲೀಲಾ ವಿನೋದಗಳನ್ನು ನೋಡಿಕೊಳ್ಳುತ್ತಾ ಸಂತೋಷದಿಂದ ಕಾಲಯಾಪನೆ ಮಾಡುತ್ತಿದ್ದರು.

ದತ್ತು ಪುತ್ರರಾದ ಚಾಮರಾಜ ಒಡೆಯರಲ್ಲಿ ವೃದ್ಧರಾಜರಿಗೆ ಅತಿಶಯ ಪ್ರೇಮವಿದ್ದಿತು. ಚಿಕ್ಕ ಮಹಾರಾಜರನ್ನು ದಿನಕ್ಕೆ ಒಂದೆರಡು ವೇಳೆ ದೊಡ್ಡ ಅರಮನೆಗೆ ಅವ್ವೆಯರು ಕರೆದೊಯ್ಯುತ್ತಿದ್ದರು. ಆಗ ಮಹಾರಾಜರು ದಿವ್ಯ ಸುಂದರ ವಿಗ್ರಹದ ಆ ಮಗುವನ್ನು ಎತ್ತಿಕೊಂಡು ಮುದ್ದಾಡಿ, ಆಡಿಸಿ ವಿನೋದವಾಡಿ, ಪುನಃ ಚಿಕ್ಕ ಅರಮನೆಗೆ ಕಳುಹಿಸಿ ಕೊಡುತ್ತಿದ್ದರು. ಚಿಕ್ಕ ಮಹಾರಾಜರ ಆ ವಯಸ್ಸಿಗೆ ಮೀರಿದ ಧೈರ್ಯ ಸ್ಥೈರ್ಯ ತೇಜಸ್ವಿತೆಗಳೂ, ಸ್ಫುಟಭಾಷಣವೂ ಮಹಾರಾಜರಿಗೂ ಸುತ್ತು ಮುತ್ತಲೂ ಇದ್ದವರಿಗೂ ಪರಮಾನಂದವನ್ನುಂಟುಮಾಡುತ್ತಿದ್ದುವು. ಮಹಾರಾಜರು ಮುಂದೆ ದುಷ್ಟ ಶಿಕ್ಷಣೆ ಶಿಷ್ಟ ರಕ್ಷಣಾದಿಗಳಿಗೆ ತಮ್ಮಾಗುವವರು ಯೋಗ್ಯವಾಗಲು ಅವರಿಗೆ ಉತ್ತಮ ರೀತಿಯಿಂದ ರಾಜಕೀಯ ವಿದ್ಯಾಭ್ಯಾಸವಾಗಬೇಕಾದುದು ಅತ್ಯಾವಶ್ಯಕವೆಂಬುದನ್ನು ಕಂಡು, ಅದಕ್ಕೆ ತಕ್ಕ ಅನುಕೂಲತೆಗಳನ್ನು ಕಲ್ಪಿಸಿ ಇನ್ನು ಧನ್ಯನಾದೆನೆಂದುಕೊಳ್ಳುತ್ತಿದ್ದರು.

ದತ್ತು ಸ್ವೀಕಾರವಾಗಿ ಇನ್ನೂ ಮೂರುವರ್ಷಗಳು ಸಹ ಆಗಿರಲಿಲ್ಲ. ಚಿಕ್ಕ ಮಹಾರಾಜರಿಗೆ ಇನ್ನೂ ಐದು ವರ್ಷ ಪ್ರಾಯ. ಆ ಸಂದರ್ಭದಲ್ಲೇ ಶ್ರೀಕೃಷ್ಣರಾಜ ಒಡೆಯರಿಗೆ ದೇಹಾಲಸ್ಯವುಂಟಾಯಿತು. ಇನ್ನು ಜೀವಿಸುವುದು ಸಂದೇಹವೆಂದು ಅವರಿಗೆ ಮನವರಿಕೆಯಾಯಿತು. ಆಗ ಅವರು ಚಿಕ್ಕ ಮಹಾರಾಜರನ್ನು ಕರೆಯಿಸಿ ಪಕ್ಕದಲ್ಲೇ ಕೂರಿಸಿಕೊಂಡು ಪಟ್ಟದ ಕತ್ತಿ ರಾಜಮುದ್ರಿಕೆಗಳನ್ನು ಆಶೀರ್ವಾದಪೂರ್ವಕ ಅವರ ಕೈಗಿತ್ತು, ಅಂತಃಕರಣವು ಉಕ್ಕಿಬರಲು ಬಾಚಿತಬ್ಬಿಕೊಂಡು ಮುದ್ದಾಡಿ ಕಣ್ಣೀರು ತುಂಬಿ- ಮಂಚದ ಸಮೀಪದಲ್ಲೇ ನಿಂತಿದ್ದ ಬಕ್ಷಿಯರುಗಳನ್ನು ಕುರಿತು— 'ಅಯ್ಯಾ ಆಪ್ತರಿರಾ, ನನ್ನ ಆಯುಸ್ಸು ಮುಗಿದಂತಿದೆ. ಈ ಜನ್ಮದಲ್ಲೇ ಪುನಃ ರಾಜ್ಯಭಾರವಾಡುವ ಲಭ್ಯವಿಲ್ಲದಾಯಿತು. ಚಿಂತೆಯಿಲ್ಲ. ಮುಂದೆ ಈ ಮಗುವಾದರೂ ನಮ್ಮ ಹಿರಿಯರಿಂದ ಸೇವಿಸಲ್ಪಟ್ಟಿದ್ದ ಸಿಂಹಾಸನವನ್ನೇರಿ ಧರ್ಮದಿಂದ ರಾಜ್ಯಭಾರವಾಡುತ್ತ ಪ್ರಜಾರಂಜಕನಾಗಿರಲಿ! ನೀವೆಲ್ಲರೂ ಈ ನಮ್ಮ ಮಗುವಿಗೆ ವಿದ್ಯಾಬುದ್ಧಿಗಳನ್ನು ಕಲಿಸಿ, ರಾಜ್ಯವನ್ನು ಕೊಡಿಸಿ ಸುರಕ್ಷಿತವಾಗಿ ಕಾಪಾಡಿಕೊಂಡು ಬರಬೇಕು" ಎಂದು ನುಡಿದು ಚಿಕ್ಕ ಮಹಾರಾಜರನ್ನು ಬೀಳ್ಕೊಟ್ಟರು. ಮರುದಿನವೇ ಎಂದರೆ

೧೮೬೮ ನೆಯ ಮಾರ್ಚ್ ೨೭ ನೆಯ ದಿನ ಶ್ರೀ ಮುಮ್ಮಡಿ ಕೃಷ್ಣರಾಜಒಡೆಯರು ದಿವಂಗತರಾದರು. ವೃದ್ಧರೂ ಅನುಭವಿಗಳೂ ಧೈರ್ಯೌದಾರ್ಯಗುಣಸಂಪನ್ನರೂ ದೂರದರ್ಶಿಗಳೂ ಆದ ಆ ಮಹನೀಯರ ಮೃತ್ಯುವಿಗಾಗಿ ರಾಜ್ಯದ ಪ್ರಜೆಪರಿವಾರಗಳೂ, ರಾಜಕುಟುಂಬದವರೂ ವ್ಯಸನಸಾಗರದಲ್ಲಿ ಮುಳುಗಿದರೆಂದು ಹೇಳಬೇಕಾದುದೇನು ?—

ವೃದ್ಧ ಮಹಾರಾಜರವರ ಮರಣವಾರ್ತೆಯು ವೈಸರಾಯ್‌ಯವರಿಗೆ ತಿಳಿಯಿತು. ಅವರೂ ವ್ಯಸನವನ್ನು ಸೂಚಿಸಿ, ಬ್ರಿಟಿಷ್ ಸರ್ಕಾರದವರು ಮಹಾರಾಜರವರ ಸ್ವೀಕೃತ ಪೌತ್ರರನ್ನು ರಾಜ್ಯಕ್ಕೆ ಹಕ್ಕುದಾರರೆಂದು ಅಂಗೀಕರಿಸುತ್ತಾರೆಂದೂ, ಆದರೆ ಸದ್ಯಃ ಚಿಕ್ಕರಾಜರು ಬಾಲ್ಯವಯಸ್ಕರಾಗಿರುವುದರಿಂದ, ಮುಂದೆ ಅವರು ವಿದ್ಯಾಬುದ್ಧಿಗಳನ್ನು ಕಲಿತು ೧೮ ವರ್ಷ ವಯಸ್ಸನ್ನು ಹೊಂದಿದನಂತರ, ಪ್ರಜಾಪಾಲನೆಗೆ ತಕ್ಕ ಯೋಗ್ಯತೆಯನ್ನು ಗಳಿಸಿರುವರೆಂದು ಕಂಡುಬಂದರೆ ಒಡನೆಯೇ ಅವರ ರಾಜ್ಯವು ಅವರಿಗೆ ಒಪ್ಪಿಸಲ್ಪಡುವುದೆಂದೂ ಅವರೆಗೆ ಈಗ ನಡೆಯುತ್ತಿರುವಂತೆಯೇ ರಾಜ್ಯಭಾರವು ಚೀಫ್ ಕಮಿಷನರ ಆಡಳಿತದಲ್ಲಿ ನಡೆಯುತ್ತಲಿರುವುದೆಂದೂ ಒಂದು ಪ್ರಸಿದ್ಧಪತ್ರಿಕೆಯನ್ನು ಪ್ರಕಟಗೊಳಿಸಿದರು.

ಮುಮ್ಮಡಿ ಕೃಷ್ಣರಾಜ ಒಡೆಯರ ಉತ್ತರಕ್ರಿಯಾದಿಗಳೆಲ್ಲವೂ ಮುಗಿದು ಬಹುದಿನಗಳೂ, ತಿಂಗಳುಗಳೂ ಕಳೆದುಹೋದುವು. ನವರಾತ್ರಿಯ ಮಹೋತ್ಸವವು ಸಮೀಪಿಸುತ್ತಿದ್ದಿತು. ಆದರೂ ಇನ್ನೂ ಪಟ್ಟಾಭಿಷೇಕಕ್ಕೆ ವೈಸ್‌ರಾಯ್‌ಯವರಿಂದ, ಅನುಜ್ಞಾಪತ್ರವು ಬಂದಿರಲಿಲ್ಲ. ಅದು ರಾಜಭಕ್ತಿಯುತರಾದ ಸಕಲ ಪ್ರಜೆಗಳಿಗೂ, ಮಹಾರಾಜ್ಞೀಯವರಿಗೂ ವಿಶೇಷ ಚಿಂತೆಗೆ ಕಾರಣವಾಯಿತು. ಮಹಾರಾಜ್ಞೀಯವರು,—'ಆ ವಿಚಾರವಾಗಿ ಆಗಾಗ್ಗೆ ಚೀಫ್ ಕಮಿಷನರಿಗೆ ಅರಿಕೆಮಾಡಿಕೊಳ್ಳುತ್ತಿದ್ದರು. ಅಷ್ಟರಲ್ಲಿ ನವರಾತ್ರಿಯ ಮಹೋತ್ಸವವೂ ಪ್ರಾರಂಭವಾಗಿ ಎರಡು ದಿನಗಳು ಕಳೆದುವು. ಆ ವೇಳೆಗೆ ಮಹಾರಾಜರಿಗೆ ಪಟ್ಟಾಭಿಷೇಕ ಮಾಡಬಹುದೆಂದು ವೈಸರಾಯ್‌ಯವರಿಂದ ಆಜ್ಞಾಪತ್ರವು ಬಂದುತಲ್ಪಿತು. ಆ ಶುಭವಾರ್ತೆಯನ್ನು ಎಲಿಯಟ್ ಸಾಹೇಬರು, ಮಹಾರಾಜ್ಞೀಯವರಿಗೆ ತಿಳಿಸಿದರು. ಆ ಸಂತೋಷ ಸಮಾಚಾರವನ್ನು ಕೇಳಿ ಅವರು ಪರಮಾನಂದದಿಂದ ಸಾಧ್ವೀ

ವಾದಷ್ಟು ಶೀಘ್ರವಾಗಿ ಪಟ್ಟಾಭಿಷೇಕ ಮಹೋತ್ಸವವನ್ನು ನಡೆಯಿಸಿಬಿಡಲು ಸಕಲವಿಧ ಏರ್ಪಾಡುಗಳನ್ನೂ ಮಾಡಬೇಕೆಂದು ಆಗ ಅರಮನೆಯ ಮುಖ್ಯಾಧಿಕಾರಿಗಳಾಗಿದ್ದ ಶ್ರೀಮಾನ್ ರಂಗಾಚಾರ್ಯರವರಿಗೆ ನಿಯಮಿಸಿದರು ಅರಮನೆಯೂ, ನಗರವೂ ಚಪ್ಪರ ತೋರಣ ಮೇಲ್ಕಟ್ಟುಗಳು, ಪತಾಕೆಗಳು ಮುಂತಾಗಿ ವಿವಿಧ ರೀತಿಯ ಅಲಂಕಾರಗಳಿಂದ ಶೋಭಿಸತೊಡಗಿದುವು. ರಾಜಬೀದಿಗಳೆಲ್ಲವೂ ನೇತ್ರಾನಂದಕರವಾಗಿ ಸಿಂಗರಿಸಲ್ಪಟ್ಟುವು. ವಿಭವನಾಮ ಸಂವತ್ಸರದ ಆಶ್ವಯುಜ ಶುದ್ಧ ೭ ಬುಧವಾರ ಮೂಲಾನಕ್ಷತ್ರದಲ್ಲಿ ಪಟ್ಟಾಭಿಷೇಕ ಮಹೋತ್ಸವವು ನಡೆಯತಕ್ಕದೆಂದು ತೀರ್ಮಾನವಾಗಿ, ಎಲ್ಲಾ ಸ್ಥಳಗಳಿಗೂ ಲಗ್ನ ಪತ್ರಿಕೆಗಳು ಕಳುಹಿಸಲ್ಪಟ್ಟುವು.

ಪಟ್ಟಾಭಿಷೇಕದ ದಿನ ಬೆಳಗಿನಜಾವಕ್ಕೇ ಅರಮನೆಯಲ್ಲಿ ಮಹೋತ್ಸವಗಳಿಗೆ ಆರಂಭವಾಯಿತು. ಮಹಾರಾಜ್ಞಿಯರು ಮಡಿಯುಟ್ಟು ಕುಲದೇವರಿಗೆ ಮುಡುಪನ್ನು ಕಟ್ಟಿಟ್ಟು, ಪಟ್ಟಾಭಿಷೇಕಕ್ಕೆ ಪೂರ್ವಾಂಗವಾಗಿ ಮಹಾರಾಜರಿಗೆ ಎಣ್ಣೆಯಶಾಸ್ತ್ರ ಮಂಗಳಮಜ್ಜನ ಮುಂತಾದುವುಗಳನ್ನು ಮಾಡಿಸಿ ಕುಲದೇವತಾ ಪೂಜೆ ನವಗ್ರಹ ಪೂಜೆ ಮುಂತಾದುವುಗಳೆಲ್ಲವೂ ನಡೆದ ತರುವಾಯ ರಾಜರು ಕುಲಗುರುಗಳಾದ ಪರಕಾಲ ಸ್ವಾಮಿಗಳ ಪಾದಪೂಜೆಮಾಡಿ ಅವರಿಗೆ ಧನಕನಕಾದಿ ದಾನಗಳನ್ನು ಸಮರ್ಪಿಸಿ ಆಶೀರ್ವಾದ ಪಡೆದು ಅಲ್ಲಿಂದ ಹೋಮಶಾಲೆಗೆ ದಯಮಾಡಿಸಿದರು. ಅಲ್ಲಿ ಪುರೋಹಿತರು, ವಿಧ್ಯುಕ್ತವಾಗಿ ನಡೆಯಬೇಕಾದ ಹೋಮಾದಿಗಳನ್ನು ನಡೆಯಿಸಿ, ಗಂಗೆ ಗೋದಾವರಿ ಯಮುನೆ ಕಾವೇರಿ ಮೊದಲಾದ ಪುಣ್ಯನದೀ ಉದಕಗಳಿಂದ ಅಭಿಷೇಕ ಮಾಡಿಸಿ, ಮಾತೃಶ್ರೀಯವರಿಗೆ ಅಭಿವಂದನ ಮಾಡುವುದಕ್ಕಾಗಿ ಅಂತಃಪುರಕ್ಕೆ ಕಳುಹಿಸಿದರು. ಅಲ್ಲಿ ಸ್ತ್ರೀಜನರು, ಮಹಾರಾಜರನ್ನು ದಿವ್ಯವಸ್ತ್ರಾಭರಣಗಳಿಂದ ಸಿಂಗರಿಸಿ ತಲೆಯಲ್ಲಿ ದಿವ್ಯವಾದ ಪಾಗನ್ನಿಟ್ಟು, ನವರತ್ನಾಭರಣಗಳಿಂದ ತಮ್ಮ ದಿವ್ಯಕುಮಾರನನ್ನು ಸಿಂಗರಿಸಿ, ದೃಷ್ಟಿತಾಕೀತೆಂದು ಎರಡು ಕೆನ್ನೆಗಳಿಗೂ ಕಪ್ಪಿನ ರಕ್ಷೆಯನ್ನಿಟ್ಟು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮುದ್ದಾಡಿ ಆಶೀರ್ವಾದಮಾಡಿ ಹೊರಕ್ಕೆ ಅಂಬಾವಿಲಾಸಕ್ಕೆ ಕಳುಹಿಸಿಕೊಟ್ಟರು.—ಮಹಾರಾಜರು ಅಂತಃಪುರದಿಂದ

ಹೊರಟು ಬಂದೊಡನೆಯೇ ಬಕ್ಷಿಯರುಗಳು ಅವರಿಗೆ ಹಸ್ತಲಾಘವವನ್ನಿತ್ತು ಕರೆದೊಯ್ದು ಅಂಬಾ ವಿಲಾಸದಲ್ಲಿ ಸಿದ್ಧಗೊಳಿಸಿದ್ದ ದಿವ್ಯ ಪೀಠದಮೇಲೆ ಕೂರಿಸಿದರು. ವಂದಿಮಾಗಧರು, ಜಯ ರಾಜಾಧಿರಾಜ, ಯದುಕುಲಾಬ್ಧಿ ಚಂದ್ರ, ವಿತರಣನಿಸ್ತಂದ್ರ, ಸುರುಚಿರ ಕರುಣಾಸಾಂದ್ರ, ಪರಾಕು ಪರಾಕು ಎಂದು ಹೊಗಳತೊಡಗಿದರು. ಆ ವೇಳೆಗೆ ಚೀಫ್ ಕಮಿಾಷನರು ತಮ್ಮ ಐರೋಪ್ಯ ಪರಿವಾರದೊಂದಿಗೆ ಬಂದರೆಂಬ ವಾರ್ತೆ ಬಂದಿತು. ಒಡನೆ ದಿವಾನ್ ರಂಗಾಚಾರ್ಯರು ಹೆಬ್ಬಾಗಿಲಿನವರೆಗೆ ಹೋಗಿ ಅವರನ್ನೆಲ್ಲರನ್ನೂ ಉಚಿತ ಗೌರವದಿಂದ ದರ್ಬಾರು ಮಂದಿರದೊಳಕ್ಕೆ ಕರೆತಂದರು. ಆ ವೇಳೆಗೆ ಸರಿಯಾಗಿ, ಮಹಾರಾಜರೂ ಒಳಗಿನಿಂದ ಬಕ್ಷಿಯರ ಹಸ್ತಲಾಘವವನ್ನು ಸ್ವೀಕರಿಸುತ್ತ ಬಿಜಮಾಡಿಸಿದರು. ಒಡನೆಯೇ ಮಹಾರಾಜರು ಚೀಫ್ ಕಮಿಾಷನರೂ, ಇತರ ಆಂಗ್ಲೇಯ ಅಧಿಕಾರಿಗಳೂ, ದಿವಾನರೇ ಮುಂತಾದ ದೇಶೀಯ ಅಧಿಕಾರಿಗಳೂ, ಜೊತೆಗೆ ನಡೆದುಬರುತ್ತಿರಲು ಧೀರ ಗಂಭೀರಶೈಲಿಯಿಂದ ಅಡಿಗಳನ್ನಿಡುತ್ತ ನಡೆದು ಭುವನೇಶ್ವರೀ ಮಂಟಪದಲ್ಲಿ ಕಂಗೊಳಿಸುತ್ತಿದ್ದ ಸಿಂಹಾಸನದ ಸಮಿಾಪಕ್ಕೆ ನಡೆದರು. ಅಲ್ಲಿ ಪುರೋಹಿತರು ವಿಧ್ಯುಕ್ತರೀತಿಯಿಂದ ಸಿಂಹಾಸನದ ಪೂಜೆಯನ್ನು ಮಾಡಿಸಿದ ತರುವಾಯ, ಬೌರಿಂಗ್‌ಸಾಹೇಬರು ಒಂದು ಹಸ್ತವನ್ನೂ, ಎಲಿಯಟ್ ಸಾಹೇಬರು ಒಂದು ಹಸ್ತವನ್ನೂ ಹಿಡಿದು ನಡೆಯಿಸುತ್ತಿರಲು ಸಿಂಹಾಸನದ ಒಂದೊಂದೇ ಮೆಟ್ಟಿಲನ್ನು ಹತ್ತಿ, ಆರ್ಷೇಯವಾದ ಆ ದಿವ್ಯಪೀಠದ ಮೇಲೆ ಮುಹೂರ್ತಮಾಡಿದರು

ಪಟ್ಟಾಭಿಷೇಕ ಮಹೋತ್ಸವಕ್ಕಾಗಿ ನಿರ್ಮಿತವಾಗಿದ್ದ ಭುವನೇಶ್ವರೀ ಮಂಟಪವು ಸವಾರತೊಟ್ಟಿಯ ಮಧ್ಯಭಾಗದಲ್ಲಿ ನೇತ್ರಾನಂದಕರವಾಗಿ ವಿರಾಜಿಸುತ್ತಿತ್ತು. ಅದರ ಮಧ್ಯಭಾಗದಲ್ಲಿ ಭವ್ಯವಾದ ಸಿಂಹಾಸನವೂ ಶ್ವೇತಚ್ಛತ್ರವೂ ಕಂಗೊಳಿಸುತ್ತಿದ್ದುವು. ಸಿಂಹಾಸನದ ಬಲಭಾಗದಲ್ಲಿ ಐರೋಪ್ಯ ಸರದಾರರಿಗೂ ಅವರ ಸ್ತ್ರೀಯರಿಗೂ ಪೀಠಗಳನ್ನು ಹಾಕಿದ್ದರು. ಸಿಂಹಾಸನದ ಎಡಭಾಗದಲ್ಲಿ ದೇಶದ ಮುಖ್ಯಮುಖ್ಯ ಅಧಿಕಾರಿಗಳೂ ರಾಜಬಂಧುಗಳೂ ಕುಳ್ಳಿರಲು ಆಸನಗಳು ಸಿದ್ಧವಾಗಿದ್ದುವು. ಅಲ್ಲದೆ ಮಿಕ್ಕ ಸಾಮಾನ್ಯ ಅರಸುಗಳು, ಪಾಳಯಗಾರರು, ಅರಮನೆಯ ಅಧಿಕಾರಿಗಳು,

ರಾಜಧಾನಿಯ ಅಧಿಕಾರಿಗಳು, ಪಂಡಿತ ಮಹಾಜನಗಳು ಅಲ್ಲದೆ ನಗರದ ಸೆಟ್ಟಿ ಸಾಹುಕಾರರೇ ಮೊದಲಾದವರೂ ಯೋಗ್ಯ ಸ್ಥಳಗಳಲ್ಲಿ ದಿವ್ಯವಸ್ತ್ರ ವಿಭೂಷಿತರಾಗಿ ನೆರೆದು ತಮ್ಮ ಪ್ರಭುವಿನ ಪಟ್ಟಾಭಿಷೇಕ ಮಹೋತ್ಸವ ವನ್ನು ಅತ್ಯಂತ ಉತ್ಸುಕತೆಯಿಂದ ನಿರೀಕ್ಷಿಸುತ್ತಿದ್ದರು. ಸೋಲ್ಗಡೆ ಜಾಳಂದ್ರಗಳಲ್ಲಿ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ ಭಾರ್ಯೆಯರೂ ಇತರ ಅಂತಃಪುರಸ್ತ್ರೀಯರೂ ಅಲ್ಲದೆ, ಮಹಾರಾಜರ ಹೆತ್ತತಾಯಿಯವ ರಾದ ದೇವಾಜಮ್ಮಣ್ಣಿಯವರೂ ಇತರ ಅರಸು ಪತ್ನಿಯರಿಂದಲೂ, ಅಧಿ ಕಾರಿಗಳ ಮನೆಯ ಸ್ತ್ರೀಯರಿಂದಲೂ ಕೂಡಿ ಪಟ್ಟಾಭಿಷೇಕದ ವೈಭವ ವನ್ನು ನೋಡಿ ಸಂತೋಷಿಸುತ್ತಿದ್ದರು. ಮತ್ತೊಂದು ಕಡೆ ಅರಮನೆಯ ಅವ್ವೆಯರೂ ಇತರ ಸೇವಕವರ್ಗದ ಸ್ತ್ರೀಯರೂ ಕುಳಿತು- ನಿಂತು ತಮ್ಮ ಪ್ರಭುವಿನ ಪ್ರಾದುರ್ಭಾವವನ್ನು ಇದಿರುನೋಡುತ್ತಿದ್ದರು. ಅಲ್ಲದೆ ಪಟ್ಟದ ಆನೆ, ಪಟ್ಟದ ಕುದುರೆ ಪಟ್ಟದ ಹಸು ಇವುಗಳನ್ನು ದಿವ್ಯವಸ್ತ್ರಾ ಭರಣಗಳಿಂದ ಸಿಂಗರಿಸಿ ಒಂದೆಡೆ ನಿಲ್ಲಿಸಿದ್ದರು. ಮತ್ತೊಂದೆಡೆಯಲ್ಲಿ, ಪಟ್ಟದ ಕತ್ತಿಯನ್ನು ಒಂದು ಸ್ವರ್ಣಮಯ ಪಾಲಕಿಯಲ್ಲಿರಿಸಿದ್ದರು. ಅಂ ಗಳದಲ್ಲಿ ವಿವಿಧ ಅಂತಸ್ತಿನ ಸೇನೆಯವರೂ ಪೋಲೀಸಿನವರೂ ಹೊಳೆವ ಆಯುಧಗಳನ್ನು ಧರಿಸಿ ನಿಂತಿದ್ದರು. ಅಲ್ಲೇ ಮತ್ತೊಂದೆಡೆಯಲ್ಲಿ ಶಂಖ ಚಕ್ರಾಂಕುಶ ಕುಠಾರಾದಿ ರಾಜ ಬಿರುದಾವಳಿಗಳ ಚಿಹ್ನೆಗಳನ್ನು ಹೊತ್ತ ಸೇವಕವರ್ಗವೂ ನಾನಾ ವಾದ್ಯಗಳವರೂ ವಾರಾಂಗನೆಯರೂ, ವಂದಿಮಾಗ ಧರೂ ನಿಂತಿದ್ದರು. ಹೊರಗೆ ಬೆಳ್ಳಿಬಂಗಾರದ ಅಂಬಾರಿಗಳನ್ನು ಹೊತ್ತ ಆನೆಗಳೂ, ಕುದುರೆಯ ಸವಾರರೂ, ಸಿಪಾಯಿಗಳೂ, ಭಲ್ಲೆಯವರೂ ಭರ್ಜಿ ಗಳನ್ನು ಹಿಡಿದುನಿಂತ ಕಾಲಾಳುಗಳೂ ಸಾಲುಸಾಲಾಗಿ ನಿಂತಿದ್ದರು. ಅಪೂ ರ್ವವಾದ ಈ ಮಹದುತ್ಸವವನ್ನು ನೋಡಲು ದೇಶವಿದೇಶಗಳಿಂದ ಬಂದ ಸಹಸ್ರಾರು ಮಂದಿ ಪ್ರಜೆಗಳು ಗುಂಪುಕಟ್ಟಿ ಅಂಗಳದಲ್ಲಿ ಕುಳಿತು ಆಗಾಗ ಜಯಘೋಷಮಾಡುತ್ತಿದ್ದರು ಇಷ್ಟು ಜನಗಳ ಕಣ್ಮನಗಳನ್ನೂ ಆಕ ರ್ಷಿಸುವ ಕೇಂದ್ರವಾಗಿ, ಕೇವಲ ಐದು ವರ್ಷ ವಯಸ್ಸಿನ ಶ್ರೀ ಚಾಮರಾ ಜೇಂದ್ರರು ದಿವ್ಯವಸ್ತ್ರಾಭರಣ ವಿಭೂಷಿತರಾಗಿ, ಸಿಂಹಾಸನದಮೇಲೆ ವಿರಾ ಜಿಸುತ್ತಿರಲು, ಮಹಾ ಸುಕೃತಶಾಲಿಗಳಾದ ಆ ಬಾಲರಾಜರನ್ನು ನೋಡಿ

ದವರು ತಮ್ಮ ಕಣ್ಣುಗಳು ಸಾರ್ಥಕವಾದುವೆಂದುಕೊಂಡರು.

ಬ್ರಿಟಿಷ್ ರೆಸಿಡೆಂಟರೂ, ಎಲಿಯಟ್ ಸಾಹೇಬರವರೂ ಮಹಾರಾಜರನ್ನು ಸಿಂಹಾಸನಾರೋಹಣ ಮಾಡಿಸಿದೊಡನೆಯೇ, ಕಿವಿಗಳನ್ನು ಕಿವಿಡಾಗಿಸುವಂತೆ ದಿವ್ಯ ಮಂಗಳವಾದ್ಯ ಧ್ವನಿಗಳಾದುವು. ನಾಲ್ಕು ಕಡೆಯಿಂದಲೂ ಪುಷ್ಪಗಳು ವೃಷ್ಟಿಯಾಗಿ ಸುರಿದುವು. ಗೌರವಾರ್ಥವಾದ ಇಪ್ಪತ್ತೊಂದು ತೋಪುಗಳಾದುವು. ವೇದಘೋಷವೂ ಬ್ರಾಹ್ಮಣಾಶೀರ್ವಾದ ಧ್ವನಿಯೂ ಮಂಟಪವನ್ನೆಲ್ಲ ಶಬ್ದಮಯವನ್ನಾಗಿಸಿದುವು. ಇದಾದ ಒಡನೆಯೇ, ಗುರಿಕಾರ ಮರಿಮಲ್ಲಯ್ಯನವರೆಂಬುವರು ಪದ್ಧತಿಯಂತೆ ಮಹಾರಾಜರವರ ವಂಶಾವಳಿಯನ್ನು ಓದಿದರು. ತರುವಾಯ ಬೌರಿಂಗ್ ಸಾಹೇಬರವರು, ವೈಸರಾಯರವರು ಕಳುಹಿಸಿದ್ದ ಖಿಲ್ಲತ್ತುಗಳನ್ನು ಒಪ್ಪಿಸಿ, ಮುಜರೆ ಮಾಡಿದರು. ಒಂದಿಗೇ ಅವರೊಂದಿಗೆ ಬಂದಿದ್ದ ಯೂರೋಪಿಯನ ಸಮಾಜದವರೂ ಮುಜುರೆ ಮಾಡಿದರು. ಒಡನೆ ವೈಸರಾಯರವರಿಗೂ ಐರೋಪ್ಯ ಅತಿಥಿಗಳಿಗೂ ಖಿಲ್ಲತ್ತುಗಳು - ಹೂವಿನಹಾರ ವೀಳ್ಯಗಳೂ ಅರ್ಪಿಸಲ್ಪಟ್ಟುವು. ತರುವಾಯ ಪಟ್ಟಾಭಿಷೇಕ ಸಂಬಂಧವಾಗಿ ನಡೆಯಬೇಕಾದ ಕಾರ್ಯಗಳೆಲ್ಲವೂ ವೈದಿಕಮಂಡಲಿಯವರಿಂದ ನಡೆಯಿಸಲ್ಪಟ್ಟುವು. ದರ್ಬಾರಿನ ಅಧಿಕಾರಿಗಳಲ್ಲಿ ತಾರತಮ್ಯವನ್ನನುಸರಿಸಿ ಎಲ್ಲರೂ ನಜರು ಮುಜರೆಗಳನ್ನು ಅರ್ಪಿಸಿದರು. ಬಳಿಕ ಎಲ್ಲರಿಗೂ ಗಂಧಪುಷ್ಪತಾಂಬೂಲಗಳು ಕೊಡಲ್ಪಟ್ಟುವು. ಸಕಲರೂ ಸಂತುಷ್ಟರಾಗಿ ಪಟ್ಟಾಭಿಷೇಕಮಹೋತ್ಸವವನ್ನು ತಾವು ತಾವು ನೋಡಿದಂತೆ, ತಮತಮಗೆ ತೋರಿದಂತೆ ವರ್ಣಿಸಿಕೊಳ್ಳುತ್ತಾ ಸಂತುಷ್ಟಮಾನಸರಾಗಿ ಹೊರಟುಹೋದರು.

ಬಾಲ ರಾಜರಿಗೆ ಪಟ್ಟಾಭಿಷೇಕ ಮಹೋತ್ಸವವು ನಡೆದ ದಿನವೇ ಸಂಸ್ಥಾನದ ಸಮಸ್ತ ದೇವಾಲಯಗಳಲ್ಲೂ ವಿಶೇಷವಾದ ಅಭಿಷೇಕ ಪೂಜೆ ಉತ್ಸವಾದಿಗಳು ನಡೆದು ರಾಜ್ಯಾಶೀರ್ವಾದವು ಮಾಡಲ್ಪಟ್ಟಿತು. ಅಲ್ಲದೆ, ಎಲ್ಲಾ ಊರುಗಳ ಮಠ ಸತ್ರ ದೇವಸ್ಥಾನಗಳಲ್ಲೂ ತ್ರಿಮತಸ್ಥ ಸಕಲ ಬ್ರಾಹ್ಮಣರಿಗೂ ಅನ್ನ ಸಂತರ್ಪಣೆಯೂ, ಇತರ ಮತಸ್ಥರಿಗೂ ಔತಣವೂ ನಡೆದುವು. ಈ ಪಟ್ಟಾಭಿಷೇಕ ಮಹೋತ್ಸವದಿಂದ, ತಮ್ಮ ವಂಶಕ್ಕೆ ರಾಜ್ಯಭಾರ ಮಾಡುವ ಅಧಿಕಾರವು ಪುನಃ ದೊರೆಯುವುದೋ ಇಲ್ಲವೋ ಎಂದು

ಸಂಶಯಗ್ರಸ್ತರಾಗಿ ಕೊರಗುತ್ತಿದ್ದ ರಾಜಪತ್ನಿಯರ ಮನದಾಸೆಯು ಪೂರ್ಣವಾದುದು ಮಾತ್ರವಲ್ಲದೆ - ದೇಶದ ಅಶೇಷ ಪ್ರಜಾವರ್ಗವೂ, ತಮ್ಮ ಆರ್ಷೇಯರಾಜವಂಶಕ್ಕೇ ರಾಜ್ಯಭಾರವು ಪ್ರಾಪ್ತವಾದುದಕ್ಕಾಗಿ ಪರಮ ಸಂತುಷ್ಟವಾಯಿತು. ರಾಜಭಕ್ತರಾದ ಪ್ರಜೆಗಳಿಗೆ ಬೇಕಾದುದಿನ್ನೇನು? ಕುರುಡನಿಗೆ ಬೇಕಾದುವು ಕಣ್ಣುಗಳೇ ಅಲ್ಲವೆ?



## ಅಧ್ಯಾಯ ೪ "ವಿದ್ಯಾಭ್ಯಾಸ—ವಿವಾಹ"

ಮುಮ್ಮಡಿ ಕೃಷ್ಣರಾಜ ಒಡೆಯರವರ ತರುವಾಯ ಅವರ ದತ್ತುಪುತ್ರರೇ ರಾಜ್ಯಕ್ಕೆ ಹಕ್ಕುದಾರರೆಂದೂ ಅವರಿಗೆ ಪಟ್ಟಾಭಿಷೇಕ ಮಾಡಬಹುದೆಂದೂ ಬ್ರಿಟಿಷ್ ಸರ್ಕಾರದವರಿಂದ ಸಮ್ಮತಿದೊರೆತುದು ನವರಾತ್ರಿ ಮಹೋತ್ಸವದ ಮಧ್ಯದಲ್ಲಲ್ಲವೆ! ಆದುದರಿಂದ ಪಟ್ಟಾಭಿಷೇಕ ಮಹೋತ್ಸವವು ಸಾಂಗವಾಗಿ ನೆರವೇರಿದ ತರುವಾಯ ನವರಾತ್ರಿಯ ಪೈಕಿ ಮಿಕ್ಕಿದ್ದ ಸಪ್ತಮಿ, ಅಷ್ಟಮಿ, ನವಮಿ ದಿನಗಳೂ ಮಹೋತ್ಸವಗಳಿಂದ ಕಳೆದುವು. ದಶಮಿಯದಿನ ಆಯುಧಾದಿಗಳ ಉತ್ತರ ಪೂಜೆಯೂ ತರುವಾಯ ಸಾಯಂಕಾಲದಲ್ಲಿ ಮಹಾರಾಜರು ದಿವ್ಯ ವಸ್ತ್ರಾಭರಣವಿಭೂಷಿತರಾಗಿ ಭದ್ರಗಜಾರೋಹಣಮಾಡಿ ಸ್ವರ್ಣಮಯವಾದ ದಿವ್ಯವಾದ ಅಂಬಾರಿಯಲ್ಲಿ ಕುಳಿತು, ವಂದಿಮಾಗಧರಿಂದ ಸ್ತುತಿಸಲ್ಪಡುತ್ತ ಬನ್ನಿಮಂಟಪಕ್ಕೆ ನಡೆದು, ಅಲ್ಲಿಯ ಪೂಜಾವಿಧಾನಗಳನ್ನೆಲ್ಲ ಮುಗಿಸಿ ಶಮೀಪತ್ರ ಸ್ವೀಕಾರಮಾಡಿ, ಬಂಧುಗಳಿಂದ ಯುಕ್ತರಾಗಿ ಅರಮನೆಯನ್ನು ಸೇರಿದರು.

ಶ್ರೀ ಚಾಮರಾಜೇಂದ್ರ ಒಡೆಯರವರು, ಎರಡೂವರೆ ವರುಷ ವಯಸ್ಸಿನಲ್ಲೇ ಮಹಾರಾಜರಿಗೆ ಸ್ವೀಕೃತಪುತ್ರರಾದರೂ, ಅವರು ತಮ್ಮ ತಾಯಿಯವರ ಅಂತ್ಯಕಾಲದವರೆಗೂ ಅವರ ಬಳಿಯಲ್ಲೇ ವಾಸಿಸಿದ್ದರು. ಶ್ರೀ ಕೃಷ್ಣರಾಜೇಂದ್ರರು ವಿದ್ಯೆಯ ಬೆಲೆಯನ್ನರಿತವರಾದುದರಿಂದ ಬಾಲರಾಜರ ನಾಲ್ಕನೆಯ ವರ್ಷದಲ್ಲೇ ಭಾಸ್ಕರಪಂತರೆಂಬುವರಿಂದ ಅಕ್ಷರಾಭ್ಯಾಸ ಮಾ

ಡಿಸಿ, ವಿದ್ಯಾಭ್ಯಾಸಕ್ಕೆ ಪ್ರಾರಂಭಿಸಿದರು. ಅವರು ಅಕ್ಷರಮಾಲೆಯನ್ನೂ ಕಾಗುಣಿತ ಮಗ್ಗಿಗಳನ್ನೂ, ಸಂವತ್ಸರಾದಿಗಳ ಹೆಸರುಗಳನ್ನೂ, ಚಿಕ್ಕ ಚಿಕ್ಕ ನೀತಿ ಬೋಧಕ ಶ್ಲೋಕಗಳನ್ನೂ ದೇವರ ಸ್ತೋತ್ರಪರ ಶ್ಲೋಕಗಳನ್ನೂ ಬೋಧಿಸಿದರು. ಮಾತ್ರವಲ್ಲ, ರಾಮಾಯಣ ಭಾರತ ಭಾಗವತಗಳಲ್ಲಿನ ಚಿಕ್ಕ ಚಿಕ್ಕ ಕಥೆಗಳನ್ನು ಮನೋಹರವಾದ ಮಾತುಗಳಿಂದ ವರ್ಣಿಸಿ ಅವರಿಗೆ ಮನೋರಂಜಕವಾಗಿಯೂ ಬೋಧಕವಾಗಿಯೂ ಇರುವಂತೆ ಹೇಳುತ್ತಿದ್ದರು. ತರುವಾಯ ಕೆಲವು ದಿನಗಳಮೇಲೆ ಅವರಿಗೆ ಇಂಗ್ಲಿಷ್ ವಿದ್ಯಾಭ್ಯಾಸವು ಆವಶ್ಯಕವೆಂದು ಚಿಂತಿಸಿ ಆ ಭಾಷೆಯನ್ನು ಬೋಧಿಸಲು ರಂಗಣ್ಣನವರೆಂಬುವರನ್ನು ನಿಯಮಿಸಿದರು. ಅವರು ಇಂಗ್ಲೀಷಿನ ಮೊದಲನೆಯ ಪುಸ್ತಕವನ್ನು ಹೇಳಿಕೊಟ್ಟರು ಹೀಗೆ ಕುಶಾಗ್ರಮತಿಗಳಾದ ಆ ಬಾಲರಾಜರು ವಿದ್ಯಾಭ್ಯಾಸವನ್ನು ಪ್ರಾರಂಭಿಸಿದ ಒಂದು ವರ್ಷವೆಂಬಷ್ಟರಲ್ಲಿ, ಸುಮಾರಾಗಿ ಓದುವುದಕ್ಕೂ ಚಿಕ್ಕ ಚಿಕ್ಕ ಕಥೆಗಳನ್ನು ಸ್ವಂತ ಮಾತುಗಳಿಂದ ಹೇಳುವುದಕ್ಕೂ, ತೊಡಕಿಲ್ಲದೆ ಪದ್ಯಗಳನ್ನೂ ಶ್ಲೋಕಗಳನ್ನೂ ಹೇಳುವುದಕ್ಕೂ ಶಕ್ತರಾದರು ವೃದ್ಧ ಮಹಾರಾಜರು ಕಾಲಗತಿಯನ್ನು ಹೊಂದಿದ ತರುವಾಯ ಬಾಲರಾಜರ ವಿದ್ಯಾಭ್ಯಾಸ ವಿಚಾರವನ್ನು ಬ್ರಿಟಿಷ್ ಸರ್ಕಾರದವರೇ ಗಮನಿಸತೊಡಗಿದರು. ಚೀಫ್ ಕಮಿಷನರು, ವೈಸರಾಯಿಯವರು ಮತ್ತು ಸ್ಟೇಟ್ ಸೆಕ್ರೆಟರಿಯವರು ಇವರಿವರಲ್ಲಿ ಪತ್ರವ್ಯವಹಾರ ನಡೆದು ಕೊನೆಗೆ ಸ್ಟೇಟ್ ಸೆಕ್ರೆಟರಿಯವರ ಅಪ್ಪಣೆಯ ಮೇರೆಗೆ ಕರ್ನಲ್ ಗ್ರೆಗೊರಿ ಹೇನ್ಸ್ ಸಾಹೇಬರೆಂಬುವರು ಮಹಾರಾಜರ ಬೋಧಕರಾಗಿ ನಿಯಮಿತರಾದರು.

ಕರ್ನಲ್ ಹೇನ್ಸ್ ಸಾಹೇಬರು ಒಂದು ವರ್ಷ ಮಾತ್ರ ಬಾಲರಾಜರಿಗೆ ವಿದ್ಯಾಭ್ಯಾಸ ಮಾಡಿಸಿದ ತರುವಾಯ, ಆ ಸ್ಥಳಕ್ಕೆ ಕರ್ನಲ್ ಜಿ. ಬಿ. ಮ್ಯಾಲಿಸನ್ ಸಾಹೇಬರು ನಿಯಮಿಸಲ್ಪಟ್ಟರು. ಇವರು ರಾಜಪುತ್ರರ ವಿದ್ಯಾಭ್ಯಾಸಕ್ಕೆಂದು ಆಗ ದಿವಾನರಾಗಿದ್ದ ರಂಗಾಚಾರ್ಯರೊಂದಿಗೆ ಆಲೋಚಿಸಿ, 'ರಾಯಲ್ ಸ್ಕೂಲ್' ಎಂಬೊಂದು ಪಾಠಶಾಲೆಯನ್ನು ಸ್ಥಾಪಿಸಿದರು. ಅದರಲ್ಲಿ ಅನೇಕ ಮಂದಿ ಅರಸು ಮಕ್ಕಳೂ, ದೊಡ್ಡ ವಂಶಕ್ಕೆ ಸೇರಿದ ಹಲವು ಮಂದಿ ಹಿಂದೂ ಮಹಮ್ಮದೀಯ ದೊಡ್ಡಮನುಷ್ಯರ ಮಕ್ಕಳೂ ಬಾಲರಾಜರೊಂ

ದಿಗೆ ಸೇರಿ ಅಭ್ಯಸಿಸುತ್ತಿದ್ದರು. ಆಗ ಆ ಪಾಠಶಾಲೆಯಲ್ಲಿ ಜಯರಾಮ ರಾಯರು, ವಿ. ಪಿ. ಮಾಧವರಾಯರು, ಅಂಬಲ್ ನರಸಿಂಹಯ್ಯಂಗಾರ್ಯರು ಮುಂತಾದವರು ಇಂಗ್ಲಿಷ್ ಸಹಾಯಕ ಉಪಾಧ್ಯಾಯರಾಗಿಯೂ, ಬಸವಪ್ಪ ಶಾಸ್ತ್ರಿಗಳು, ಗರಳಪುರಿ ಶಾಸ್ತ್ರಿಗಳು ಮುಂತಾದವರು ಕನ್ನಡ ಸಂಸ್ಕೃತ ಪಂಡಿತರುಗಳಾಗಿಯೂ ಕೆಲಸ ಮಾಡುತ್ತಿದ್ದರು. ಅಲ್ಲಿ ಕೇವಲ ಓದು ಬರೆಹ ಮಾತ್ರವೇ ಅಲ್ಲದೆ, ರಾಜಪುತ್ರ ವಿದ್ಯಾರ್ಥಿಗಳು ಕ್ರಿಕೆಟ್ ಫುಟ್‌ಬಾಲ್ ಮುಂತಾದ ಇಂಗ್ಲಿಷ್ ಆಟಗಳನ್ನೂ, ದೇಶೀಯ ಅಂಗಸಾಧನೆ, ಕುಸ್ತಿ, ಕುದುರೆ ಸವಾರಿ ಮುಂತಾದುವುಗಳನ್ನೂ ಅಭ್ಯಾಸ ಮಾಡುತ್ತಲಿದ್ದರು. ಹೀಗೆ ಸಮಾನ ವಯಸ್ಸಿನ ಹತ್ತು ಮಂದಿ ಬಾಲಕರೊಂದಿಗೆ ಬೆರೆಯುತ್ತಿದ್ದುದರಿಂದ ಅವರಲ್ಲಿ ತಾವು ರಾಜಪುತ್ರರು ಮಿಕ್ಕವರು ಬಡವರು ಎಂಬ ಅಹಂಭಾವವು ನಾಶವಾಯಿತು. ಅವರೂ ಇತರರಂತೆಯೇ ಎಲ್ಲರನ್ನೂ ಪ್ರೀತಿ ವಿಶ್ವಾಸಗೌರವಗಳಿಂದ ಕಾಣುತ್ತ ವಿದ್ಯಾ ಗುರುಗಳಲ್ಲಿ ಭಯಭಕ್ತಿಗಳನ್ನಿಟ್ಟು ವಿಧೇಯತೆಯಿಂದ ನಡೆಯುತ್ತ ಎಲ್ಲರ ಮೆಚ್ಚುಗೆಗೂ ಪಾತ್ರರಾದರು.

ಮ್ಯಾಲಿಸನ್‌ರವರು ಉತ್ತಮ ವರ್ಗದ ಬೋಧಕರಾದುದರಿಂದ, ತಮ್ಮ ಶಿಷ್ಯರ ಐಶ್ವರ್ಯ ಪದವಿಗಳಮೇಲೆ ಗಮನವಿಟ್ಟು ಅವರಲ್ಲಿ ಕಂಡುಬರುವ ಲೋಪಗಳನ್ನು ಮಾನಸಿಕ ಮಾಡಬಹುದೆಂದು ಎಣಿಸದೆ, ಅವರು ಪಾಠಶಾಲೆಗೆ ಹೊತ್ತುಮೀರಿ ಬರುವುದು ಅಥವ ಅಲಕ್ಷ್ಯದಿಂದ ಬಾರದಿರುವುದು ಮುಂತಾದ ಸಂದರ್ಭಗಳಲ್ಲಿ ಯೋಗ್ಯರೀತಿಯಿಂದ ಲಘು ಶಿಕ್ಷೆಗಳನ್ನಿತ್ತು-ಅವರಿಗೆ ತಮ್ಮ ತಪ್ಪು ತಿಳಿಯುವಂತೆ ಮಾಡಿ, ತಿದ್ದುತ್ತಿದ್ದರು.

ಹೀಗೆ ಕೆಲವು ದಿನಗಳವರೆಗೆ ವಿದ್ಯಾಭ್ಯಾಸ ನಡೆವ ವೇಳೆಗೆ, ಕ। ಮ್ಯಾಲಿಸನ್‌ರವರು ತಮ್ಮ ಶಿಷ್ಯಂದಿರನ್ನು ಕರೆದುಕೊಂಡು, ದೇಶಪರ್ಯಟನಕ್ಕಾಗಿ ನೀಲಗಿರಿಗೆ ಹೋಗಬೇಕೆಂದು ಯೋಚಿಸಿದರು. ಆಗ ಚಾಮರಾಜೇಂದ್ರರಿಗೆ ಒಂಬತ್ತು ವರ್ಷ ಪ್ರಾಯ. ಆವರೆಗೆ ಅವರೆಂದೂ ತಮ್ಮ ತಾಯಿಯನ್ನೂ ಅಣ್ಣಂದಿರನ್ನೂ ಬಿಟ್ಟಿದ್ದವರಲ್ಲ. ಆದರೂ ಆಗ ಒಬ್ಬರೇ ಹೊರಡಲು ಅವರು ಶಂಕಿಸಲಿಲ್ಲ. ಅವರ ತಾಯಿಯವರು ಮಾತ್ರ ಅವರನ್ನು ಒಂದುಕ್ಷಣವೂ ಬಿಟ್ಟಿರಲಾರೆವೆಂದು ಕಣ್ಣೀರಿಟ್ಟು ಕೇಳಿಕೊಳ್ಳುತ್ತಿರಲು, ರಾಜಪುತ್ರರು ಧೈರ್ಯದಿಂದ ಅವರಿಗೆ ಸಮಾಧಾನ ಹೇಳಿ, ಉಪಾಧ್ಯಾಯ

ರೊಂದಿಗೂ, ಅವರ ಅಣ್ಣಂದಿರಾದ ಪ್ರಿನ್ಸ್ ಗೋಪಾಲರಾಜ ಅರಸಿನವರೊಡನೆಯೂ, ರಂಗಾಚಾರ್ಯರೇ ಮುಂತಾದ ಆಪ್ತರೊಡನೆಯೂ ಕೂಡಿ ಹೊರಟರು. ಮಾರ್ಗಮಧ್ಯದಲ್ಲಿ ಒದಗಿದ ಕಷ್ಟಗಳಿಗೆ ಧೈರ್ಯಗುಂದದೆ, ನೀಲಗಿರಿಯನ್ನು ಸೇರಿ, ಅಲ್ಲಿ ನೋಡಬೇಕಾದ ಹಲವು ಆಶ್ಚರ್ಯಕರ ನೋಟಗಳನ್ನು ನೋಡಿ, ಎಂಟು ದಿನಗಳು ಮಾತ್ರ ಅಲ್ಲಿದ್ದು ತರುವಾಯ ರಾಜಧಾನಿಗೆ ಹಿಂದಿರುಗಿದರು. ಈ ಬಗೆಯ ದೇಶಪರ್ಯಟನವು ಪ್ರತಿ ವರ್ಷವೂ ಎರಡು ಬಾರಿ ಒದಗುತ್ತಿದ್ದಿತು. ಬೇಸಗೆಯಲ್ಲಿ ನೀಲಗಿರಿಗೂ, ಚಳಿಗಾಲದಲ್ಲಿ ಬೆಂಗಳೂರಿಗೂ ಪ್ರಯಾಣ ಮಾಡುತ್ತಿದ್ದರು. ಆದರೆ ಈ ಪ್ರಯಾಣಗಳಿಂದ ಅವರ ವಿದ್ಯಾಭ್ಯಾಸಕ್ಕೇನೂ ಕುಂದಕವುಂಟಾಗುತ್ತಿರಲಿಲ್ಲ. ಈ ಪ್ರಯಾಣಗಳಿಂದ ರಾಜಕುಮಾರರಿಗೆ ಜನಗಳ ಕಷ್ಟ ಸುಖಗಳು ತಿಳಿದು, ಅವರಲ್ಲಿ ಭೂತದಯೆಯೂ ಪರೋಪಕಾರ ಬುದ್ಧಿಯೂ ಹುಟ್ಟಲು ಅವಕಾಶವಾಯಿತು.

ನೀಲಗಿರಿಯಿಂದ ಬಂದ ತರುವಾಯ ಅದೇ ಆಂಗಿರಸ ಸಂವತ್ಸರದ ವೈಶಾಖ ಬಹುಳ ಸಪ್ತಮೀ ಶುಭ ದಿನದಲ್ಲಿ ಚಾಮರಾಜರಿಗೆ ಉಪನಯನ ಸಂಸ್ಕಾರವು ನಡೆಯತಕ್ಕುದೆಂದು ನಿರ್ಣಯಿಸಲ್ಪಟ್ಟಿತು. ಅದಕ್ಕಾಗಿ ಅರಮನೆಯೂ, ರಾಜಧಾನಿಯೂ ಅಲಂಕೃತವಾದುವು. ದೇವಸ್ಥಾನಗಳಲ್ಲಿ ವಿಶೇಷ ರೀತಿಯಿಂದ ಪೂಜೆಪುರಸ್ಕಾರಗಳು ನಡೆಯಲು ಏರ್ಪಾಡು ಮಾಡಲ್ಪಟ್ಟಿತು. ಅಲ್ಲದೆ ರಾಜಧಾನಿಯ ನಾಲ್ಕು ದಿಕ್ಕುಗಳಲ್ಲಿಯೂ ಪಾಕಶಾಲೆಗಳು ಕಟ್ಟಿಸಲ್ಪಟ್ಟು ಬ್ರಾಹ್ಮಣರಿಗೂ ಇತರರಿಗೂ ವಿಶೇಷ ರೀತಿಯಿಂದ ಅನ್ನಸಂತರ್ಪಣೆ ನಡೆಯಲು ಏರ್ಪಾಡಾಯಿತು. ಆ ಶುಭ ದಿನದಲ್ಲಿ ವಿಧ್ಯುಕ್ತವಾಗಿ ನಡೆಯಬೇಕಾದ ಸಕಲ ಕರ್ಮಗಳೂ ಸಾಂಗವಾಗಿ ನಡೆದು ನೆರೆದ ಸಕಲರೂ ಗಂಧಪುಷ್ಪತಾಂಬೂಲಗಳಿಂದ ಗೌರವಿಸಲ್ಪಟ್ಟರು. ದ್ವಿಜವರ್ಗವು ವಿಶೇಷ ದಾನ ದಕ್ಷಿಣೆಗಳಿಂದಲೂ, ಸಕಲರೂ ದಿವ್ಯ ಭಕ್ಷ್ಯಭೋಜ್ಯಯುತವಾದ ಭೋಜನಾದಿಗಳಿಂದಲೂ ಸಂತುಷ್ಟರಾದರು.

ಇದಾದ ಕೆಲವು ದಿನಗಳೊಳಗಾಗಿ, ಮಹಾರಾಜರ ಜನನಿ ದೇವಾಜಮ್ಮಣ್ಣಿಯವರು ಮೃತ್ಯುವಶರಾದರು. ಪ್ರಿಯ ಮಾತೃವನ್ನು ಕಳೆದುಕೊಂಡ ಅವರಿಗೆ ಆ ಸಂದರ್ಭದಲ್ಲಿ ಉಂಟಾದ ವ್ಯಸನಕ್ಕೆ ಪರಿಮಿತಿಯುಂಟೇ?

ಲಿ. ಈ ಆಪ್ತೇಷ್ಟರ ಹಿತವಚನಗಳಿಂದ ಸ್ವಲ್ಪಮಟ್ಟಿಗೆ ಸಮಾಧಾನಗೊಂಡರು. ಮತ್ತು ಅಂದಿನಿಂದ ಆ ಮನೆಯನ್ನು ಬಿಟ್ಟು ಅರಮನೆಗೆ ಬಂದು ಮುಂಚೆ ಅಲ್ಲೇ ವಾಸಿಸತೊಡಗಿದರು.

ಮುಂದೆ ರಾಜ್ಯಾಧಿಕಾರಿಗಳಾಗತಕ್ಕ ಮಹಾರಾಜರು ತಮ್ಮ ದೇಶವಿಸ್ತಾರವನ್ನೂ, ಪ್ರಜೆಗಳ ಶೀಲಸ್ವಭಾವಗಳನ್ನೂ, ದೇಶಸ್ಥಿತಿಯನ್ನೂ ತಿಳಿದಿರಬೇಕಾದುದು ಉಚಿತವೆಂದು ಭಾವಿಸಿ, ಅವರ ಉಪಾಧ್ಯಾಯರಾದ ಕರ್ನಲ್ ಮ್ಯಾಲಿಸನ್ ಸಾಹೇಬರು ಅವರನ್ನು ಒಳದೇಶ ಸಂಚಾರಕ್ಕಾಗಿ ಕರೆದೊಯ್ಯಲು ಮನಸ್ಸು ಮಾಡಿದರು. ೧೮೭೪ನೆಯ ವರ್ಷದಲ್ಲಿ ಶಿವಮೊಗ್ಗಾ ಡಿಸ್ಟ್ರಿಕ್ಟಿನ ಒಂದು ಭಾಗದಲ್ಲಿರುವ ಜೋಗವೆಂಬ ಜಲಪಾತ ದರ್ಶನಕ್ಕಾಗಿ ಬಾಲಮಹಾರಾಜರು ಮಿತಪರಿವಾರದೊಂದಿಗೆ ಹೊರಟು, ರಾಜಭಕ್ತರಾದ ಮಲೆನಾಡಿನ ಪ್ರಜೆಗಳಿಂದ ವಿಶೇಷವಾಗಿ ಸತ್ಕೃತರಾಗಿ, ನೇತ್ರಾನಂದಕರಗಳಾದ ಹಲವು ಪ್ರಕೃತಿಸೌಂದರ್ಯಗಳನ್ನೂ ಜಗತ್ತಿನಲ್ಲೇ ಅದ್ಭುತವಾದುದೆನ್ನಿಸಿಕೊಂಡ ಶರಾವತಿಯ ವಿಚಿತ್ರಪೂರ್ಣ ಜಲಪ್ರಪಾತವನ್ನೂ ಕಣ್ಣಾರೆ ನೋಡಿ ಸಂತೋಷಪಟ್ಟು ಬೆಂಗಳೂರಿಗೆ ಹಿಂದಿರುಗಿದರು.

ಇದಾದ ತರುವಾಯ ಮಾರನೆಯ ವರ್ಷ ವಿಕ್ಟೋರಿಯಾ ಮಹಾರಾಜ್ಞಿಯವರ ಜ್ಯೇಷ್ಠಕುಮಾರರಾದ ಪ್ರಿನ್ಸ್ ಆಫ್ ವೇಲ್ಸ್ ರವರನ್ನು ಬೊಂಬಾಯಿಯಲ್ಲಿ ಸಂದರ್ಶನ ಮಾಡಲು, ಆ ನಗರವನ್ನು ಕುರಿತು ದಯಮಾಡಿಸಿದರು. ಹೀಗೆ ಕಾರಣಾಂತರಗಳಿಂದ ಮಹಾರಾಜರು ವಿದ್ಯಾರ್ಥಿದೆಸೆಯಲ್ಲೂ ದೇಶಸಂಚಾರ ಮಾಡುತ್ತಿದ್ದರಾದರೂ ಅದರಿಂದ ಅವರ ಕ್ರಮ ವಿದ್ಯಾಭ್ಯಾಸಕ್ಕೆ ಏನೂ ಕೊರತೆಯುಂಟಾಗಿರಲಿಲ್ಲ. ೧೮೭೬ನೆಯ ವರ್ಷದಲ್ಲಿ ಅವರಿಗೆ ವಿದ್ಯಾಗುರುಗಳಾಗಿದ್ದ ಕರ್ನಲ್ ಮ್ಯಾಲಿಸನ್ ಸಾಹೇಬರು ಉದ್ಯೋಗದಿಂದ ನಿವೃತ್ತರಾಗಿ ಹೊರಟುಹೋದರು. ಅದೇ ವರ್ಷದ ಡಿಸೆಂಬರು ತಿಂಗಳಲ್ಲೇ ಮಹಾರಾಜರಿಗೆ ಪುನಃ ಉತ್ತರದೇಶಕ್ಕೆ ಪ್ರಯಾಣ ಮಾಡಬೇಕಾದ ಅವಶ್ಯಕತೆಯುಂಟಾಯಿತು. ವಿಕ್ಟೋರಿಯಾ ಮಹಾರಾಜ್ಞಿಯವರು ಇಂಡಿಯಾದೇಶದ ಚಕ್ರವರ್ತಿನಿಯೆಂಬ ಬಿರುದನ್ನು ವಹಿಸಿದ್ದಾರೆಂಬ ವೃತ್ತಾಂತವನ್ನು ಪ್ರಚುರಗೊಳಿಸುವುದಕ್ಕಾಗಿ ಏರ್ಪಟ್ಟಿದ್ದ ಮಹಾಜನ ಸಭೆಗೆ ದಯಮಾಡಿಸಬೇಕೆಂದು ಬಂದಿದ್ದ ಆಹ್ವಾನವನ್ನು ಮನ್ನಿಸಿ, ಮಹಾರಾಜರು ಐರೋಪ್ಯ

ಮತ್ತು ದೇಶೀಯ ಅಧಿಕಾರಿಗಳಿಂದಲೂ ಉಚಿತ ಸೇನಾ-ಪರಿವಾರದಿಂದಲೂ ಕೂಡಿ ಪ್ರಯಾಣ ಮಾಡಿದರು. ಚರಿತ್ರ ಪ್ರಸಿದ್ಧವಾದ ಆ ಮಹೋತ್ಸವವು ನಡೆದ ತರುವಾಯ ಮಹಾರಾಜರು ಪರಿವಾರದೊಂದಿಗೆ ಕಾಶಿ ಪ್ರಯಾಗ ಮೊದಲಾದ ಪ್ರಾಂತಗಳಲ್ಲಿ ಸಂಚರಿಸಿ, ತಾಜಮಹಲ್ ಮುಂತಾದ ಅನೇಕ ಪ್ರೇಕ್ಷಣೀಯ ಸ್ಥಳಗಳನ್ನು ಸಂದರ್ಶಿಸಿಕೊಂಡು ಊರಿಗೆ ಬಂದರು.-ಆ ತರುವಾಯ ಪೋರ್ಟರ್ ಸಾಹೇಬರೆಂಬುವರು ಮಹಾರಾಜರವರ ಉಪಾಧ್ಯಾಯರಾಗಿ ನಿಯಮಿತರಾಗಿ, ಅವರಿಗೆ ರಾಜನೀತಿಯ ಮರ್ಮಗಳನ್ನೂ ರಾಜ್ಯವ್ಯವಹಾರದ ಮುಖ್ಯಾಂಗಗಳ ಪರಿಚಯವನ್ನೂ ಮಾಡಿಕೊಟ್ಟರು. ೧೮೭೯ನೆಯ ಸಂ|ದಲ್ಲಿ ಮಹಾರಾಜರು ಮತ್ತೊಮ್ಮೆ ಮೈಸೂರು ಸೀಮೆಯ ವಿವಿಧ ಪ್ರಾಂತಗಳಲ್ಲಿ ಸಂಚಾರಮಾಡಿ ಬಂದರು. ೧೮೮೦ನೆಯ ಸಂವತ್ಸರದ ವೇಳೆಗೆ ಶ್ರೀಯವರ ವಿದ್ಯಾಭ್ಯಾಸವು ಪರಿಪೂರ್ಣವಾದಂತಾಯಿತು. ಆ ಸಂದರ್ಭದಲ್ಲಿ ಚೀಫ್ ಕಮೀಷನರಾಗಿದ್ದ ಗಾರ್ಡನ್ ಸಾಹೇಬರು ಇಂಡಿಯಾ ಸರಕಾರಕ್ಕೆ ಬರೆದಿರುವ ಒಂದು ಪತ್ರದಿಂದ ಈ ವಿಷಯವು ಸ್ಪಷ್ಟವಾಗುತ್ತದೆ *'ಪೋರ್ಟರ್ ಸಾಹೇಬರು ಬಂದಕಾಲದಿಂದ ಮಹಾರಾಜರ ಬುದ್ಧಿಕೌಶಲದಲ್ಲಿಯೂ, ಮನೋವೃತ್ತಿಯ ವಿಕಾಸದಲ್ಲೂ ಉಂಟಾದ ಅಭಿವೃದ್ಧಿಯು ಸ್ಪಷ್ಟವಾಗಿ ಕಾಣಬರುವುದಲ್ಲದೆ, ತೃಪ್ತಿಕರವಾಗಿಯೂ ಇದೆಯೆಂದು ನಾನು ಹೇಳಬಲ್ಲೆನು. ಮಹಾರಾಜರು ಈಗ ಸಾಮಾನ್ಯವಾದ ಗ್ರಂಥಗಳನ್ನೂ ವೃತ್ತಾಂತಪತ್ರಿಕೆಗಳನ್ನು ತಾವೇ ಓದಿಕೊಂಡು ಅರ್ಥ ಮಾಡಿಕೊಳ್ಳಬಲ್ಲರು ಇತರರ ಸಹಾಯವಿಲ್ಲದೆಯೂ ಶುದ್ಧವಾಗಿಯೂ ಕಾಗದಗಳನ್ನು ತಾವೇ ಚೆನ್ನಾಗಿ ಬರೆಯಬಲ್ಲರು. ಇವರ ಪರಿಶೀಲನ ಶಕ್ತಿಯು ಚುರುಕಾಗಿಯೂ, ಜನಗಳ ಮತ್ತು ವಸ್ತುಗಳ ತಾರತಮ್ಯವನ್ನು ತಿಳಿಯುವ ಶಕ್ತಿಯು ತೃಪ್ತಿಕರವಾಗಿಯೂ ಇದೆ. ಇಷ್ಟು ಚಿಕ್ಕವರಾದರೂ, ಈ ವಯಸ್ಸಿಗೆ ದುರ್ಲಭವಾದ ಜಾಗರೂಕತೆಯೂ ಜಾಣತನವೂ ಇವರಲ್ಲುಂಟು.'. ಹೀಗೆ ಪ್ರಾರಂಭದಿಂದಲೂ ಆಂಗ್ಲೇಯರಿಂದಲೇ ವಿದ್ಯಾಭ್ಯಾಸವು ಸಾಗಿ ಬಂದರೂ ಮಧ್ಯೆ, ಅಂಬಲ್ ನರಸಿಂಹಯ್ಯಂಗಾರ್ಯರೂ, ರಂಗಾಚಾರ್ಯರೂ ಯೋಗ್ಯರೀತಿಯಿಂದ ಬೋಧಿಸುತ್ತ ಮಹಾರಾಜರಲ್ಲಿ, ದೇಶಸಂಬಂಧವಾದ ಮತ್ತು ಮತ

*ಶ್ರೀ ಚಾಮರಾಜೇಂದ್ರ ಒಡೆಯರವರ ಚರಿತ್ರೆ ಪುಟ. ೧೦೦.

ಸಂಬಂಧನಾದ ಧಾರ್ಮಿಕ ಮನೋಭಾವವನ್ನು ಕಾಪಾಡಿಕೊಂಡು ಬಂದುದಲ್ಲದೆ ಯೋಗ್ಯರೀತಿಯಿಂದ ಅಭಿವೃದ್ಧಿಗೊಳಿಸುತ್ತಲೂ ಇದ್ದರು. ಸಮರ್ಥರಾದ ವಿದ್ವಾಂಸರ ಸಹಾಯದಿಂದ ಮಹಾರಾಜರವರ ವಿದ್ಯಾಭ್ಯಾಸವು ಪೂರ್ಣವಾಗಿ ಅವರು ರಾಜ್ಯಲಕ್ಷ್ಮೀ ಪಾಣಿಗ್ರಹಣಕ್ಕೆ ಯೋಗ್ಯರಾದರು.

ಯೋಗ್ಯ ವಿದ್ಯಾಭ್ಯಾಸದಿಂದ ರಾಜ್ಯಭಾರಕ್ಕೆ ಯೋಗ್ಯವಾದ ಸಾಮರ್ಥ್ಯವನ್ನು ಗಳಿಸಿಕೊಂಡ ಮಹಾರಾಜರಿಗೆ ಆ ವೇಳೆಗೆ ಹದಿನಾರು ವರ್ಷಗಳ ಪ್ರಾಯವಾಗಿ, ಅವರು ವಿದ್ಯೆ ವಿನಯಗಳಲ್ಲೂ ರಾಜ ತೇಜಸ್ವಿತೆ ದೇಹದಾರ್ಢ್ಯಾದಿಗಳಲ್ಲೂ ತಮ್ಮ ವಯಸ್ಸಿಗೆ ಅಧಿಕವೆನ್ನಿಸುವಂತಹ ಶಕ್ತಿಸಾಮರ್ಥ್ಯವನ್ನು ಗಳಿಸಿಕೊಂಡಿದ್ದುದನ್ನು ಕಂಡ ಅವರ ಮಾತೃಶ್ರೀಯವರು ಅವರಿಗೆ ವಿವಾಹ ಪ್ರಸ್ತುತವನ್ನು ನೆರವೇರಿಸಬೇಕೆಂದು ಯೋಗ್ಯ ಕನ್ಯೆಗಾಗಿ ಅಲ್ಲಲ್ಲಿ ವಿಚಾರನಡಿಸಿದರು. ಕೊನೆಗೆ ಕಳಲೆ ಮನೆತನದ ನರಸೇ ಅರಸಿನವರ ಮನೆಯಲ್ಲಿ ಕೆಂಪನಂಜಮ್ಮಣ್ಣಿಯವರೆಂಬ ಕನ್ಯಾರತ್ನವು ಮಹಾರಾಜರವರ ಅರ್ಧಾಂಗಿಯಾಗಲು ವಿದ್ಯಾ ವಿನಯ ರೂಪು ರೇಖೆ ವಿಲಾಸಗಳಿಂದ ಯೋಗ್ಯರಾಗಿದ್ದುದನ್ನು ತಿಳಿದು, ದೈವಜ್ಞರಿಂದ ಜಾತಕವನ್ನು ನೋಡಿಸಲು ಸಕಲ ಕೂಟಗಳೂ ಬಹು ಪ್ರಶಸ್ತವಾಗಿ ಸೇರಿಬಂದವು. ಆದರೆ ೧೮೭೬-೭೭ನೆಯ ಸಂವತ್ಸರದಲ್ಲಿ ದೇಶಕ್ಕೆ ಪ್ರಾಪ್ತವಾಗಿದ್ದ ದುರಂತಕ್ಷಾಮಬಾಧೆಯಿಂದ ದೇಶದ ಪ್ರಜೆಗಳೆಲ್ಲಾ ಬಳಲಿ ಕಂಗೆಟ್ಟಿರುವ ಆ ಕಾಲದಲ್ಲೇ ಈ ಮಹೋತ್ಸವವನ್ನು ನಡೆಯಿಸುವುದು ಯುಕ್ತವೇ ಎಂದೂ, ಅವರು ಯೋಚಿಸದೇ ಇರಲಿಲ್ಲ. ಆದರೆ ಆ ವೇಳೆಗೆ ಒಳ್ಳೆಯ ನಾಲ್ಕಾರು ಮಳೆಗಳಾಗಿ, ಅಲ್ಲಲ್ಲೆ ಪೈರುಪಚ್ಚೆಗಳು ಹಸುರು ತೋರಿ, ಜನಗಳಿಗೂ ದನಕರುಗಳಿಗೂ ಕುಡಿಯುವ ನೀರೂ ಕಾಳುಕಡ್ಡಿಗಳೂ, ಸಿಕ್ಕಲು ಮಾರ್ಗವಾಗಿದೆಯೆಂದು ತಿಳಿಯಬಂದುದರಿಂದ ಇನ್ನು ಸಾವಕಾಶ ಮಾಡಿದರೆ ಮುಂದೆ ಲಗ್ನಕಾಲವು ಮೀರಿ ಹೋಗುತ್ತದೆಂದು ೧೮೭೮ನೆಯ ಮೇ ತಿಂಗಳಲ್ಲೇ ವಿವಾಹಕ್ಕೆ ಮುಹೂರ್ತವನ್ನಿಟ್ಟರು. ಬಹುಧಾನ್ಯ ಸಂವತ್ಸರದ ವೈಶಾಖ ಬಹುಳ ದಶಮೀ ಭಾನುವಾರ (೨೬-೫-೧೮೭೮) ಸಿಂಹಲಗ್ನದಲ್ಲಿ ಶ್ರೀಮನ್ಮಹಾರಾಜಾ ಚಾಮರಾಜೇಂದ್ರ ಒಡೆಯರವರಿಗೆ ಸೌಭಾಗ್ಯವತಿ ಕೆಂಪನಂಜಮ್ಮಣ್ಣಿಯವರೊಂದಿಗೆ ವಿವಾಹವೆಂದು ಪ್ರಕಟಿಸಲ್ಪಟ್ಟ ಆಹ್ವಾನಪತ್ರಿಕೆ

ಗಳು ಸರ್ವತ್ರ ಹಂಚಲ್ಪಟ್ಟುವು. ಅರಮನೆಯೂ ರಾಜಧಾನಿಯೂ ಅಭೂತಪೂರ್ವವಾದ ದಿವ್ಯಾಲಂಕಾರಗಳಿಂದ ಶೋಭಿಸತೊಡಗಿತು. ನಾನಾ ದೇಶಗಳಿಂದಲೂ, ನಮ್ಮ ಮೈಸೂರು ದೇಶದ ವಿವಿಧ ಭಾಗಗಳಿಂದಲೂ ಆಹ್ವಾನಿತರಾದ ಅನೇಕಾನೇಕಮಂದಿ ಗಣ್ಯಪ್ರಜೆಗಳೂ, ಸಾಮಾನ್ಯರೂ ಆ ವೇಳೆಗೆ ರಾಜಧಾನಿಗೆ ಬಂದು ಸೇರುತ್ತಿದ್ದರು.

ಶ್ರೀಮನ್ಮಹಾರಾಜರ ಆ ವಿವಾಹ ಮಹೋತ್ಸವವು ಹೇಗೆ ನಡೆಯಿ ತೆಂದು ವರ್ಣಿಸಬೇಕಾದುದೇನು ? ಬಹು ದಿನಗಳಿಂದಲೂ ಈ ಬಗೆಯ ಶುಭ ಶೋಭನಗಳನ್ನು ನಡೆಯಿಸಲು ಅವಕಾಶವೇ ಇಲ್ಲದಿದ್ದ ಈ ರಾಜಕುಟುಂಬ ದವರಿಗೆ ಮಹಾಸುಕೃತಶಾಲಿಗಳಾದ ಶ್ರೀಚಾಮರಾಜ ಒಡೆಯರೆಂಬ ದಿವ್ಯ ರತ್ನವು ದೊರೆತಿದ್ದಾಗ, ಈ ಒಂದು ವಿವಾಹಮಹೋತ್ಸವವನ್ನು ಎಷ್ಟು ಬಗೆಯ ವಿಜೃಂಭಣೆಯಿಂದ ನಡೆಯಿಸಿದರೆಂದು ಹೇಳಬಹುದು ! ರತ್ನಖಚಿತ ವಾದ ದಿವ್ಯಾಭರಣಗಳೂ, ದಿವ್ಯವಸ್ತ್ರವಿಭೂಷಣಗಳೂ ಸೂರಾಡಿದುವು. ಕರ್ಣಾನಂದಕರವಾದ ಓಲಗ ತಾಳಮೇಳಗಳೂ, ಕಿವಿಗಳನ್ನು ಕಿವುಡಾಗಿಸಿ ದುವು. ವಿವಾಹಾಂಗಗಳಾಗಿ ನಡೆದ ಹಲವುಬಗೆಯ ಉತ್ಸವಗಳನ್ನು ನೋಡಿ ಜನರು ಕಣ್ಣುಗಳ ತಣಿವನ್ನು ತೀರಿಸಿಕೊಂಡರು. ಭೂಸುರ ವರ್ಗಕ್ಕೆ ವಿವಿಧ ದಾನದಕ್ಷಿಣೆಗಳೂ, ಷಡ್ರಸೋಪೇತವಾದ ದಿವ್ಯ ಭೋಜನ ಗಳೂ ಮುಕ್ತ ಹಸ್ತದಿಂದ ನಡೆದುವು ಮಿಕ್ಕ ಸಕಲ ಪ್ರಜಾವರ್ಗವೂ ಭೋಜನಾದಿಗಳಿಂದ ಸಂತುಷ್ಟವಾಯಿತು. ಕನ್ಯೆಯು ತನ್ನ ಮನಮೆಚ್ಚಿ ದ ವರಸಾರ್ವಭೌಮನ ಮನೋಹರವಾದ ದಿವ್ಯರೂಪಿನಿಂದಲೂ, ಕನ್ಯಾ ಮಾತ್ರವು, ಮಹಾರಾಜ ಪದವನ್ನು ಏರಲುಳ್ಳ ತಮ್ಮಳಿಯನ ದಿವ್ಯ ವೈಭ ವದ ಮಹದಾಂಕಾಕ್ಷೆಯಿಂದಲೂ,—ಕನ್ಯಾಬಂಧುವರ್ಗವು ವಿದ್ಯಾ, ವೈಭವ ರಾಜತೇಜ ನಿಷ್ಕಳಂಕವಾದ ವಂಶಗೌರವಾದಿಗಳಿಂದ ಪ್ರಖ್ಯಾತರಾದ ಅಳಿಯಂದಿರ ಸದ್ಗುಣ ಸನ್ನಡತೆಗಳಿಂದಲೂ, ಮಿಕ್ಕ ಸಕಲ ಪರಿವಾರವೂ, ಮೃಷ್ಟಾನ್ನಭೋಜನದಿಂದಲೂ ಸಂತೃಪ್ತವಾಯಿತು ಮಹಾರಾಜರು ದಿವ್ಯ ಮುಹೂರ್ತದಲ್ಲಿ, ಕೆಂಪನಂಜಮ್ಮಣ್ಣಿಯವರ ಪಾಣಿಗ್ರಹಣಮಾಡಿ ಗೃಹಸ್ಥ ಧರ್ಮವನ್ನು ಸ್ವೀಕರಿಸಿದರು. ಆ ಬಾಲರಾಜ ದಂಪತಿಗಳು ಚಿರಜೀವಿಗಳಾಗಿ ಪುತ್ರಪೌತ್ರ ಸೌಭಾಗ್ಯಸಂಪತ್ತುಗಳನ್ನು ಗಳಿಸಲೆಂದು ಸರ್ವರೂ ಮನಸಾರೆ

ಹರಿಸುವರು. ದೇಶದ ಸಕಲ ದೇವಾಲಯಗಳಲ್ಲೂ ಅವರ ಶ್ರೇಯಃಪ್ರಾರ್ಥನೆ ಮಾಡಲ್ಪಟ್ಟಿತು. ಹೀಗೆ ವಿದ್ಯಾಭ್ಯಾಸವನ್ನು ಮುಗಿಸಿ - ವಿವಾಹಿತರಾಗಿ ಶ್ರೀಚಾಮರಾಜೇಂದ್ರ ಒಡೆಯರು ಮೈಸೂರು ರಾಜಮನೆತನವೆಂಬ ಆಕಾಶದಲ್ಲಿ ಮಧ್ಯ ದಿನಗತನಾದ ಸೂರ್ಯನೋ ಎಂಬಂತೆ ಪ್ರಕಾಶಿಸುತ್ತಿದ್ದರು.



## ಅಧ್ಯಾಯ ೫ "ರಾಜ್ಯಭಾರ"

ಶ್ರೀಮನ್ಮಹಾರಾಜರವರ ವಿವಾಹ ಮಹೋತ್ಸವವನ್ನು ಕಣ್ಣಾರೆ ನೋಡಿ ಆನಂದಿಸಿದ ಮೈಸೂರುದೇಶದ ಪ್ರಜೆಗಳಿಗೆ ಮುಂದೆ ಒಂದು ವರ್ಷದೊಳಗಾಗಿಯೇ ಮತ್ತೊಂದು ಮಹೋತ್ಸವವನ್ನು ನೋಡುವ ಸುಯೋಗ ಒದಗಿತು. ರಾಜ್ಯಪ್ರದಾನ ವಿಷಯದಲ್ಲಿ ಹಿಂದೆ ಮುಮ್ಮಡಿ ಕೃಷ್ಣರಾಜ ಒಡೆಯರವರು ಜೀವಂತರಾಗಿದ್ದಾಗ, ಬ್ರಿಟಿಷ್ ಸರ್ಕಾರದವರು ಮಾಡಿದ್ದ ವಾಗ್ದಾನವನ್ನು ಈಗ ಫಲಕಾರಿಯನ್ನಾಗಿಸಲು ಮನಸ್ಸುಮಾಡಿದರು. ಶ್ರೀಮನ್ಮಹಾರಾಜರವರಿಗೆ ಹದಿನೆಂಟು ವರ್ಷಗಳು ತುಂಬಿ, ಅವರು ರಾಜ್ಯದ ಆಡಳಿತವನ್ನು ಸ್ವತಃ ನೋಡಿಕೊಳ್ಳಲು ಶಕ್ತರಾದರೆಂಬ ವೇಳೆಗೆ ರಾಜ್ಯಭಾರವನ್ನು ಅವರಿಗೆ ವಹಿಸಲು ತಕ್ಕ ಸನ್ನಾಹಗಳು ನಡೆದುವು. ೧೮೮೧ನೆಯ ಇಸವಿ ಮಾರ್ಚಿ ೧ನೆಯ ದಿನ ಬ್ರಿಟಿಷ್ ಸರ್ಕಾರದವರು ಒಂದು ತಹನಾಮೆಯನ್ನು ಹೊರಡಿಸಿದರು. ಇದನ್ನು ಮಹಾರಾಜರ ರಾಜ್ಯಭಾರದ ಹಿತಚಿಂತಕರಾದ ದೊಡ್ಡ ಮನುಷ್ಯರು ನೋಡಿ ವಿಮರ್ಶಿಸಿ ಒಪ್ಪಿದ ಬಳಿಕ ಅದೇ ತಿಂಗಳು ೨೫ನೆಯ ತಾರೀಖಿನ ದಿನ ರಾಜ್ಯಾಭಿಷೇಕ ಮಹೋತ್ಸವವು ನಡೆಯತಕ್ಕುದೆಂದು ನಿರ್ಣಯವಾಯಿತು.

ಆ ಸಮಾಚಾರವು ರಾಜಕುಟುಂಬದವರಿಗೂ, ರಾಜ್ಯದಲ್ಲಿನ ಪ್ರಜಾಪರಿವಾರಗಳಿಗೂ ಮಹದಾನಂದವನ್ನುಂಟುಮಾಡಿತು. ಆ ಮಹೋತ್ಸವವನ್ನೂ ಯಶಸ್ವಿಯನ್ನಾಗಿ ಮಾಡಲು ರಾಜಧಾನಿಯಲ್ಲಿ ಸರ್ವ ಸನ್ನಾಹಗಳೂ ನಡೆಯಲಾರಂಭವಾದುವು. ಅಷ್ಟರೊಳಗೆ ಶ್ರೀಮನ್ಮಹಾರಾಜರವರಿಗೆ

ಜ್ಯೇಷ್ಠಪುತ್ರಿಯ ಜನನದ ಸಂತೋಷಕರವಾರ್ತೆಯು- ಕಬ್ಬಿನಮೇಲೆ ಜೇನಿಟ್ಟಂತೆ- ತಿಳಿದು, ಜನಗಳ ಆನಂದವನ್ನು ಹೆಚ್ಚಿಸಿತು. ರಾಜ್ಯಲಕ್ಷ್ಮಿಯು ಪ್ರಾಪ್ತವಾಗಲುಳ್ಳ ಆ ಶುಭ ಸಂದರ್ಭದಲ್ಲಿ ಜಯಸೂಚಕವಾಗಿ ಅವತರಿಸಿದ ಲಕ್ಷ್ಮೀಸಮಾನಳಾದ ಕನ್ಯೆಯೆಂಬರ್ಥವನ್ನು ಮಹಾರಾಜರು ಮನಸ್ಸಿನಲ್ಲಿ ಪರಿಭಾವಿಸಿ ತಮ್ಮ ಕನ್ಯಕಾರತ್ನಕ್ಕೆ ಜಯಲಕ್ಷ್ಮಮ್ಮಣ್ಣಿಯು ಪರಿಂದು ನಾಮಕರಣಮಾಡಿ ಮಹೋತ್ಸವಗಳನ್ನು ನಡೆಯಿಸಿದರು ಇದಾದ ತರುವಾಯ, ವೈಸರಾಯಿಯವರಿಂದ ಈ ಮುಂದೆಯೇ ಕಳುಹಲ್ಪಟ್ಟಿದ್ದ ಇಪ್ಪತ್ನಾಲ್ಕು ಕಲಮುಗಳುಳ್ಳ ಒಂದು ತಹನಾಮೆಯನ್ನು ಮೈಸೂರಿನ ಮಹಾರಾಜರು ಒಪ್ಪಿಕೊಂಡು, ಮಹಾರಾಜರ ಪಟ್ಟಾಭಿಷೇಕಕ್ಕೆ ಅಣಿಮಾಡಿಕೊಂಡರು. ಶ್ರೀಮನ್ಮಹಾರಾಜರವರಿಗೆ ರಾಜ್ಯವನ್ನೊಪ್ಪಿಸುವ ಮಹತ್ಕಾರ್ಯವನ್ನು ನೆರವೇರಿಸಲಿಕ್ಕಾಗಿ ವೈಸರಾಯಿಯವರ ಪ್ರತಿನಿಧಿಯಾಗಿ ಮದ್ರಾಸು ಆಧಿಪತ್ಯದ ಗವರ್ನರವರಾದ ಆಡಂ ಸಾಹೇಬರೆಂಬುವರು ಮೈಸೂರಿಗೆ ಬಂದರು. ರಾಜಧಾನಿಯು ಆ ಉತ್ಸವಕ್ಕಾಗಿ ನೇತ್ರಾನಂದಕರವಾಗಿ ಸಿಂಗರಿಸಲ್ಪಟ್ಟಿದ್ದಿತು. ಗವರ್ನರ್ ಸಾಹೇಬರು, ರಾಜಧಾನಿಯಲ್ಲಿ ಒಂದು ಮಹಾಸಭೆಯನ್ನು ನೆರೆಯಿಸಿ, ಅದರಲ್ಲಿ ವೈಸರಾಯಿಯವರು ಬರೆಯಿಸಿದ್ದ ಪ್ರಸಿದ್ಧಪತ್ರಿಕೆಯನ್ನು ಪ್ರಕಟಣೆಮಾಡಿದರು ಅದರಲ್ಲಿ ಗತಿಸಿದ ಶ್ರೀಕೃಷ್ಣರಾಜಒಡೆಯರವರ ಸ್ವೀಕಾರಪುತ್ರರಾದ ಶ್ರೀ ಚಾಮರಾಜೇಂದ್ರ ಒಡೆಯರವರನ್ನು ಬ್ರಿಟಿಷ್‌ಸರ್ಕಾರದವರು ಮೈಸೂರು ಸಿಂಹಾಸನಕ್ಕೆ ಉತ್ತರಾಧಿಕಾರಿಗಳೆಂದು ಅಂಗೀಕರಿಸಿ, ಅವರಿಗೆ ಹದಿನೆಂಟು ಸಂವತ್ಸರಗಳ ಪ್ರಾಯಬಂದು ವಿದ್ಯಾಬುದ್ಧಿಗಳಿಂದ ಅವರು ರಾಜ್ಯಭಾರಕ್ಕೆ ಅರ್ಹರಾಗಿರುವ ಈ ಸಂದರ್ಭದಲ್ಲಿ ಅವರಿಗೆ, ಈ ಸಂಸ್ಥಾನದ ಆಡಳಿತವನ್ನು ಒಪ್ಪಿಸಿರುತ್ತಾರೆಯೆಂದೂ, ಅಂದಿನಿಂದ ಮೈಸೂರು ಸೀಮೆಯಲ್ಲಿ ಬ್ರಿಟಿಷ್ ಸರ್ಕಾರದವರ ಆಡಳಿತವು ನಿಂತುಹೋಗಿರುತ್ತದೆಂದೂ ಬರೆದಿದ್ದಿತು. ಆಡಂ ಸಾಹೇಬರು, ಆ ಪ್ರಸಿದ್ಧಪತ್ರಿಕೆಯನ್ನು ಓದಿಸಿದ ತರುವಾಯ, ಉಚಿತವಾಕ್ಯಗಳಿಂದ ಮಹಾರಾಜರವರನ್ನು ಅಭಿನಂದಿಸಿ, ಮುಂದೆ ಭಗವಂತನು ನಿಮ್ಮ ಮೂಲಕ ಈ ದೇಶದ ಪ್ರಜೆಗಳ ಕ್ಷೇಮಲಾಭಗಳನ್ನು ಹೆಚ್ಚಿಸಲೆಂದು ಆಸಿಸಿದರು. ತರುವಾಯ ಮಹಾರಾಜರು ಬ್ರಿಟಿಷ್ ಸರ್ಕಾರದವರ ನ್ಯಾಯವರ್ತನೆಯನ್ನು ಹೊಗಳಿ,

ಶ್ರೀ ವಿಕ್ಟೋರಿಯಾ ಮಹಾರಾಜ್ಞಿಯವರಿಗೂ, ಗವರ್ನರ್ ಜನರಲ್‌ರವರಿಗೂ ತಮ್ಮ ಕೃತಜ್ಞತೆಯನ್ನು ಸೂಚಿಸಿದರು. ಅಷ್ಟರಲ್ಲಿ ವೈಸರಾಯಿಯವರಿಂದ, ಮಹಾರಾಜರವರ ಪದವೀಸ್ವೀಕಾರವನ್ನು ಅಭಿನಂದಿಸಿದ ಸಂದೇಶವೂ ತಲುಪಿ ಎಲ್ಲರ ಉತ್ಸಾಹವನ್ನೂ ಹೆಚ್ಚಿಸಿತು. ಸಕಲ ಮಂಗಳವಾದ್ಯಗಳೂ ಘೋರ್ಗರೆದುವು. ಆ ಸಂದರ್ಭದಲ್ಲೇ ಮೈಸೂರು ಸಂಸ್ಥಾನದ ರಾಜ್ಯಾಡಳಿತವನ್ನು ನೋಡಿಕೊಳ್ಳಲು ಸೆಟ್ಟಿಪಣ್ಯಂ ವೀರವಲ್ಲಿ ರಂಗಾಚಾರ್ಲು ಸಿ. ಐ. ಇ ಯವರನ್ನು ದಿವಾನರಾಗಿ ನಿಯಮಿಸಿ, ಶ್ರೀಮನ್ಮಹಾರಾಜರು ತಾವು ಬ್ರಿಟಿಷ್ ಸರ್ಕಾರದವರಿಂದ ರಾಜ್ಯಭಾರವನ್ನು ಸ್ವೀಕರಿಸಿರುವುದನ್ನೂ, ಅವರೆಗೆ ದೇಶದಲ್ಲಿರುವ ಸಕಲ ಕಾನೂನುಗಳೂ ನ್ಯಾಯನಿಬಂಧನೆಗಳೂ ಮುಂದೆ ಅನ್ಯಥಾ ಆಜ್ಞೆಮಾಡುವವರೆಗೆ ಜಾರಿಯಲ್ಲಿರತಕ್ಕದ್ದೆಂದೂ, ಸದ್ಯಃ ಸಂಸ್ಥಾನದ ಉನ್ನತೋದ್ಯೋಗಗಳಲ್ಲಿದ್ದು ಕಾರ್ಯಭಾರಗಳನ್ನು ನಡೆಸುತ್ತಿರುವ ಅಧಿಕಾರಿಗಳನ್ನೂ ಅವರವರ ಸ್ಥಾನಗಳಲ್ಲೇ ಕಾಯಂ ಮಾಡಲಾಗಿದೆಯೆಂದೂ, ಸಂಸ್ಥಾನದ ಪ್ರಜೆಗಳೆಲ್ಲರೂ ಆರ್ಷೇಯವಾದ ಮೈಸೂರು ರಾಜಸಿಂಹಾಸನಕ್ಕೆ ಭಕ್ತಿಗೌರವಗಳಿಂದ ಡೆನ ಮಕೊಂಡು ಬರತಕ್ಕದೆಂದೂ ಒಂದು ಪ್ರಸಿದ್ಧಪತ್ರಿಕೆಯನ್ನು ಹೊರಡಿಸಿದರು.

ಸಂಸ್ಥಾನದ ಆಳ್ವಿಕೆಯನ್ನು ಸ್ವತಃ ಕೈಕೊಂಡ ಮಹಾರಾಜಾ ಶ್ರೀಮಚ್ಚಾಮರಾಜೇಂದ್ರ ಒಡೆಯರವರು, ಈ ಮಹಾಸಂಸ್ಥಾನದ ರಾಜ್ಯಭಾರನಿರ್ವಹಣದಲ್ಲಿ ತಮಗೆ ಸಹಾಯಕವಾಗಿರಬೇಕೆಂದು ಒಂದು ಕೌನ್ಸಿಲ್ ಎಂಬ ಮಂತ್ರಾಲೋಚನಾ ಸಭೆಯನ್ನು ಏರ್ಪಡಿಸಿದರು. ಅದಕ್ಕೆ ದಿವಾನರೇ ಅಧ್ಯಕ್ಷರಾಗಿಯೂ ರಾಜತಂತ್ರ ವಿಶಾರದರೂ, ಅನುಭವಿಗಳೂ ಆದ ಇಬ್ಬರು ಅಥವ ಮೂವರು ದೊಡ್ಡಮನುಷ್ಯರು ಸದಸ್ಯರಾಗಿಯೂ ಇರತಕ್ಕದೆಂದೂ, ಆ ಸಭೆಯು ದೇಶದಲ್ಲಿ ಕಾನೂನುಗಳನ್ನು ರಚಿಸುವ, ಕಂದಾಯಕಟ್ಟಳೆಗಳನ್ನು ಹಾಕುವ, ರಾಜ್ಯಭಾರಕ್ಕೂ ಪ್ರಜೆಗಳ ಕ್ಷೇಮಕ್ಕೂ ಸಂಬಂಧಿಸಿದ ಇತರ ಎಲ್ಲಾ ಕೆಲಸಗಳನ್ನೂ ಗಮನಿಸುವ, ಬಹು ಜವಾಬುದಾರಿಯನ್ನು ಹೊತ್ತು ನಡೆಯಬೇಕಾದ ಮಹತ್ವದ ಕಾರ್ಯದಲ್ಲಿ ಶ್ರೀಮನ್ಮಹಾರಾಜರವರಿಗೆ ಸಹಾಯಕವಾಗಿರಬೇಕೆಂದೂ ನಿಯಮಿಸಿದರು. ಆ

ಸಭೆಗೆ ಆಗ ಚೀಫ್‌ಕೋರ್ಟಿನ ಜಡ್ಜಿಯವರಾಗಿದ್ದ ತಿರುಚ ನಾಪಳ್ಳಿ ರಾಯ ಲು ಆರೋಗ್ಯಸಾಮಿ ತಂಬೂಸೆಟ್ಟರೂ, ಪೂರ್ಣ ಕೃಷ್ಣರಾಯರೂ, ಅಟ್ಟ ಪಾಕಂ ರತ್ನಸಭಾಪತಿ ಮೊದಲಿಯಾರರೆಂಬುವರೂ ಸದಸ್ಯರಾಗಿ ನಿಯಮಿತ ರಾದರು. ಈ ಮಂತ್ರಾಲೋಚನಾಸಭೆಯ ಬೆಂಬಲದಿಂದ ಮಹಾರಾಜರವರು ೧೮೮೧ನೆಯ ಮಾರ್ಚಿ ೨೫ನೆಯ ತಾರೀಖಿನಿಂದ ರಾಜ್ಯಭಾರವನ್ನು ಪ್ರಾರಂ ಭಿಸಿದರು.

ರಾಜಕಾರ್ಯವಿಚಕ್ಷಣರಾದ ಶ್ರೀಮಾನ್ ರಂಗಾಚಾರ್ಲುಯವರ ಸಲಹೆ ಗಳನ್ನನುಸರಿಸಿ ಶ್ರೀಮನ್ ಮಹಾರಾಜರವರು ಮಾಡಿದ ಹಲವು ದೇಶಾಭಿವೃ ದ್ಧಿಕಾರ್ಯಗಳಲ್ಲಿ ಪ್ರಜಾಪ್ರತಿನಿಧಿ ಸಭಾಸ್ಥಾಪನೆಯೆಂಬುದು ಅತ್ಯಮೌಲ್ಯ ವಾದುದು. ದೇಶದ ಸಕಲ ಭಾಗಗಳಿಂದಲೂ, ಗಣ್ಯರಾದ ಪ್ರಜಾಪ್ರಮು ಖರನ್ನು ಕರೆಯಿಸಿಕೊಂಡು, ಹಾಗೆ ನೆರೆದ ಮಹಾಜನಸಭೆಯಲ್ಲಿ ದಿವಾನರ ವರು ಗತಸಂವತ್ಸರದ ಸಂಸ್ಥಾನದ ಆದಾಯ ವೆಚ್ಚಗಳನ್ನೂ, ನಡೆದ ಮುಖ್ಯ ಮುಖ್ಯ ಕಾರ್ಯಗಳ ವಿಚಾರವನ್ನೂ, ಸಧ್ಯದ ಆಡಳಿತ ಸ್ಥಿತಿಯ ನ್ನೂ, ಮುಂದಿನ ಸಂವತ್ಸರದಲ್ಲಿನ ಆದಾಯ ವೆಚ್ಚಗಳ ಅಂದಾಜಾ ಪಟ್ಟಿ ಯನ್ನೂ ಸರ್ಕಾರದವರು ಮಾಡಬೇಕೆಂದು ಉದ್ದೇಶಗೊಂಡಿರುವ ಕಾರ್ಯ ಗಳ ಸೂಚನೆಯನ್ನೂ ತಿಳಿಸಿ, ಆ ವಿಷಯದಲ್ಲಿ ಮಹಾಜನಗಳ ಅಭಿಪ್ರಾಯ ವನ್ನು ಪಡೆಯುವುದೂ ಮುಖ್ಯ ಕಾರ್ಯವಾಗಿದೆ. ಮಾತ್ರವಲ್ಲ, ಸಂಸ್ಥಾ ನದ ನಾನಾ ಪ್ರಾಂತಗಳಿಂದಲೂ ಬಂದಿದ್ದ ಆಯಾ ಪ್ರತಿನಿಧಿಗಳು ತಮ್ಮ ಗ್ರಾಮಾಂತರಗಳಲ್ಲಿ ಇರುವ ಕಷ್ಟನಿಷ್ಠೂರಗಳನ್ನು ಆ ಮಹಾ ಸಭೆಯಲ್ಲಿ ನಿವೇದಿಸಿ ಸರ್ಕಾರದವರು ಆ ವಿಚಾರದಲ್ಲಿ ಯೋಗ್ಯಪರಿಹಾರವನ್ನು ದಯ್ಯ ಪಾಲಿಸುವಂತೆ ಅನುಕೂಲಗೊಳಿಸುವುದೂ ಒಂದು ಮುಖ್ಯ ಅಂಶವಾಗಿದ್ದಿತು. ಈ ಸಭೆಯ ಮೂಲಕ ರಾಜ್ಯಭಾರವು ಇಂಗ್ಲೆಂಡ್ ದೇಶದ ರಾಜ್ಯಭಾರಕ್ರಮ ವನ್ನನುಸರಿಸಿ ಸಾಂಕುಶಪ್ರಭುತ್ವವಾಗಿ ನಡೆಯುವಂತಾಗಲು, ಕ್ರಮವಾಗಿ ದೇಶದ ಸುರಕ್ಷಣೆಗಾಗಿ ಹಲವು ಬದಲಾವಣೆಗಳು ಮಾಡಲ್ಪಟ್ಟುವು. ಸಂ ಸ್ಥಾನದ ಎಲ್ಲಾ ಇಲಾಖೆಗಳಲ್ಲೂ ಮಿತಿಮೀರಿ ಹೆಚ್ಚಿದ್ದ ಶಿಬ್ಬಂದಿಯನ್ನು ಕಡಮೆಮಾಡಿದರು. ಹೆಚ್ಚು ಸಂಬಳದ ಯೂರೋಪಿಯನ್ ಅಧಿಕಾರಿಗ ಳಿಗೆ ಬದಲಾಗಿ ಸಮರ್ಥರಾದ ದೇಶೀಯ ಅಧಿಕಾರಿಗಳನ್ನು ನಿಯಮಿಸಿದರು.

ತ೦ಲ್ಲೂಕುಗಳ ಸಂಖ್ಯೆಯನ್ನು ತಗ್ಗಿಸಿದರು. ದೇಶದ ಹಲವು ಭಾಗಗಳನ್ನು ರ್ೖಲು ಮಾರ್ಗದ ಮೂಲಕ ಸಂಬಂಧಿಸಿ, ಪ್ರಜೆಗಳ ಪ್ರಯಾಣಕ್ಕೂ ವ್ಯಾಪಾರ ಉದ್ಯೋಗಗಳಿಗೂ ವಿಶೇಷ ಅನುಕೂಲವನ್ನುಂಟುಮಾಡಿದರು.

ಹೀಗೆ ಅಭಿವೃದ್ಧಿಯ ಸೋಪಾನವನ್ನು ಅಡರುತ್ತಿದ್ದಾಗಲೇ ಒಂದು ದುರಂತ ದುಃಖವು ಒದಗಿ ಮಹಾರಾಜರಿಗೆ ಮನೋವ್ಯಾಕುಲವನ್ನುಂಟು ಮಾಡಿತು. ಉತ್ತಮವಾದ ರಾಜ್ಯಭಾರಕ್ಕೆ ಹಲವು ಬಗೆಯ ತಳಹದಿಗಳನ್ನು ಹಾಕಿ ದೇಶೀಯರ ಸುಖಸೌಲಭ್ಯಗಳನ್ನು ಹೆಚ್ಚಿಸಲು ಅಹರ್ನಿಶಿ ಶ್ರಮಿಸುತ್ತಿದ್ದ ಶ್ರೀಮಾನ್ ರಂಗಾಚಾರ್ಲುರವರು ಮುಂದೆ ಬಹುಸ್ವಲ್ಪ ಕಾಲದಲ್ಲೇ ಎಂದರೆ ೧೮೮೩ನೆಯ ಜನವರಿ ೨೦ರಲ್ಲಿ ಮದ್ರಾಸಿನಲ್ಲಿ ಕೀರ್ತಿಶೇಷರಾದರು. ಈ ಸಂಗತಿಯನ್ನು ಕೇಳಿ ಮಹಾರಾಜರು ವ್ಯಸನಾಕ್ರಾಂತರಾಗಿ ಕೆಲಕಾಲ ಏನು ಮಾಡಬೇಕೆಂದು ತೋರದವರಾಗಿದ್ದರೂ, ಒಡನೆ ಸಮಾಧಾನಪಟ್ಟುಕೊಂಡು, ಅವರಿಂದಲೇ ಸೂಚಿಸಲ್ಪಟ್ಟಿದ್ದಂತೆ, ಆಗ್ಗೆ ಈ ದೇಶದಲ್ಲೇ ಡೆಪ್ಯೂಟಿ ಕಮಿಷನರ್ ಉದ್ಯೋಗದಲ್ಲಿದ್ದ ಕೊಮರಪುರಂ ಶೇಷಾದ್ರಯ್ಯರ್ ಎಂಬ ಘನವಂತರನ್ನು ದಿವಾನರನ್ನಾಗಿ ನಿಯಮಿಸಿಕೊಂಡು, ಪ್ರಾರಂಭಿಸಿದ್ದ ಪ್ರಜಾನುಕೂಲ ಕಾರ್ಯಗಳನ್ನು ಮುಂದರಿಸಿದರು.

ಪಟ್ಟಾಭಿಷಿಕ್ತರಾದಮೇಲೂ ಶ್ರೀಮಾನ್ ಮಹಾರಾಜರವರು ಆಗಾಗ ಸ್ವದೇಶದಿಂದ ಹೊರ ಪ್ರಾಂತಗಳಲ್ಲಿ ಸಂಚರಿಸುತ್ತಿದ್ದುದುಂಟು. ವೈಸರಾಯಿ ರಿಪನ್ ಪ್ರಭುಗಳವರು ಮದ್ರಾಸಿಗೆ ಬಂದಿದ್ದ ವರ್ತಮಾನ ತಿಳಿದು ಅವರ ಸಂದರ್ಶನಕ್ಕಾಗಿ ಮದ್ರಾಸಿಗೆ ಹೋಗಿ ಅಲ್ಲಿಯ ಮಹಾಜನಗಳಿಂದ ಸತ್ಕರಿಸಲ್ಪಟ್ಟರು. ಸಂಸ್ಥಾನದ ಪ್ರಜೆಗಳಿಂದ ಮಾತ್ರವಲ್ಲದೆ, ಸಕಲರ ಪ್ರೀತಿ ವಿಶ್ವಾಸಗಳಿಗೂ ಪಾತ್ರರಾದ ಮಹಾರಾಜರವರ ಸದ್ಗುಣ ಸನ್ನಡತೆಗಳೂ ರಾಜ್ಯಭಾರ ವಿಚಕ್ಷಣೆಯೂ ಶ್ರೀಮದ್ವಿಕ್ಟೋರಿಯಾ ಚಕ್ರವರ್ತಿನಿಯವರಿಗೂ ಶ್ರುತವಾಗಿ ಅವರು ಬಹು ಸಮಾಧಾನಗೊಂಡು, ಜಿ. ಸಿ. ಎಸ್. ಐ. ಎಂಬ ಘನತರವಾದ ಬಿರುದನ್ನು ಕಳುಹಿಸಿ ಶ್ರೀಮಚ್ಚಾಮರಾಜಒಡೆಯರವರನ್ನು ಗೌರವಿಸಿದರು. ಶ್ರೀ ಚಾಮರಾಜೇಂದ್ರರು ಹೀಗೆ ಸಕಲವಿಧ ವೈಭ

ವಗಳಿಂದಲೂ ಕೂಡಿ ಧರ್ಮಮಾರ್ಗೈಕತತ್ಪರರಾಗಿ ರಾಜ್ಯಭಾರಮಾಡಿಕೊಂಡುಬಂದರು.

ಬ್ರಿಟಿಷರು ಮುಮ್ಮಡಿ ಕೃಷ್ಣರಾಜಒಡೆಯರಿಂದ ಮೈಸೂರು ರಾಜ್ಯವನ್ನು ತಮ್ಮ ಆಡಳಿತಕ್ಕೆ ತೆಗೆದುಕೊಂಡಾಗ ರಾಜ್ಯದ ಉತ್ಪತ್ತಿ ವ್ಯಯಗಳು ೫೫ ಲಕ್ಷಕ್ಕೆ ಮೀರಿರಲಿಲ್ಲ. ಅಲ್ಲದೆ ಆಗ ೮೨|| ಲಕ್ಷ ರೂ.ಗಳ ಸಾಲವೂ ಇದ್ದಿತು. ಮಹಾರಾಜರು ರಾಜ್ಯಸ್ವೀಕಾರಮಾಡಿದಮೇಲೆ ಆ ಉತ್ಪತ್ತಿಯು ನಾಲ್ಕಾರು ವರ್ಷಗಳ ಆಳ್ವಿಕೆಯೊಳಗಾಗಿ ೧೧೦ ಲಕ್ಷಕ್ಕೆ ಹೆಚ್ಚಿದ್ದಲ್ಲದೆ ಸಾಲವು ತೀರಿ ಭಂಡಾರದಲ್ಲಿ ೬೩ ಲಕ್ಷ ರೂ ಗಳನ್ನು ಶೇಖರ ಮಾಡಿಟ್ಟರು. ಪ್ರತಿ ವರ್ಷವೂ ಬ್ರಿಟಿಷ್ ಸರ್ಕಾರಕ್ಕೆ ಸಲ್ಲಬೇಕಾಗಿದ್ದ ೩೫ ಲಕ್ಷ ರೂ.ಗಳ ಪೊಗದಿಯನ್ನೂ ಸಲ್ಲಿಸಿ, ರಾಜ್ಯದಲ್ಲಿ ಕೆರೆ ಕಟ್ಟೆ ಕಾಲುವೆಗಳು ಮುಂತಾದವುಗಳನ್ನೂ ಅಭಿವೃದ್ಧಿಗೊಳಿಸಿ ವ್ಯಾಪಾರ ಮತ್ತು ಉದ್ಯೋಗಗಳಿಗೆ ವಿಶೇಷ ಸಹಕಾರಿಯಾಗಿರುವಂತೆ ಮೈಸೂರು ಬೆಂಗಳೂರು ರೈಲ್ವೆ, ಬೆಂಗಳೂರು ಹರಿಹರ ರೈಲ್ವೆ, ಮೈಸೂರು ನಂಜನಗೂಡು ರೈಲ್ವೆ ಈ ಮಾರ್ಗಗಳನ್ನೂ ಹಾಕಿಸಿ, ದೇಶದ ಸಂಪತ್ತು ವಿವಿಧ ಮಾರ್ಗಗಳಿಂದ ಹೆಚ್ಚಲು ಅವಕಾಶಗಳನ್ನು ಕಲ್ಪಿಸಿದರು. ಹಿಂದೆ ಎಲ್ಲಾ ಇಲಾಖೆಗಳ ಕೆಲಸಗಳನ್ನೂ ದಿವಾನರೊಬ್ಬರೇ ನೋಡಿಕೊಳ್ಳುವ ಪದ್ಧತಿಯಿದ್ದಿತು. ಆದಾಯವು ಹೆಚ್ಚಾದಂತೆಯೇ ಕೆಲಸವೂ ಹೆಚ್ಚಾದ್ದರಿಂದ ಅದರ ನಿರ್ವಹಣಕ್ಕಾಗಿ ಹೆಚ್ಚು ಸಿಬ್ಬಂದಿಯೂ ಆವಶ್ಯಕವಾಯಿತು. ೧೮೮೫ನೆಯ ಇಸವಿಯ ತರುವಾಯ ಮುಂದೆ ಆವಶ್ಯಕ ತೋರಿದಂತೆಲ್ಲ, ಫಾರೆಸ್ಟ್, ಆಬ್ಕಾರಿ, ಗಣಿ, ಪೋಲೀಸು, ವಿದ್ಯಾಭ್ಯಾಸ, ಮುಜರಾಯಿ, ನ್ಯಾಯವಿಧಾಯಕ ಇಲಾಖೆ ಮುಂತಾದ ಹಲವು ಇಲಾಖೆಗಳನ್ನು ಪ್ರತ್ಯೇಕಗೊಳಿಸಿ ಅವುಗಳ ಕಾರ್ಯನಿರ್ವಾಹಕ್ಕೆ ಸಮರ್ಥರಾದ ಅಧಿಕಾರಿಗಳನ್ನು ನಿಯಮಿಸಿದರು. ಅಲ್ಲದೆ ಪ್ರಾಚೀನ ಲಿಪ್ಯನ್ವೇಷಣ ಇಲಾಖೆ, ಸರ್ಕಾರಿಯ ಲೈಫ್ ಇನ್ಷೂರೆನ್ಸ್ ಇಲಾಖೆ, ಜಿಯಾಲಜಿಕಲ್ ಎಂದರೆ ಭೂಗರ್ಭ ಶೋಧಕ ಇಲಾಖೆ ಮುಂತಾದುವೂ ಹೊಸದಾಗಿ ನಿರ್ಮಿಸಲ್ಪಟ್ಟುವು. ವ್ಯವಸಾಯಾಭಿವೃದ್ಧಿಗಾಗಿ ಬಡ್ಡಿಯಿಲ್ಲದೆ ನಾಲಕೊಟ್ಟು ಸ್ವಲ್ಪ ಹಣದ ಕಂತುಗಳಿಂದ ಬರಮಾಡಿಕೊಳ್ಳುವ ಉದ್ದೇಶದಿಂದ ೧೪ ಲಕ್ಷ ರೂ.ಗಳ ಮೂಲಧನವನ್ನು ಕೊಟ್ಟು ವ್ಯವಸಾಯದ ಬ್ಯಾಂಕೆಂಬ

ಒಂದು ಸಂಸ್ಥೆಯನ್ನು ಏರ್ಪಡಿಸಿದರು. ಅಲ್ಲದೆ ರೈತರಿಗೆ ತಮ್ಮ ಕೆಲಸ ಗಳನ್ನು ನಿಶ್ಚಿಂತೆಯಿಂದ ನಡೆಯಿಸಿಕೊಂಡು ಹೋಗಲು ಆವಶ್ಯಕವಾಗಿದ್ದ ಸಕಲ ಅನುಕೂಲತೆಗಳನ್ನೂ ಒದಗಿಸಲು ತಕ್ಕ ನಿಬಂಧನೆಗಳನ್ನು ಕಲ್ಪಿ ಸಿದರು

ಶ್ರೀ ಚಾಮರಾಜೇಂದ್ರರ ರಾಜ್ಯಭಾರದಲ್ಲಿ ವಿದ್ಯಾಭ್ಯಾಸಕ್ಕೆ - ಮುಖ್ಯ ವಾಗಿ ಸಂಸ್ಕೃತ ವಿದ್ಯಾಭ್ಯಾಸಕ್ಕೆ ದೊರೆತ ಪ್ರೋತ್ಸಾಹವು ಸ್ತುತ್ಯವಾಗಿದೆ. ಆ ದೇವಭಾಷೆಯ ಉಜ್ಜೀವನಕ್ಕಾಗಿ ಬೆಂಗಳೂರಿನಲ್ಲಿ ಶ್ರೀ ಚಾಮರಾಜೇಂ ದ್ರ ಸಂಸ್ಕೃತ ಮಹಾಪಾಠಶಾಲೆಯೊಂದನ್ನೂ, ಮೈಸೂರಿನಲ್ಲಿ ಸರಸ್ವತೀ ಪ್ರಸಾದವೆಂಬೊಂದು ಮಹಾಪಾಠಶಾಲೆಯನ್ನೂ ಸ್ಥಾಪಿಸಿದರು. ಅಲ್ಲದೆ ತರ್ಕ, ವ್ಯಾಕರಣ, ವೇದಾಂತ, ನ್ಯಾಯಶಾಸ್ತ್ರ, ಮೊದಲಾದುವುಗಳಲ್ಲಿ ಪ್ರವೀ ಣತೆಯನ್ನು ಸಂಪಾದಿಸಲು ಕಾಶಿ ಮೊದಲಾದ ಸ್ಥಳಗಳಿಗೆ ಹೋಗಬಯಸಿದ ವರಿಗೆ ವಿದ್ಯಾರ್ಥಿವೇತನಗಳನ್ನೂ ಕೊಡಲು ಏರ್ಪಡಿಸಿದರು. ಆಗಾಗ ಶ್ರೀ ಮತಸ್ಥ ಮಠಾಧಿಪತಿಗಳನ್ನೂ ಆಸ್ಥಾನಕ್ಕೆ ಬರಮಾಡಿಸಿಕೊಂಡು ಅವರ ಸಮ್ಮುಖದಲ್ಲಿ ಶಾಸ್ತ್ರ ಚರ್ಚೆಯನ್ನು ನಡೆಯಿಸಿ ಪಂಡಿತರುಗಳಿಗೆ ಅಮೋಘ ವಾದ ಉಡುಗೆರೆಗಳನ್ನೂ, ಬಿರುದುಗಳನ್ನೂ ಪ್ರಸಾದಿಸಿ ಪ್ರೋತ್ಸಾಹಿಸುತ್ತಿ ದ್ದರು. ಅಲ್ಲದೆ ಸರಸ್ವತೀ ಭಂಡಾರವೆಂಬೊಂದು ಅಮೌಲ್ಯವಾದ ಸಂ ಸ್ಕೃತಗ್ರಂಥ ಸಮುದಾಯವೂ ಮಹಾರಾಜರಿಂದ ಏರ್ಪಟಿಸಲ್ಪಟ್ಟಿದ್ದಿತು.

ಶ್ರೀಮನ್ಮಹಾರಾಜರವರ ಆಸ್ಥಾನದಲ್ಲಿದ್ದ ಅನೇಕಾನೇಕ ಮಂದಿ ಸಂ ಸ್ಕೃತ ಮತ್ತು ಕನ್ನಡ ಪಂಡಿತರು, ಅಮೌಲ್ಯ ಗ್ರಂಥಗಳನ್ನು ರಚಿಸಿ, ಭಾಷಾಭಿವೃದ್ಧಿಯನ್ನುಂಟುಮಾಡುತ್ತಿದ್ದರು. ಮಹಾರಾಜರವರಿಗೆ ಸಂ ಗೀತ ಸಾಹಿತ್ಯಗಳಲ್ಲಿದ್ದ ವಿಶೇಷ ಅಭಿರುಚಿಯ ಪೂರ್ಣತೆಗಾಗಿ ಹಲವರು ವಿದ್ವಾಂಸರು ಆಯಾ ಶಾಸ್ತ್ರಗಳಲ್ಲಿ ವಿಶೇಷ ಪರಿಶ್ರಮ ಮಾಡುತ್ತಿದ್ದರು. 'ಶ್ರೀ ಚಾಮರಾಜೇಂದ್ರ ಕರ್ಣಾಟಕ ನಾಟಕ ಸಭಾ' ಎಂಬ ಹೆಸರಿನ ಒಂದು ಸಂಘವು ಸ್ಥಾಪನೆಯಾಗಿ ತನ್ಮೂಲಕ ನಾಟಕ ಕಲೆಯು ಅಭಿವೃದ್ಧಿಯಾಗಲು ಅವಕಾಶವಾಯಿತು. ಪಂಡಿತವರ್ಯರು ಕಾಳಿದಾಸಾದಿ ಮಹಾಕವಿಗಳ ಹಲವು ನಾಟಕಗಳನ್ನು ಕನ್ನಡ ಭಾಷೆಗೆ ತರ್ಜುಮೆಮಾಡಿ ಒದಗಿಸಿದರು

ಮಹಾರಾಜರು ನಾಟಕಾದಿಗಳಿಗೆ ಆವಶ್ಯಕವಾದ ಸಕಲೋಪಕರಣಗಳನ್ನೂ ಒದಗಿಸಿಕೊಟ್ಟು ಆ ಕಲೆಯ ಅಭಿವೃದ್ಧಿಗೆ ವಿಶೇಷ ಉತ್ತೇಜನ ಕೊಟ್ಟರು ಮಾತ್ರವಲ್ಲ, ಪ್ರಜಾಸಾಮಾನ್ಯದ ವಿದ್ಯಾಭ್ಯಾಸಕ್ಕೂ ಈ ಮಹಾರಾಜರಕಾಲದಲ್ಲಿ ವಿಶೇಷ ಉತ್ತೇಜನ ದೊರೆಯಿತು. ದೇಶದ ಎಲ್ಲಾ ಭಾಗದಲ್ಲೂ ಪ್ರೈಮರಿ ಪಾಠಶಾಲೆಗಳೆಂಬ ಸಾವಿರಾರು ಪ್ರಾರಂಭ ಶಾಲೆಗಳೂ ಇಂಗ್ಲೀಷ್ ಪಾಠಶಾಲೆಗಳೂ, ಶಿಲ್ಪವಿದ್ಯೆಯನ್ನು ಕಲಿಸುವ ಪಾಠಶಾಲೆಗಳೂ, ಉಪಾಧ್ಯಾಯರನ್ನು ತರಪೇತು ಮಾಡುವ ಶಾಲೆಗಳೂ, ಬಿ. ಎ. ಪರೀಕ್ಷೆಯವರೆಗೆ ಪಾಠ ಹೇಳುವ ಕಾಲೇಜೂ, ಮೂವತ್ತು ಸಂಸ್ಕೃತ ಪಾಠಶಾಲೆಗಳೂ, ಮೂರು ಸಂಸ್ಕೃತ ಪ್ರೌಢ ಪಾಠಶಾಲೆಗಳೂ ಏರ್ಪಾಡಾಗಿ ಜನಾಂಗದ ವಿದ್ಯಾಭ್ಯಾಸವು ವಿಶೇಷ ರೀತಿಯಿಂದ ಸಾಗತೊಡಗಿತು. ಓರಿಯಂಟಲ್ ಲೈಬ್ರರಿ ಎಂಬೊಂದು ಗ್ರಂಥ ಭಂಡಾರವನ್ನು ವಿಕ್ಟೋರಿಯಾ ಚಕ್ರವರ್ತಿನಿಯವರ ಜ್ಯೂಬಿಲೀ ಮಹೋತ್ಸವದ ಜ್ಞಾಪಕಾರ್ಥವಾಗಿ ಸ್ಥಾಪಿಸಿದುದಲ್ಲದೆ, ಮುದ್ರಣ ಶಾಲೆಗಳನ್ನೂ ಏರ್ಪಡಿಸಿ ಕರ್ಣಾಟಕ-ಸಂಸ್ಕೃತ-ಆಂಗ್ಲೇಯ ಗ್ರಂಥಗಳ ಬೆಳವಣಿಗೆಗೆ ವಿಶೇಷ ಅವಕಾಶವನ್ನು ಕಲ್ಪಿಸಿದರು.

ಶ್ರೀಮನ್ಮಹಾರಾಜರವರ ಆಳ್ವಿಕೆಯಲ್ಲಿ ನಮ್ಮ ಸೀಮೆಯಲ್ಲಿ ಸ್ತ್ರೀ ವಿದ್ಯಾಭ್ಯಾಸಕ್ಕೆ ವಿಶೇಷ ಪ್ರೋತ್ಸಾಹವುಂಟಾಯಿತು. ಚಿನ್ನದ ಗಣಿಯ ಕೆಲಸಗಳಿಗೂ, ಕಾಫಿಯ ವ್ಯವಸಾಯಕ್ಕೂ ವಿಶೇಷ ಪ್ರೋತ್ಸಾಹವು ಕೂಡಲ್ಪಟ್ಟಿತು. ಮೈಸೂರು ರಾಜಧಾನಿಯು ಭವ್ಯವಾದ ಹಲವು ಕಟ್ಟಡಗಳು ರಸ್ತೆಗಳು ಉದ್ಯಾನಗಳಿಂದ ಸಿಂಗರಿಸಲ್ಪಟ್ಟಿತು. ಇವುಗಳಲ್ಲದೆ, ದೇಶಾಭಿವೃದ್ಧಿಗೆ ಒದಗಿಸಲ್ಪಟ್ಟ ಹಲವು ಉಪಯುಕ್ತಸಾಧನಗಳ ಮೂಲಕ ರಾಜ್ಯದ ಆದಾಯವೂ ಒಂದಕ್ಕೆ ಎರಡರಷ್ಟು ಹೆಚ್ಚಿತು. ಮಹಾರಾಜರ ಆಳ್ವಿಕೆಯು ಅಂತ್ಯವಾಗುವ ವೇಳೆಗೆ ಎಂದರೆ ೧೮೯೪ನೆಯ ಸಂವತ್ಸರದಲ್ಲಿ ಸಂಸ್ಥಾನದ ಆದಾಯವು ೧೮೦॥ ಲಕ್ಷ ರೂಪಾಯಿಗಳಾಗಿತ್ತು. ಮೈಸೂರು ದೇಶದ ರಾಜ್ಯಭಾರಕ್ರಮವೂ, ಶ್ರೀಮನ್ಮಹಾರಾಜರ ರಾಜನೀತಿನೈಪುಣ್ಯವೂ ಭರತಖಂಡದ ದೇಶೀಯ ರಾಜರಿಗೆಲ್ಲಾ ಆದರ್ಶಪ್ರಾಯವಾದುದೆಂದು, ಈ ದೇಶವನ್ನು ಸಂದರ್ಶಿಸಿದ ಹಲವುಮಂದಿ ಯುರೋಪ್ಯ ಅಧಿಕಾರಿಗಳೂ, ಲಾರ್ಡ್‌ಡಫರಿನ್, ಮಾರ್ಕ್ವಿಸ್ ಲ್ಯಾನ್ಸ್‌ಡಾನ್, ಅರ್ಲ್‌ಎಲ್ಗಿನ್ ಮೊದ

ಲಾದ ವೈಸರಾಯಿಗಳೂ ಶ್ಲಾಘಿಸಿರುತ್ತಾರೆ. ಲಂಡನ್ ಟೈಂಸ್ ಮುಂತಾದ ಸುಪ್ರಸಿದ್ಧ ಪತ್ರಕರ್ತರು ಸಹ, ಪ್ರಜಾಪ್ರತಿನಿಧಿಸಭಾ ಸ್ಥಾಪನಾದಿ ಪ್ರಜಾಹಿತಕರ ಕಾರ್ಯಗಳಿಂದ ರಾಜ್ಯಭಾರಮಾಡುತ್ತಿರುವ ಶ್ರೀಮನ್ಮಹಾರಾಜರವರ ಗುಣಕಥನಮಾಡಿರುತ್ತಾರೆ ಇಂತಹ ಯಶಸ್ಸನ್ನು ಗಳಿಸಿದ ಶ್ರೀ ಚಾಮರಾಜೇಂದ್ರರ ರಾಜ್ಯಭಾರವು ಅನ್ಯಾದೃಶವಾದುದಿರಬೇಕಲ್ಲವೆ? ಅಷ್ಟು ಮಾತ್ರವಲ್ಲ- ಅದರ ಆ ಧವಳಯಶಸ್ಸನ್ನು ಕಾಯ್ದುಕೊಳ್ಳುವಲ್ಲಿ, ಅವರ ಉತ್ತರಾಧಿಕಾರಿಗಳ ಮೇಲೆಬಿದ್ದಿರುವ ಉತ್ತರವಾದಿತ್ವವೇನು ಸಾಮಾನ್ಯವಾದುದೇ ?—

## ದೇಶಸಂಚಾರ — ನಿರ್ಯಾಣ — ಗುಣಕಥನ

ಪ್ರಾರಂಭದಿಂದಲೂ ಸಾಹಸಪ್ರಿಯರಾದ ಆಂಗ್ಲ ಅಧ್ಯಾಪಕರ ಪರಾಮರಿಕೆಯಲ್ಲೇ ಪಳಗಿಬಂದ ಶ್ರೀ ಚಾಮರಾಜೇಂದ್ರರಿಗೆ ದೇಶಸಂಚಾರದಲ್ಲಿ ವಿಶೇಷ ಪ್ರೀತಿಯುಂಟಾಗಿತ್ತು. ಒಳದೇಶ ಸಂಚಾರವನ್ನು ತಮ್ಮ ಆಡಳಿತಕ್ಕೊಳಪಟ್ಟ ಪ್ರಜಾವರ್ಗದ ಕಷ್ಟಸುಖಗಳನ್ನು ಸ್ವಂತವಾಗಿ ನೋಡಿ ಅವರ ಕೊರತೆಗಳನ್ನು ನೀಗಿಸಿ ಸುಖವನ್ನು ಹೆಚ್ಚಿಸಲಿಕ್ಕಾಗಿಯೂ, ಹೊರದೇಶಸಂಚಾರವನ್ನು ತಮ್ಮ ರಾಜ್ಯಭಾರದಲ್ಲಿ ನೂತನ ವಿಧಾನಗಳನ್ನು ರೂಢಿಗೆ ತರಲು ಅನುಭವ ಸಂಪಾದನೆಗಾಗಿಯೂ, ಆರೋಗ್ಯಸಾಧನೆಗಾಗಿಯೂ ಕೈಕೊಳ್ಳುತ್ತಿದ್ದರು. ೧೮೮೫ರಲ್ಲಿ ಒಂದು ಬಾರಿ ಒಳದೇಶದಲ್ಲಿ ಸಂಚಾರ ಹೊರಟು, ಹಾಸನ ಕಡೂರು ಶಿವಮೊಗ್ಗಾ ಡಿಸ್ಟ್ರಿಕ್ಟುಗಳಲ್ಲಿ ಸಂಚರಿಸಿ, ಹಲವು ಪ್ರೇಕ್ಷಣೀಯ ಸ್ಥಳಗಳನ್ನು ನೋಡಿಕೊಂಡು, ಅಲ್ಲಲ್ಲಿ ನೆರೆದು ಕಾಣಿಕೆಗಳನ್ನೊಪ್ಪಿಸಿ ವಂದಿಸಿದ ರಾಜಭಕ್ತಿಯುತರಾದ ಪ್ರಜೆಗಳ ಮನವಿಗಳನ್ನು ಸ್ವೀಕರಿಸಿ ರಾಜಧಾನಿಗೆ ಹಿಂದಿರುಗಿದರು. ೧೮೮೭ನೆಯ ಸಂವತ್ಸರದಲ್ಲಿ ಉತ್ತರದೇಶ ಸಂಚಾರವನ್ನು ಕೈಕೊಂಡು ಹೊರಟು, ಹೈದರಾಬಾದು, ಮುಂಬಯಿ, ಪ್ರಯಾಗ, ಕಲ್ಕತ್ತ, ಅಲ್ಲಿಂದ ಲಾಹೋರು ಅಮೃತಸರ, ಆಗ್ರಾ ಮಥುರಾ ಬೃಂದಾವನಗಳನ್ನು ನೋಡಿಕೊಂಡು ತರುವಾಯ ರಾಜಪುತಾನದ ಜಯಪುರ ಜ್ಯೋತಿಪುರ- ಬರೋಡ ಮುಂತಾದ ದೇಶೀಯ ಸಂಸ್ಥಾನಗಳಲ್ಲೂ ಸಂಚರಿಸಿ ರಾಜಧಾನಿಯನ್ನು ಕುರಿತು ಪ್ರಯಾಣಮಾಡಿ

ದರು. ಬ್ರಿಟಿಷರ ರಾಜ್ಯದ ಮುಖ್ಯಪಟ್ಟಣಗಳಲ್ಲಿ ಗವರ್ನರುಗಳೂ ಆಂಗ್ಲ ಸರದಾರರುಗಳೂ, ಕಲ್ಕತ್ತಾದಲ್ಲಿ ವೈಸರಾಯಿ ಮತ್ತು ಸರ್ವಸೈನ್ಯಾಧಿಪತಿಯೂ ಅವರನ್ನು ಅವರ ಸ್ಥಾನಮಾನಗಳಿಗೆ ತಕ್ಕಂತೆ ಕಂಡು ಗೌರವಿಸಿ ಸತ್ಕರಿಸಿದರು. ದೇಶೀಯ ಸಂಸ್ಥಾನಗಳಲ್ಲಿ ಅವರಿಗೆ ನಡೆದ ಆತಿಥ್ಯಗಳಂತೂ ಅಭೂತಪೂರ್ವವಾದುವು.

ಇದಾದ ತರುವಾಯ ಮತ್ತೊಂದಾವೃತ್ತಿ ಉತ್ತರದೇಶ ಪ್ರಯಾಣ ಮಾಡಲುದ್ದೇಶಿಸಿ ಸಮುದ್ರಯಾನ ಮೂಲಕವಾಗಿ ಹೊರಟು ಕಲ್ಕತ್ತಾ, ಡಾರ್ಜೀಲಿಂಗ್, ಕಾಶಿ ಮುಂತಾದ ಸ್ಥಳಗಳಲ್ಲಿ ಸಂಚರಿಸಿ, ಹಲವರು ಗಣ್ಯ ಪುರುಷರನ್ನು ಕಂಡು ಸಂಭಾಷಿಸಿ ಭಾಗೀರಥೀ ಸ್ನಾನಮಾಡಿ ವಿಶ್ವೇಶ್ವರನನ್ನಾರಾಧಿಸಿ ತರುವಾಯ ಗ್ವಾಲಿಯರ್ ರಾಜ್ಯಕ್ಕೆ ಬಂದು ಆ ರಾಜರ ಅತಿಥಿಗಳಾಗಿದ್ದರು. ಆಗ ಅವರ ನಾಲ್ಕನೆಯ ಪುತ್ರರಾದ ಕೇವಲ ಚಿಕ್ಕ ವಯಸ್ಸಿನ ಮಗುವು ಮೃತವಾಯಿತೆಂಬ ತಂತೀವಾರ್ತೆಯು ತಿಳಿಸಿತು. ಒಡನೆ ಅಲ್ಲಿಂದ ಹೊರಟು ರಾಜಧಾನಿಯನ್ನು ಸೇರಿದರು. ಮಾರನೆಯ ವರ್ಷ ದಂಪತ್ಸಮೇತರಾಗಿ ತಮ್ಮ ಈರ್ವರು ಪುತ್ರರು ಮೂವರು ಪುತ್ರಿಯರೊಂದಿಗೆ ಕಾಶೀಯಾತ್ರೆಗಾಗಿ ನಡೆದು ಅಲ್ಲಿ ತ್ರಿವೇಣೀಸ್ನಾನಮಾಡಿ, ಮಹಾರಾಣಿಯವರಿಂದ ವೇಣೀದಾನ, ಸುವಾಸಿನೀ ಪೂಜೆ ಮುಂತಾದುವುಗಳನ್ನು ಮಾಡಿಸಿ, ಮೂರುದಿವಸ ಕ್ಷೇತ್ರವಾಸಮಾಡಿ ವಿವಿಧ ದಾನದಕ್ಷಿಣೆಗಳಿಂದ ಸಾಧುವೃಂದವನ್ನೂ ದೀನಾನಾಥರನ್ನೂ ಆದರಿಸಿ ರಾಜಧಾನಿಯನ್ನು ಸೇರಿ, ಗಂಗಾ ಯಮುನಾ ನದಿಗಳ ದಿವ್ಯ ಜಲಗಳಿಂದ ರಾಜಧಾನಿಯ ದೇವಾಲಯಗಳಲ್ಲೆಲ್ಲ ಅಭಿಷೇಕನಡಿಸಿ ಅತಿಶಯವಾಗಿ ಗಂಗಾ ಸಮಾರಾಧನೆಯನ್ನು ಮಾಡಿಸಿ ಸಕಲರನ್ನೂ ದಕ್ಷಿಣೆ ತಾಂಬೂಲಾದಿಗಳಿಂದ ತೃಪ್ತಿಗೊಳಿಸಿದರು. ೧೮೯೪ನೆಯ ಡಿಸಂಬರು ತಿಂಗಳಲ್ಲಿ ಅವರು ಪುನಃ ಮತ್ತೊಮ್ಮೆ ಕೈಕೊಂಡ ಉತ್ತರದೇಶ ಪ್ರಯಾಣವೇ ಅವರ ಕೊನೆಯ ಪ್ರಯಾಣವಾಗಿಯೂ, ಅವರ ಪ್ರಾಣಾಂತ್ಯಕಾರಿಯಾಗಿಯೂ ಪರಿಣಮಿಸಿತು. ಆ ಸಂವತ್ಸರದ ನವರಾತ್ರಿಯ ಉತ್ಸವವಾದ ತರುವಾಯ ಒಂದು ತಿಂಗಳು ಮಾತ್ರ ರಾಜಧಾನಿಯಲ್ಲಿದ್ದು ಡಿಸಂಬರು ೯ನೆಯ ದಿನ ಪುತ್ರಮಿತ್ರಕಳತ್ರಾದಿಗಳೊಡನೆ ಮಹಾರಾಜರು ರಾಜಧಾನಿಯಿಂದ ಪ್ರಯಾಣಮಾಡಿದರು. ಮಹಾರಾಜ

ರ... ರಾಜಧಾನಿಯಲ್ಲಿ ಸಂದರ್ಶಿಸಿದ್ದು ಅದೇ ಕೊನೆಯಾಯಿತು. ಮಹಾರಾಜರು ಪೂನಾನಗರದ ಮಾರ್ಗವಾಗಿ ಪ್ರಯಾಣಮಾಡಿ ಅಲಹಾಬಾದ್ (ಪ್ರಯಾಗಾ) ಮಾರ್ಗವಾಗಿ ಕಲ್ಕತ್ತಾವನ್ನು ಸೇರಿದರು. ಅಲ್ಲಿಗೆ ಸೇರಿದಾಗಲೇ ಅವರಿಗೆ ದೇಹದಲ್ಲಿ ಜ್ವರವು ಕಾಣಿಸಿಕೊಂಡು, ದಿನದಿನಕ್ಕೆ ಅದೇ ಪ್ರಬಲವಾಗತೊಡಗಿತು. ಸುಪ್ರಸಿದ್ಧರಾದ ಅನೇಕಮಂದಿ ವೈದ್ಯರ ಚಿಕಿತ್ಸೆಗಳೂ ಉಪಯೋಗವಾಗಲಿಲ್ಲ. ಹದಿನಾಲ್ಕು ಹದಿನೈದು ದಿನಗಳ ವೇಳೆಗೆ ಮಹಾರಾಜರ ದೇಹದಲ್ಲಿ ರೋಗವು ವಿಶೇಷವಾಗಿ ಮನೆಮಾಡಿಕೊಂಡಿತು. ಮೃತ್ಯುವೇ ರೋಗರೂಪದಿಂದ ಬಂದಿರುವಲ್ಲಿ ಅದಿನ್ನು ಗುಣವಾಗುವುದೆಂದರೇನು? ಕೊನೆಗೆ ಅದು ಡಿಫ್ತೀರಿಯಾ ಎಂಬ ಕಂಠನಾಳ ಸಂಬಂಧವಾದ ರೋಗವೆಂದು ತಿಳಿಯಿತಂತೆ! ಅದು ಗಳಿಗೆ ಗಳಿಗೆಗೆ ಹಾಗೆ ಹೆಚ್ಚಾಗುತ್ತ ಬಂದು, ೧೮೯೪ನೆಯ ಡಿಸೆಂಬರು ೨೮ನೆಯ ಶುಕ್ರವಾರ ಪ್ರಾತಃಕಾಲ ಅವರ ಜೀವನಚರಿತ್ರೆಯನ್ನು ಅಂತಿಮಾವಸ್ಥೆಗೆ ತಂದಿಟ್ಟಿತು ಶ್ರೀಮನ್ಮಹಾರಾಜರವರು ಆ ಕೊನೆಗಾಲದಲ್ಲೂ, ತಮಗೆ ಪ್ರಾಣಪ್ರಿಯವಾದ ಈ ದೇಶವನ್ನೂ- ತಮ್ಮ ಕು ಲ ದೇ ವ ತೆ ಯ ನ್ನೂ ಮರೆಯದೆ- ತಾಯಿ ಚಾಮುಂಡಾಂಬಿಕೆ- ಎಂದು ಮೂರು ಬಾರಿ ಉಚ್ಚರಿಸಿ ಕಣ್ಣುಮುಚ್ಚಿದರು. ಒಡನೆ ಆ ಸಮಯದಲ್ಲಿ ಗಾಢಾಂಧಕಾರವು ಲೋಕವನ್ನು ವ್ಯಾಪಿಸಿದ್ದಂತೆಯೇ, ಅವರ ಮರಣವಾರ್ತೆಯೂ ಮಹಾರಾಜರ ಪತ್ನೀಪರಿವಾರಗಳನ್ನೆಲ್ಲ ವ್ಯಾಪಿಸಿ, ಅವರನ್ನು ದುಃಖಸಾಗರದಲ್ಲಿ ಮುಳುಗಿಸಿತು.

ಬಹುದೂರದೇಶವಾದ ಆ ಪರಸ್ಥಳದಲ್ಲಿ ಪತ್ನೀಪುತ್ರಾದಿಗಳನ್ನೂ ಏಕಾಕಿಗಳಾಗಿ ಮಾಡಿ ಮಹಾರಾಜರು ದೇಹಬಿಟ್ಟ ವಿಷಯದಲ್ಲಿ ರಾಣೀವಾಸದವರಿಗುಂಟಾದ ಮನೋವ್ಯಥೆಯನ್ನೂ, ಭಯವನ್ನೂ, ಕಳವಳವನ್ನೂ ಕುರಿತು ಇಲ್ಲಿ ಹೇಳಬೇಕಾದ ಪ್ರಕೃತವೇನಿದೆ! ಶ್ರೀಮನ್ಮಹಾರಾಣಿಯವರು ಪರ್ವತವೇ ಕಳಚಿ ತಲೆಯಮೇಲೆ ಬಿದ್ದಂತೆ ದುಃಖಾಕ್ರಾಂತರಾಗಿ ಕುಳಿತಿರಲು ದಿವಾನರೂ ಸಂಗಡವಿದ್ದ ಇತರ ಭಕ್ಷೀರುಗಳೂ ಅವರಿಗೆ ಸಮಯೋಚಿತವಾಗಿ ದುಃಖೋಪಶಮನಮಾಡಿದರು. ಮಾರನೆಯ ದಿನ ಮಹಾರಾಜಯೋಗ್ಯವಾದ ಮೆರವಣಿಗೆಯೂ, ಕರ್ನಲ್ ಪದವೀಧರರಾಗಿದ್ದುದರಿಂದ ವೈಸರಾಯಿಯವರ ಆಜ್ಞಾಪ್ರಕಾರವಾಗಿ ಬಂದ ಸೈನ್ಯದ ಮರ್ಯಾ

ವೆಯೂ ನಡೆದು, ರಾಜಕಳೇಬರವು ಕಲ್ಕತ್ತೆಯ ಕಾಳೀಘಾಟಿನಲ್ಲಿ ದಹನ ವಾಯಿತು ತರುವಾಯ ರಾಜಬಂಧುಗಳೂ ಪರಿವಾರವೂ ಅಸ್ಥಿಗಳನ್ನು ಗಂಗೆಗೆ ಸಾಗಿಸಿ ಅಲ್ಲಿಂದ ಹೊರಟು, ದುಃಖಸಾಗರಮಗ್ನರಾಗಿ ರಾಜಧಾನಿ ಯನ್ನು ಸೇರಿದರು. ಮುಂದೆ ರಾಜಧಾನಿಯಲ್ಲಿ ಮಹಾರಾಜರ ಊರ್ಧ್ವ ದೈಹಿಕಕರ್ಮಾದಿಗಳು ವಿಧ್ಯುಕ್ತವಾಗಿ ನಡೆದು, ಮೃತರ ಚೇತನತೃಪ್ತಿಗಾಗಿ ಅಧಿಕಾಧಿಕವಾದ ದಾನದಕ್ಷಿಣೆಗಳೂ, ಇತರ ಹಲವು ಬಗೆಯ ಧರ್ಮಕಾರ್ಯ ಗಳೂ ಮಾಡಲ್ಪಟ್ಟುವು. ಭೂಸುರವರ್ಗವೂ ಇತರರೂ ಸಹಸ್ರಾರು ಸಂಖ್ಯೆ ಯಿಂದ-ಅನ್ನದಾನಾದಿಗಳಿಂದ ತೃಪ್ತಿಗೊಳಿಸಲ್ಪಟ್ಟರು.

ಶ್ರೀ ಚಾಮರಾಜೇಂದ್ರರಲ್ಲಿ ಧೈರ್ಯ ಔದಾರ್ಯ ಗಾಂಭೀರ್ಯ ಕ್ಷಮಾದಿಗುಣಗಳು ವಿಶೇಷ ಪರಿಮಾಣದಿಂದ ನೆಲೆಸಿ ಅವರನ್ನು ಮಾನವ ಶ್ರೇಷ್ಠರೆನ್ನಿಸಲು ಸಾಕಾಗಿದ್ದುವು ಅವರಲ್ಲಿದ್ದ ದಂಭರಾಹಿತ್ಯತೆ, ಅವರ ಮಹಾರಾಜಪದವಿಗೆ ಅಸಾಧ್ಯವೆನ್ನಿಸಲ್ಪಡಬಹುದಾದ ಸಹನಗುಣ, ಮಾತೃ ಭಕ್ತಿ, ಭೃತ್ಯವಾತ್ಸಲ್ಯ, ಸ್ವಜನಪ್ರೇಮ, ಮನುಷ್ಯರಲ್ಲಿ ಮಾತ್ರವಲ್ಲದೆ ತಿರ್ಯಗ್ಜಂತುಗಳಲ್ಲೂ ಅವರಲ್ಲಿ ಕಂಡುಬರುತ್ತಿದ್ದ ಅಂತರಿಕವಾದ ದಯೆ ಇವುಗಳಿಗೆ ಉದಾಹರಣೆಗಳನ್ನು ಕೊಟ್ಟು ವರ್ಣಿಸಲು, ಈ ಚಿಕ್ಕ ಗ್ರಂಥ ವಲ್ಲಿ ಸಾಧ್ಯವಿಲ್ಲದುದಕ್ಕಾಗಿ ವಿಷಾದವಾಗುತ್ತದೆ ಸಕಲರಲ್ಲೂ ಸ್ನೇಹ ಪರತ್ವ, ಉದಾರಪ್ರಕೃತಿ, ಎಂತಹ ಕಷ್ಟದಲ್ಲೂ ಎದೆಗುಂದದಂತಹ ಧೈರ್ಯ, ಈ ಮುಂತಾದ ಅವರ ಸದ್ಗುಣಗಳು ಅನುಕರಣೀಯಗಳಾಗಿವೆ. ಎಷ್ಟು ಗುಣಗಳಿದ್ದರೂ ಕಾಲಮೃತ್ಯುವೇನೋ ಕೊಂಡೊಯ್ಯದೆ ಬಿಡಲಾರದಲ್ಲವೆ ?

## ಉ ಪ ಸಂ ಹಾ ರ

ಔರಸ ಸಂತಾನವಿಲ್ಲದೆ, ಮೈಸೂರು ರಾಜವಂಶವು ಮುಳುಗಿಹೋಗ ತಕ್ಕುದೇ ಎಂದು ಸಕಲರೂ ನಿರಾಶರಾಗಿದ್ದಾಗ ಸ್ವೀಕೃತಪುತ್ರರಾಗಿ ರಾಜ ಸಿಂಹಾಸನವನ್ನಲಂಕರಿಸಿದ ಶ್ರೀ ಚಾಮರಾಜೇಂದ್ರರು, ತಮ್ಮ ಧೈರ್ಯೌ ದಾರ್ಯಗಳು, ಧೃತಿಕ್ಷಮೆಗಳು, ವಿದ್ಯೆ ವಿನಯಾದಿ ಸಂಪತ್ತುಗಳು ಮುಂತಾ ದುವುಗಳಿಂದ ಸಕಲರನ್ನೂ ಮೆಚ್ಚಿಸಿ, ಹನ್ನೆರಡು ವರ್ಷಗಳ ತಮ್ಮ ರಾಜ್ಯ

ಧಾರದಿಂದ ದೇಶವನ್ನು ಸರ್ವಸಂಪತ್ಪರಿಪೂರ್ಣವಾದುದನ್ನಾಗಿಸಿದರು. ಶ್ರೀಮನ್ಮಹಾರಾಜಾ ಚಾಮರಾಜೇಂದ್ರರ ದೇಹಸಂಪತ್ತಿಯೂ ಹಸನ್ಮುಖವೂ ಹೃದಯಾಹ್ಲಾದಕರವಾದುವು. ಸಕಲ ದೃಷ್ಟಿಗಳಿಂದಲೂ ರಾಜಪೀಠಕ್ಕೆ ಯೋಗ್ಯರೆಂದರೆ ಇವರೇ ಎಂದು ದೇಶೀಯರಿಂದಲೂ ಪರಕೀಯರಿಂದಲೂ ಶ್ಲಾಘನೆಗೆ ಪಾತ್ರರಾಗಿದ್ದ ಈ ಮಹಾರಾಜರು ತಾವು ಪಡೆದಿದ್ದ ಪರಿಪೂರ್ಣಾನುಭವದಿಂದ ಮುಂದೆ ಮಾಡಬಹುದಾಗಿದ್ದ ದೇಶಾಭಿವೃದ್ಧಿ ಕಾರ್ಯಗಳನ್ನು ಪಡೆದು ಸುಖಾನುಭವಮಾಡುವ ಯೋಗವಿಲ್ಲದ ಮೈಸೂರಿನ ಪ್ರಜೆಗಳು ನಿಶ್ಚಯವಾಗಿ ದುರ್ದೈವಿಗಳು !—

ಮಹಾರಾಜರವರ ಮರಣಾನಂತರ ರಾಜ್ಯಭಾರವು ಅವರ ಜ್ಯೇಷ್ಠಕುಮಾರರಾದ ಆಳುವ ಶ್ರೀ ಕೃಷ್ಣರಾಜೇಂದ್ರರಿಗೆ ವಹಿಸಲ್ಪಡಬೇಕೆಂದೂ, ಅವರ ಬಾಲ್ಯಾವಧಿಯು ತೀರುವವರೆಗೆ ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರು ರೀಜೆಂಟರಾಗಿ ದಿವಾನ್ ಮತ್ತು ಕೌನ್ಸಿಲರುಗಳ ಸಹಾಯದಿಂದ ರಾಜ್ಯಭಾರವನ್ನು ನಡೆಯಿಸತಕ್ಕುದೆಂದೂ ಬ್ರಿಟಿಷ್ ಸರ್ಕಾರದವರ ಆಜ್ಞೆಯಾಯಿತು. ಅಂತೆಯೇ ೧೮೯೫ನೆಯ ಫೆಬ್ರವರಿ ೧ನೆಯ ದಿನ ಯುವರಾಜರಾದ ಶ್ರೀ ಕೃಷ್ಣರಾಜ ಒಡೆಯರವರಿಗೆ ಪಟ್ಟಾಭಿಷೇಕ ಮಹೋತ್ಸವವು ನೆರವೇರಿತು. ಈಚೆಗೆ ಯುಕ್ತವಯಸ್ಕರಾದ ತರುವಾಯ ಇವರೇ ನಾಲ್ವಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರವರೆಂದು ಮೈಸೂರಿನ ರತ್ನಸಿಂಹಾಸನಾರೂಢರಾಗಿ ಪ್ರಜೆಪರಿವಾರಗಳನ್ನು ಧರ್ಮಮಾರ್ಗೈಕತತ್ಪರರಾಗಿ ಪಾಲಿಸಿಕೊಂಡು ಬರುತ್ತಿರುವರು.

'ಸತ್ಯಮೇವೋದ್ಧರಾಮ್ಯಹಂ' ಎಂಬ ಮೈಸೂರು ರಾಜವಂಶೀಯರ ಏಕಮಾತ್ರ ಧ್ಯೇಯವನ್ನು ನಿತ್ಯವೂ ಕಣ್ಣೆದುರಲ್ಲಿಟ್ಟುಕೊಂಡು, ನಮ್ಮ ರಾಜರು ಪ್ರಜಾಪಾಲನೆ ಮಾಡುತ್ತಾ ಬರಲಿ. ಪ್ರಜೆಗಳು ರಾಜಭಕ್ತಿಯುತರಾಗಿ ತಮ್ಮ ಆಳುವ ರಾಜವಂಶವನ್ನು 'ಚಿರಮಭಿವರ್ಧತಾಂ ಯದುಸಂತಾನ ಶ್ರೀಃ' ಎಂದು ಹರಸುತ್ತಾ ಬರಲಿ! ರಾಜ ಪ್ರಜೆಗಳಲ್ಲಿ ಪರಸ್ಪರ ಪ್ರೀತಿವಿಶ್ವಾಸಗಳು ಸರ್ವದಾ ನೆಲೆಸಿ ದಿನದಿನಕ್ಕೆ ಸುಖಸಂತೋಷಗಳು ಹೆಚ್ಚಿ - ನಮ್ಮ ಮೈಸೂರು ಸಂಸ್ಥಾನಕ್ಕೆ ಅಖಿಲ ಭಾರತದಲ್ಲೂ ಪ್ರಾಪ್ತಿ ಸಿ

ಸುಪ **ಮಾದರಿ ಸಂಸ್ಥಾನ**ವೆಂಬ ಸಾರ್ಥಕ ನಾಮಧೇಯವು ಮಾಸದಂತೆ- ನಮ್ಮ ದೇಶದ ರಾಜ್ಯಭಾರವು ಎಂದೆಂದಿಗೂ ಪ್ರಜೆಗಳ ಸುಖಾಭಿವೃದ್ಧಿ ಸಾಧಕವಾದುದೂ, ಪರಾನುಕರಣಯೋಗ್ಯವಾದುದೂ ಆಗಿರಲಿ. ಈ ನಮ್ಮ ಆಶಯವು ನೆರವೇರುವಂತೆ ಭಗವಂತನು ಆಶೀರ್ವದಿಸಿ- ಅನುಗ್ರಹಿಸಲಿ—

ತಥಾಸ್ತು.



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ

|| ಶ್ರೀರಾಮಸಹಾಯಂ ||

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

ಮಹಾತ್ಮಾಗಾಂಧಿಜೀಯವರು ಭಾರತಮಾತೆಯ ಬಂಧನಿವಾರಣೆಯ ಮೂಲಕ ಸ್ವಾತಂತ್ರ್ಯಸಾಧನೆ ಮಾಡಬೇಕೆಂದು ಪ್ರಾರಂಭಿಸಿದ ಅಸಹಕಾರ ಚಳವಳಿಯ ಅಗಾಧ ಪ್ರವಾಹವು ದೇಶವನ್ನು ಅಲ್ಲೋಲಕಲ್ಲೋಲವನ್ನಾಗಿಸಿತು. ಲಕ್ಷಾಧಿಕಾರಿಗಳನೇಕರು ಭಿಕ್ಷುಕಸ್ಥಿತಿಗೆ ಬಂದಿಳಿದರು. ರಾಜಮಹಾರಾಜರುಗಳಂತೆ ಅರಮನೆಗಳಂತಹ ಸೌಧಗಳಲ್ಲಿ ವಾಸಿಸಿ, ರಾಜಭೋಗಗಳನ್ನನುಭವಿಸುತಿದ್ದ ಆಗರ್ಭಶ್ರೀಮಂತರು, ಬೀದಿಗೆ ಬಂದು ನಿಂತರು. ಬಡವರೊಂದಿಗೂ ಕಷ್ಟಜೀವಿಗಳೊಂದಿಗೂ ಮಾತನಾಡಿದರಾಗಲೀ ಆ ದಿಕ್ಕಿಗೆ ತಿರುಗಿನೋಡಿದರಾಗಲೀ ತಮ್ಮ ದೊಡ್ಡಸ್ತಿಕೆಗೇ ಕುಂದುಂಟಾಗುತ್ತದೆಂದು ತಿಳಿದಿದ್ದ- ಧನಮದ ವಿದ್ಯಾಮದಾದಿಗಳಿಂದ ಬೀಗುತ್ತಿದ್ದ ಆಧುನಿಕ ವಿದ್ಯಾಧುರೀಣರು ದೀನ ದರಿದ್ರರ ಸೇವೆಗೆಂದು ನಡುಕಟ್ಟಿನಿಂತರು. ನೆಲದಮೇಲೆ ನಡೆದರೆ ಪಾದಗಳು ಮಾಸುವುವೋ, ಬಿಸಿಲಿಗೆ ಬಂದರೆ ಮುಖಕಮಲವು ಬಾಡಿಹೋಗುವುದೋ ಎಂಬಂತೆ ಕೇವಲ ಸುಖಸಂತೋಷಗಳ - ಹೂವಿನ ಗೂಡೆಗಳಲ್ಲೇ ಬೆಳೆದುಬಂದ - ಶ್ರೀಮಂತ ಮನೆತನಗಳ ರಮಣಿಯರು ಸಹ ಬೀದಿಗಳಲ್ಲಿ ಬಂದು ನಿಂತು, ಮಳೆ ಚಳಿಗಾಳಿಗಳನ್ನೂ ಚಂಡಸೂರ್ಯನ ಪ್ರಚಂಡ ಕಿರಣಗಳನ್ನೂ ಸಂತೋಷದಿಂದ ಸಹಿಸಿ, ದುಡಿಯುವಂತಾದರು. ಉಂಡಕೈಯಲ್ಲಿ ಕಾಗೆಯನ್ನು ಹೊಡೆದರೆಲ್ಲಿ ಒಂದಗುಳು ನಷ್ಟವಾಗುವುದೋ ಎಂಬಂತೆ ಕೇವಲ ಲುಬ್ಧತೆಯಿಂದ ಧನಸಂಗ್ರಹಣಮಾಡಿ, ಅದನ್ನು ಪ್ರಾಣಕ್ಕಿಂತಲೂ ಹೆಚ್ಚೆಂದು ರಕ್ಷಿಸಿಕೊಂಡಿದ್ದ ಧನವಂತರನೇಕರು ಮುಕ್ತಹಸ್ತರಾಗಿ, ನೂರುನೂರಾಗಿ, ಸಾವಿರಸಾವಿರವಾಗಿ, ಲಕ್ಷಲಕ್ಷವಾಗಿ ಧನವನ್ನು ದೇಶಸೇವೆಗೆಂದು ಸೂರೆ

ಗೊಟ್ಟರು. ಅಷ್ಟುಮಾತ್ರವೇ ಅಲ್ಲ- ತರಗೆಲೆಯಲುಗಿದರೆ ಬೆದರಿಬೀಳು ವಷ್ಟು ಭೀರುಗಳಾಗಿದ್ದ ಹಿಂದೂಗಳು ಅಸಹಾಯಶೂರರಾದರು;—ಫಿರಂ ಗಿಯ ಗುಂಡಿಗೆ ಎದೆಯೊಡ್ಡಿ ನಿಲ್ಲುವಂತಹ ಧೀರರಾದರು. ದೇಶಸೇವೆಗಾಗಿ ಪ್ರಾಣಗಳನ್ನು ತೃಣವಾಗೆಣಿಸಿ, ಹೃದಯದ ಬಿಸಿರಕ್ತವನ್ನು ಬೊಗಸೆ ಯಿಂದ ಎತ್ತಿ ಸುರಿಯುವಂತಹ ಮನೋದಾರ್ಢ್ಯವನ್ನು ಗಳಿಸಿದರು. ದಂಭ ದರ್ಪಗಳಳಿದುವು. ಆಶಾಪೋಹಗಳು ನಾಶವಾದುವು ಪಾಶ್ಚಾತ್ಯ ನಾಗ ರಿಕತೆಯ ಭ್ರಾಂತಿಯು ಅಂತ್ಯವಾಯಿತು ಸ್ವಾರ್ಥತೆ ಕ್ಷುದ್ರತನಗಳು ನಿರರ್ಥಕಗಳೆಂದು ತೋರಿದುವು. ಸೇವೆಗಾಗಿ ವಿನಿಯೋಗವಾಗದ ಜೀವಿ ತವು ಸಾವಿನ ಬೀಡಾಗದೆ ತಪ್ಪದೆಂದು ಮನದಟ್ಟಾಯಿತು. ದೇಶಸೇ ವೆಯೇ ಈಶಸೇವೆಯೆಂಬ ಭಾವವೂ- ಜನಸೇವೆಯೇ ಜನಾರ್ದನನ ಸೇವೆ ಯೆಂಬ ನಂಬಿಕೆಯೂ ಜನಮನವನ್ನಾವರಿಸಿದುವು ನಾಸ್ತಿಕರು ಆಸ್ತಿಕ ರಾದರು. ಹೀಗೆ ಭಾರತದೇಶ ಸಮುದ್ರದಲ್ಲಿದ್ದ ಪ್ರಳಯತರಂಗ ಮಾಲೆಯ ಮೊದಲನೆಯ ಹೊಡೆತಕ್ಕೆ ಸಿಕ್ಕಿದ ಮಹನೀಯರು ಕೆಲವ ರುಂಟು. ಅವರಲ್ಲಿ ಆದ್ಯಂತದೇಶದಲ್ಲಿ ಇಬ್ಬರುಮಾತ್ರವೇ- ಮಿಕ್ಕ ಎಲ್ಲ ರಿಗಿಂತಲೂ ಅತ್ಯಂತ ಭಿನ್ನರಾಗಿದ್ದರೂ ತಮ್ಮತಮ್ಮಲ್ಲಿ ಅತಿಶಯ ಸಾಮ್ಯ ವನ್ನುಂಟಾಗಿದ್ದಾರೆ. ಆ ಇಬ್ಬರೂ ಮಹಾತ್ಮಜೀಯವರ ಎರಡು ಭುಜಗ ಳಂತೆ- ಎರಡು ಕಣ್ಣುಗಳಂತೆ ದೇಶಸೇವೋದ್ಯಮದಲ್ಲಿ ತನುಮನಧನಗಳನ್ನ ರ್ಪಿಸಿ ಕೀರ್ತಿಶರೀರಿಗಳಾದರು. ಅವರಲ್ಲೊಬ್ಬರು ದೇಶಬಂಧು ಚಿತ್ತರಂ ಜನದಾಸರು; ಮತ್ತೊಬ್ಬರೇ ನಮ್ಮ ಕಥಾನಾಯಕರು. ಇಬ್ಬರೂ ಸುಪ್ರಸಿದ್ಧ ನ್ಯಾಯವಾದಿಗಳು. ಇಬ್ಬರೂ ವರ್ಷವೊಂದಕ್ಕೆ ಲಕ್ಷಾಂತರ ದ್ರವ್ಯವನ್ನು ಸಂಪಾದಿಸುತ್ತಾ, ಭೋಗಭಾಗ್ಯಗಳಲ್ಲಿ ಮಗ್ನರಾಗಿ, ರಾಜ ರಾಜೇಶ್ವರರಂತೆ ವೈಭವ ಸಂಪನ್ನತೆಯಿಂದ ಜೀವಿಸುತ್ತಿದ್ದವರು. ಅಂತಹ ಆ ಇಬ್ಬರು ಸುಪ್ರಸಿದ್ಧ ವ್ಯಕ್ತಿಗಳೂ ದೇಶಸೇವಾದೀಕ್ಷೆಯನ್ನು ಏಕನಿಷ್ಠೆ ಯಿಂದ ಕೈಕೊಂಡು, ತಾವು ಮಾತ್ರವಲ್ಲ- ತಮ್ಮ ಕುಟುಂಬವೇ ದೇಶಸೇವೆ ಗಾಗಿ ದೀಕ್ಷಾಧರರಾಗಿ, ಈ ಯಜ್ಞಕುಂಡದಲ್ಲಿ ದೇಹವನ್ನೂ ಗೇಹವನ್ನೂ ಧನವನ್ನೂ ಮಾನಪ್ರಾಣಗಳನ್ನೂ, ಹೆಚ್ಚೇನು-ತಮ್ಮದೆಂದಿದ್ದ ಸರ್ವಸ್ವ ವನ್ನೂ ಅರ್ಪಿಸಲು ಸಿದ್ಧರಾದರು, ಅರ್ಪಿಸಿದರು. ಭಾರತ ದೇಶದ ಸ್ವಾತಂ

ತ್ರ್ಯಸಾಧನೆಯ ಚರಿತ್ರೆಯು ಬರೆಯಬೇಕಾಗಿ ಬಂದಾಗ್ಗೆ, ಅದರಲ್ಲಿ ಈ ಇಬ್ಬರು ಮಹನೀಯರ ನಾಮಧೇಯಗಳು ಸುವರ್ಣಾಕ್ಷರಗಳಿಂದ ಬರೆಯಲ್ಪಡುವುವು. ಒಬ್ಬರು ದೇಶಬಂಧು ಚಿತ್ತರಂಜನದಾಸ್, ಮತ್ತೊಬ್ಬರು ಪಂಡಿತ ಮೋತೀಲಾಲನೆಹ್ರೂ. ಈ ಇಬ್ಬರು ಮಹನೀಯರೂ ಇಂದು ನಮ್ಮ ದುರ್ದೈವದಿಂದ ದಿವಂಗತರಾಗಿದ್ದಾರೆ. ದಿವಂಗತರಾಗಿ, ಅಂತರಿಕ್ಷದಲ್ಲಿ ನಿಂತು ಭಾರತ ದೇಶಾಭಿವೃದ್ಧಿಯನ್ನು ಆಸ್ಥೆಯಿಂದ ಕಣ್ದೆರೆದು ನೋಡುತ್ತಿದ್ದಾರೆ ತಮ್ಮ ದೇಶಬಾಂಧವರು ಸ್ವಾತಂತ್ರ್ಯಸಾಧನೆಗಾಗಿ ಎಷ್ಟುಮಟ್ಟಿಗೆ ಶ್ರಮಿಸುತ್ತಿದ್ದಾರೆಂದು ಗಮನಿಸುತ್ತಿದ್ದಾರೆ. ಸ್ವರ್ಗವಾಸಿಗಳಾಗಿರುವ ಈ ಇಬ್ಬರು ಮಹನೀಯರೂ ಅಷ್ಟುಮಟ್ಟಿಗೆ ಸ್ವಾರ್ಥತ್ಯಾಗ ಮಾಡಿ ಶ್ರಮಿಸದಿದ್ದಲ್ಲಿ, ಭಾರತ ದೇಶವು ಇಂದಿರುವ ಸ್ಥಿತಿಯನ್ನು ಹೊಂದಲು ಕಡಮೆಯೆಂದರೆ ಕಾಲು ಶತಮಾನವಾದರೂ ಬೇಕಾಗಬಹುದಿತ್ತು! ಅಷ್ಟುಮಟ್ಟಿನ ಅಭಿವೃದ್ಧಿಯನ್ನು ಅತ್ಯಲ್ಪಕಾಲದಲ್ಲಿ ಸಾಧಿಸಿದ ಆ ಮಹನೀಯರು ಪೂಜ್ಯರಲ್ಲವೆ? ಗೌರವಾರ್ಹರಲ್ಲವೆ? ಪ್ರಾತಃಸ್ಮರಣೀಯರಲ್ಲವೆ? ಇವರಲ್ಲಿ ದೇಶಬಂಧು ದಾಸರ ಜೀವಿತ ಚರಿತ್ರೆಯನ್ನು ಗ್ರಂಥಮಾಲೆಯು ಈ ಮೊದಲೇ (ಕುಸುಮ ೮೦) ವಾಚಕ ಮಹಾಶಯರಿಗೆ ಸಮರ್ಪಿಸಿದೆ. ಇಂದು ಅದು ಪಂಡಿತ ಮೋತೀಲಾಲನೆಹ್ರು ಮಹಾಶಯರ ಜೀವಿತವನ್ನು ಸಮರ್ಪಿಸಲೆಳಸಿದೆ. ವಾಚಕ ಮಹಾಶಯರು, ಎಂದಿನಂತೆ ಇದನ್ನೂ ಸ್ವೀಕರಿಸಿ, ಗ್ರಂಥಮಾಲೆಗೆ ಉದಾರಾಶ್ರಯವಿತ್ತು ಪ್ರೋತ್ಸಾಹಿಸಬೇಕೆಂದು ಪ್ರಾರ್ಥನೆ.

ಬೆಂಗಳೂರು ನಗರ.<br>
ತಾ. ೧—೪—೧೯೩೨

ಇತಿ ಸುಜನವಿಧೇಯ.<br>
**ಯಂ. ರಾಮರಾವ್**

"We stand on our own legs. Governments which have not paid attention to the lessons of History have invariably come to grief; and I have no boubt that what has not been accomplished by the statesmanship of England will be accomplished by the people, adding another to the number of fallen empires"

---

"As for the duty of the Government to govern I fully agree. But there is the duty of the governed, that is, to secure just government for themselves on principles fully recognised all over the world and to spare no sacrifice, no suffering however great to achieve that end."

PANDIT MOTILAL NEHRU

॥ ಶ್ರೀ ರಾಮಸಹಾಯಂ ॥

# ದೇಶಭಕ್ತಾಗ್ರಣಿ

# ಪಂಡಿತ ಮೋತಿಲಾಲ ನೆಹ್ರೂ

## — " ಜನನ-ಬಾಲ್ಯ ವಿದ್ಯಾಭ್ಯಾಸ" —

ನಮ್ಮ ಮಾತೃಭೂಮಿಯಾದ ಭಾರತ ದೇಶವು ಇಂದು ನಿನ್ನೆಯದಲ್ಲ-ಅತಿ ಪ್ರಾಚೀನವಾದುದು. ಪ್ರಾಚೀನಕಾಲದಿಂದಲೂ ದೇಶದಲ್ಲಿ ಹಲವು ಮಂದಿ ರಾಜರೂ ಮಹಾರಾಜರೂ ಚಕ್ರವರ್ತಿಗಳೂ ರಾಜ್ಯವಾಳುತ್ತ ಬಂದರು. ಅವರುಗಳ ಕಾಲದಲ್ಲಿ, ರಾಜಧಾನಿ ನಗರಗಳು ಇಂದ್ರನ ಅಮರಾವತಿಯಂತೆ ನೇತ್ರಾನಂದಕರವಾಗಿ ಪ್ರಕಾಶಿಸುತ್ತ, ವೈಭವ ಸಂಪನ್ನತೆಯಿಂದ ಮೆರೆಯುತ್ತಿದ್ದುವು. ಹಸ್ತಿನಾವತಿ, ಪಾಟಲೀಪುತ್ರ, ಕನ್ಯಾಕುಬ್ಜ, ಶ್ರೀನಗರ. ಕಾಶೀ, ಕಾಂಚೀ, ದ್ವಾರಕಾ ಮುಂತಾದುವು ಅಂತಹ ಚರಿತ್ರ ಪ್ರಸಿದ್ಧವಾದ ನಗರ ರಾಜಗಳಲ್ಲಿ ಕೆಲವು. ಈ ನಗರಗಳಲ್ಲೂ, ಹಸ್ತಿನಾವತಿಯು ಮಹಾಭಾರತ ಕಾಲದಿಂದಲೂ ಅತಿಶಯ ಪ್ರಖ್ಯಾತವೆನ್ನಿಸಿಕೊಂಡಿದೆ. ಇದರ ಸಮೀಪದಲ್ಲೇ ಆಧುನಿಕ ದೆಹಲೀ ನಗರವು, ಅನೇಕಾನೇಕ ಮಂದಿ ಹಿಂದೂ ಮತ್ತು ಮಹಮ್ಮದೀಯ ರಾಜರ ಮತ್ತು ಚಕ್ರವರ್ತಿಗಳ ರಾಜಧಾನಿಯಾಗಿ ಕಳೆಗೊಂಡಿತು. ಅದು ಈಗಲೂ, ಭಾರತ ದೇಶದ ಸರ್ವಾಧಿಕಾರಿಯಾದ ವೈಸರಾಯಿಯವರ ಮುಖ್ಯ ನಿವಾಸಸ್ಥಾನವೂ, ಭಾರತ ಸರ್ಕಾರದ ಪ್ರಧಾನಸ್ಥಾನವೂ ಆಗಿ, ಈ ವಿಸ್ತಾರವಾದ ದೇಶದ ರಾಜಧಾನಿಯಾಗಿ ಪ್ರಸಿದ್ಧಿಪಡುತ್ತಿದೆ.

ಈಗ್ಗೆ ಎಪ್ಪತ್ತು ವರ್ಷಗಳಿಗೆ ಹಿಂದಿನ ಮಾತು. ಆಗ ಈ ನಗರವು ಈಗಿನಂತೆ ಹಿಂದೂಸ್ಥಾನದ ರಾಜಧಾನಿಯಾಗಿರಲಿಲ್ಲ ಆದರೂ ಮೊಗಲ್ ಚಕ್ರವರ್ತಿಗಳ ಕಾಲದಿಂದ ರಾಜಧಾನಿಯಾಗಿದುದರಿಂದ, ವಿಶೇಷ

ಪಾರ ಉದ್ಯೋಗಗಳಿಂದ ಪ್ರಸಿದ್ಧವಾಗಿಯೇ ಇತ್ತು. ಆಗ ಈ ನಗರದ ಕೊತ್ವಾಲನಾಗಿ ಗಂಗಾಧರನೆಹ್ರೂ ಎಂಬೊಬ್ಬ ಕಾಶ್ಮೀರೀ ಸಾರಸ್ವತ ಬ್ರಾಹ್ಮಣನು ಕೆಲಸ ಮಾಡುತ್ತಿದ್ದನು. ಆತನು ಬಹಳ ನಿಸ್ಪೃಹನೂ, ಆದರೂ ವಿಶೇಷ ಜನಾನುರಾಗಿಯೂ ದೈವಭಕ್ತನೂ ಪಾಪದೂರನೂ ಆಗಿದ್ದನು. ಆತನ ಉದರದಲ್ಲಿ ೧೮೬೧ನೆಯ ಇಸವಿ ಮೇ ತಿಂಗಳು ೬ನೆಯ ಶುಭ ದಿನದಲ್ಲಿ ಒಬ್ಬ ಸುಕುಮಾರನು ಉದಯಿಸಿದನು. ಆತನೇ ನಮ್ಮ ಪ್ರಕೃತ ಕಥಾನಾಯಕನು. ಯಾವ ಮಹನೀಯನು ಭಾರತದೇಶದ ಅನಭಿಷಿಕ್ತ ಚಕ್ರವರ್ತಿಯೋ ಎಂಬಂತೆ ಗೌರವಿಸಲ್ಪಟ್ಟನೋ, ಆತನು ಜನ್ಮಿಸಿದಾಗ ಮಾತ್ರ ಬಹು ದುರ್ದೈವಿ ಎಂಬಂತೆ ಭಾಸವಾಯಿತು. ಈ ಮಗನ ಮುಖವನ್ನು ದರ್ಶಿಸುವ ಸುಯೋಗವು ಗಂಗಾಧರನೆಹ್ರೂಗೆ ಲಭ್ಯವಾಗಲಿಲ್ಲ. ಶಿಶು ಜನನಕ್ಕೆ ನಾಲ್ಕು ತಿಂಗಳ ಮುಂಚೆಯೇ ಆತನು ಸ್ವರ್ಗಸ್ಥನಾಗಿದ್ದನು. ಆದರೂ ಶಿಶುವು ಪರದೇಶಿ ಎನ್ನಿಸಲಿಲ್ಲ. ಇತರ ಪಿತೃವಿಹೀನ ಶಿಶುಗಳಂತೆ ಅಗಾಧ ಕಷ್ಟಸಂಕಟಗಳಿಗೆ ಒಳಗಾಗಲಿಲ್ಲ. ಗಂಗಾಧರ ನೆಹ್ರೂನ ಹಿರಿಯ ಮಗನಾದ ನಂದಲಾಲನೆಹ್ರೂ ಎಂಬಾತನು, ಆಗ ಡೆಲ್ಹೀ ನಗರದಲ್ಲೇ ನ್ಯಾಯವಾದಿಯಾಗಿ ಕೆಲಸ ಮಾಡುತ್ತಲಿದ್ದುದರಿಂದ, ಆತನು ಅತಿಶಯ ಪ್ರೀತಿವಿಶ್ವಾಸಗಳಿಂದ ತನ್ನ ಆ ಚಿಕ್ಕತಮ್ಮನನ್ನೂ, ತಾಯಿಯನ್ನೂ ಕಾಪಾಡುತ್ತ ಬಂದನು.

ಶಿಶುವು ಬಾಲ್ಯದಲ್ಲಿ ದಿವ್ಯಸುಂದರ ವಿಗ್ರಹದಿಂದ ನೋಡಿದವರ ಕಣ್ಮನಗಳನ್ನು ಸೆಳೆಯುತ್ತ ಇದ್ದುದರಿಂದ ಅದಕ್ಕೆ ಅನ್ವರ್ಥನಾಮಧೇಯವೋ ಎಂಬಂತೆ, ಮೋತೀ (ಮುತ್ತು) ಲಾಲ್ ನೆಹ್ರೂ ಎಂದು ನಾಮಕರಣಮಾಡಿದ್ದರು. ಚಿಕ್ಕತನದ ಅವರ ಆಟಪಾಟಗಳು, ಆತನು ಮುಂದೆ ಎಂತಹ ಪ್ರಸಿದ್ಧಿಗೆ ಬರಬಹುದೆಂಬುದನ್ನು ತಿಳಿಸುವಂತೆ ಹೃದಯಂಗಮವಾಗಿದ್ದುವು.

ಐದನೆಯ ವಯಸ್ಸಿನಲ್ಲಿ ಬಾಲಕನ ವಿದ್ಯಾಭ್ಯಾಸವು ಆರಂಭಿಸಲ್ಪಟ್ಟಿತು. ಪ್ರಾರಂಭದಲ್ಲಿ ಮೋತೀಲಾಲನು ಪಾರ್ಶಿ ಮತ್ತು ಅರಬ್ಬೀಭಾಷೆಗಳನ್ನು ಮಹಮ್ಮದೀಯ ಮೌಲ್ವಿಗಳ ಬಳಿ ಅಭ್ಯಾಸಮಾಡಿ, ಹನ್ನೆರಡು ವರ್ಷಗಳ ವಯಸ್ಸಾಗುವ ವೇಳೆಗೆ ಆ ಎರಡು ಭಾಷೆಗಳಲ್ಲೂ ತಕ್ಕಮಟ್ಟಿನ ಜ್ಞಾನವನ್ನು ಸಂಪಾದಿಸಿದನು. ತರುವಾಯ ಕಾನಪುರಕ್ಕೆ

ಹೋಗಿ ಅಲ್ಲಿಯ ಸರ್ಕಾರದ ಪಾಠಶಾಲೆಯನ್ನು ಸೇರಿ, ಅಲ್ಲಿ ಇಂಗ್ಲೀಷ್ ಭಾಷಾಭ್ಯಾಸಮಾಡಿ, ಪ್ರವೇಶ ಪರೀಕ್ಷೆಯಲ್ಲಿ ಅತ್ಯುತ್ಕೃಷ್ಟರೀತಿಯಲ್ಲಿ ತೇರ್ಗಡೆಹೊಂದಿದನು. ಇದಾದ ತರುವಾಯ ಇಂಗ್ಲೀಷ್ ವಿದ್ಯಾಭ್ಯಾಸ ವನ್ನೇ ಇನ್ನೂ ಮುಂದುವರಿಸಬೇಕೆಂಬ ಅಪೇಕ್ಷೆಯು ಪ್ರಬಲವಾಗಲು ಅಲಹಾಬಾದಿಗೆ ಪ್ರಯಾಣಮಾಡಿ, ಅಲ್ಲಿಯ 'ಮೂರ್ ಕಾಲೇಜ್' ಎಂಬ ಪ್ರೌಢ ಕಲಾಶಾಲೆಯನ್ನು ಸೇರಿದನು. ಆ ಕಲಾನಿಲಯದ ಮುಖ್ಯಾಧ್ಯಾ ಪಕರಾದ ಹ್ಯಾರಿಸನ್ ಎಂಬ ಐರೋಪ್ಯರು, ತಮ್ಮ ಹಲವುನೂರುಮಂದಿ ವಿದ್ಯಾರ್ಥಿಗಳಲ್ಲಿ, ನಮ್ಮ ಕಥಾನಾಯಕನ ಸೂಕ್ಷ್ಮಗ್ರಹಣಶಕ್ತಿ, ನಿರಲ ಸಿಕೆ, ವಿನಯವಿಧೇಯತೆಗಳು ಮುಂತಾದುವುಗಳಿಗಾಗಿ ಆತನನ್ನು ಅತಿಶಯ ಪ್ರೀತಿವಿಶ್ವಾಸಗಳಿಂದ ಕಾಣುತ್ತ, ಸರ್ವದಾ ಆ ಯುವಕನ ಕ್ಷೇಮಚಿಂತನೆ ಯನ್ನೂ ಅಭಿವೃದ್ಧಿಯನ್ನೂ ಕುರಿತು ಗಮನಿಸುತ್ತಿದ್ದರು. ಯುವಕ ಮೋತೀಲಾಲನು ತನ್ನ ಸಹಾಧ್ಯಾಯಿಗಳ ಸಮೂಹದಲ್ಲಿ ನಕ್ಷತ್ರಮಣಿಯಂತೆ ಪ್ರಕಾಶಿಸುತ್ತಾ ಕಾಲೇಜು ವಿದ್ಯಾಭ್ಯಾಸವನ್ನು ಮುಂದರಿಸುತ್ತಿದ್ದನು. ಸರ್. ಸುಂದರಲಾಲ್ ಮತ್ತು ಪಂಡಿತ ಮದನಮೋಹನ ಮಾಳವೀಯ ಎಂಬ ಮಹನೀಯ ವ್ಯಕ್ತಿಗಳು ಆಗ ಆತನ ಸಹಾಧ್ಯಾಯಿಗಳಾಗಿದ್ದವರು. ಆ ವಿದ್ಯಾನಿಲಯದಲ್ಲಿ ನೆಹ್ರೂನ ವಿದ್ಯಾಭ್ಯಾಸವು ನಾಲ್ಕು ವರ್ಷಕಾಲ ವಾಗಿತು. ಆತನು ಯಾವ ಕಾರಣದಿಂದಲೋ ಬಿ. ಎ ಪರೀಕ್ಷೆಗೆ ಮಾತ್ರ ಕೂಡದೆಯೇ, ಕಾಲೇಜು ವಿದ್ಯಾಭ್ಯಾಸವನ್ನು ಸಾಕುಮಾಡಿ ಲೋಕವ್ಯವಹಾರದ ಮಾರ್ಗವ್ಯಾವುದೆಂದು ನೋಡಿಕೊಳ್ಳಲು ಪ್ರಾರಂಭಿಸಿದನು. ಪ್ರಾರಂಭದಿಂದಲೂ ಆತನಿಗೆ ನ್ಯಾಯವಾದಿ ಉದ್ಯೋ ಗದಮೇಲೊಂದು ಬಗೆಯ ಮಮತೆಯಿದ್ದು, ತಾನು ದೊಡ್ಡವನಾದಮೇಲೆ, ಆ ಮಾರ್ಗವನ್ನೇ ಕೈಕೊಳ್ಳಬೇಕೆಂದು ಯೋಚಿಸುತ್ತಿದ್ದನು. ಅಂತೆಯೇ, ಬಿ. ಎ. ಪರೀಕ್ಷೆಗೆ ಕೂಡುವುದಕ್ಕೆ ಪ್ರತಿಯಾಗಿ ನ್ಯಾಯವಾದಿ ಪರೀಕ್ಷೆಗೆ ಕುಳಿತನು. ಆ ಪರೀಕ್ಷೆಗೆ ತನ್ನ ಹೆಸರನ್ನು ಕಳುಹಿಸಬೇಕೆಂದು ಕಲ್ಪನೆ ಯುಂಟಾದಾಗ, ಮುಂದೆ ಪರೀಕ್ಷಾ ಕಾಲವು ಮೂರು ತಿಂಗಳು ಮಾತ್ರವೇ ಉಳಿದಿತ್ತು. ಅಷ್ಟು ಸ್ವಲ್ಪಕಾಲದಲ್ಲೇ ಕಠಿಣವಾದ ಹಲವು ನ್ಯಾಯ ಶಾಸ್ತ್ರಗ್ರಂಥಗಳನ್ನು ಓದಿ ಆತನು ತೇರ್ಗಡೆಹೊಂದುವುದು ಕಷ್ಟವೆಂದು

ಎಲ್ಲರೂ ಭಾವಿಸಿದ್ದರು. ಆದರೆ, ಪರೀಕ್ಷೆಯು ನಡೆದು ಫಲಿತಾಂಶವು ಪ್ರಕಟವಾದಾಗ್ಗೆ, ಮೋತೀಲಾಲರ ಹೆಸರೇ ಮೊದಲನೆಯದಾಗಿ ಬಂದಿತು. ಅದನ್ನು ಕಂಡು, ಸರ್ವರೂ ಆನಂದಾಶ್ಚರ್ಯಮಗ್ನರಾದರು. ಹಾಗೆ ಅತ್ಯುತ್ತಮರೀತಿಯಲ್ಲಿ ತೇರ್ಗಡೆ ಹೊಂದಿದುದಕ್ಕಾಗಿ ಅವರಿಗೊಂದು ಸುವರ್ಣಪದಕವೂ ಪಾರಿತೋಷಕವಾಗಿ ದೊರೆಯಿತು.



## — ವೃತ್ತಿಪ್ರವೇಶ —

ನ್ಯಾಯವಾದಿ ಪರೀಕ್ಷೆಯಲ್ಲಿ ಉತ್ತೀರ್ಣರಾದೊಡನೆಯೇ ಸ್ವಲ್ಪವೂ ಸಾವಕಾಶಮಾಡದೆ, ಮೋತೀಲಾಲರು ಕಾನ್ಪುರದಲ್ಲಿ ತಮ್ಮ ವಕಾಲತ್ತನ್ನು ಪ್ರಾರಂಭಿಸಿಬಿಟ್ಟರು. ಅವರಲ್ಲಿ ಸ್ವಾಭಾವಿಕವಾಗಿಯೇ ನೆಲೆಸಿದುದೋ ಎಂಬಷ್ಟುಮಟ್ಟಿನ ನ್ಯಾಯ ಶಾಸ್ತ್ರಜ್ಞಾನ, ವಾಕ್ಪಟುತ್ವ, ಸಮಯಸ್ಫೂರ್ತಿ, ನಿಸ್ಪೃಹತ್ವ ಮುಂತಾದ ಸುಗುಣಗಳಿಂದ ಮೋತೀಲಾಲರು ಬಹು ಸ್ವಲ್ಪ ಕಾಲದಲ್ಲೇ ವಿಶೇಷ ಹೆಸರುವಾಸಿಯನ್ನು ಹೊಂದಿ ಗಣ್ಯತೆಗೆ ಬಂದರು. ಅನೇಕಮಂದಿ ಕಕ್ಷಿಗಾರರು, ನ್ಯಾಯಸ್ಥಾನಗಳಲ್ಲಿ ಅವರು ವಾದಿಸುತ್ತಿದ್ದ ರೀತಿಯನ್ನು ಕಂಡು ಆಕರ್ಷಿತರಾಗಿ ಅವರ ಪ್ರತಿಭೆಯನ್ನು ಮೆಚ್ಚಿಕೊಂಡು ತಮ್ಮ ವ್ಯವಹಾರಗಳನ್ನೆಲ್ಲ ಅವರ ಬಳಿಗೇ ತರಲಾರಂಭಿಸಿದರು. ಹೀಗೆ ಅವರು ನ್ಯಾಯವಾದಿ ವೃತ್ತಿಯನ್ನು ಪ್ರಾರಂಭಿಸಿದ ಒಂದೆರಡು ವರ್ಷಗಳಲ್ಲೇ ಗಣ್ಯಸ್ಥಿತಿಗೆ ಬಂದುದನ್ನು ಕಂಡು ಆ ಊರಲ್ಲಿ ದೊಡ್ಡ ವಕೀಲರೆಂದು ಹೆಸರುವಾಸಿಯನ್ನು ಗಳಿಸಿದ್ದ ಪಂಡಿತ ಪೃಥ್ವೀನಾಥರೆಂಬುವರು ಅವರನ್ನು ತಮ್ಮ ಬಳಿಯಲ್ಲಿ ಸಹಾಯಕ ವಕೀಲರನ್ನಾಗಿ ಇರಿಸಿಕೊಂಡರು. ಹಾಗೆ ಒಂದೆರಡು ವರ್ಷಗಳನ್ನು ಕಳೆವುದರೊಳಗಾಗಿಯೇ, ಮಹತ್ವಾಕಾಂಕ್ಷಿಯಾದ ನವಮಾತ್ರರುಣ ನ್ಯಾಯವಾದಿಯು, ಹಾಗೆ ಮತ್ತೊಬ್ಬರ ಕೈಕೆಳಗೆ ಸಹಾಯಕಸ್ಥಾನದಲ್ಲಿದ್ದು ಕೆಲಸಮಾಡುವುಕ್ಕೆ ಒಪ್ಪದೆ, ೧೮೮೬ನೆಯ ಸಂವತ್ಸರದಲ್ಲಿ, ಪಂಡಿತ ಪೃಥ್ವೀನಾಥರ ಅಪ್ಪಣೆಪಡೆದು ಅಲಹಾಬಾದು ಹೈಕೋರ್ಟಿನಲ್ಲೇ ವಕಾಲತ್ತು ನಡಿಸಲು ಪ್ರಾರಂಭಿಸಿದರು. ಇವರು ಕಾನ್ಪುರ

ದಿಂದ ಅಲಹಾಬಾದಿಗೆ ಬಂದಾಗ್ಗೆ, ಇವರ ಅಣ್ಣಂದಿರಾದ ಪಂ ನಂದಲಾಲ ನೆಹ್ರೂಯವರು ಹೈಕೋರ್ಟಿನ ಸುಪ್ರಸಿದ್ಧ ವಕೀಲರೆಂದು ಕೀರ್ತಿಪಡೆದಿದ್ದರು. ಆದರೆ, ೧೮೮೭ ನೆಯ ವರ್ಷದಲ್ಲೇ ನಂದಲಾಲರು ಸ್ವರ್ಗಸ್ಥರಾದುದರಿಂದ, ಆ ದೊಡ್ಡ ಕುಟುಂಬವನ್ನು ಪೋಷಿಸುವ ಕಾರ್ಯವು ನಮ್ಮ ಕಥಾನಾಯಕರಮೇಲೆಯೇ ಬಿದ್ದಿತು. ಇವರ ಅಣ್ಣಂದಿರ ಬಳಿಗೆ ಬರುತ್ತಿದ್ದ ಅನೇಕಾನೇಕಮಂದಿ ಕಕ್ಷಿಗಾರರೂ ಸಹ ಪಂ. ಮೋತೀಲಾಲರ ವಾಕ್ಕೌಶಲವನ್ನೂ, ವೃತ್ತಿಜ್ಞಾನವನ್ನೂ ನ್ಯಾಯಾನ್ಯಾಯ ವಿಮರ್ಶೆಯಲ್ಲಿ ಅವರಲ್ಲಿ ಕಂಡುಬರುತ್ತಿದ್ದ ಜಾಣ್ಮೆಯನ್ನೂ ಕಂಡು ಸಂತೋಷಿಸಿ ಅವರ ಬಳಿಗೇ ಬಂದು ಸೇರಿದರು. ಹೀಗಾಗಿ ಕೇವಲ ಐದಾರು ವರ್ಷಗಳಲ್ಲೇ ಪಂಡಿತರ ಸಂಪಾದನೆಯು ಒಂದೂವರೆ ಸಾವಿರದಿಂದ ಎರಡು ಸಾವಿರದವರೆಗೆ ಏರಿದ್ದಿತು. ಮುಂದೆ ಸ್ವಲ್ಪ ಕಾಲದಲ್ಲೇ ಇವರು ಸರಕಾರಿ ಪರವಾದ ವಕೀಲರಾಗಿ (High Court Advocate) ಆರಿಸಲ್ಪಟ್ಟರು. ಕ್ರಮೇಣ ತಮ್ಮ ಆ ಒಂದು ಹೈಕೋರ್ಟಿನಲ್ಲಿ ಮಾತ್ರವಲ್ಲ,- ಉತ್ತರ ಹಿಂದೂಸ್ಥಾನದ ನ್ಯಾಯವಾದಿಗಳಲ್ಲೇ ಅಗ್ರಪೀಠವು ಇವರ ಪಾಲಿಗೆ ಬಂತು. ಬಹು ತೊಡಕಿನ ಸಂದರ್ಭಗಳನ್ನುಂಟಾಗಿ ಎಂತೆಂತಹ ನ್ಯಾಯವಾದಿಗಳಿಗೂ ನ್ಯಾಯಾಧೀಶರಿಗೂ ಒಗೆಹರಿಯದ ಹಲವು ಮೊಕದ್ದಮೆಗಳು ಇತ್ಯರ್ಥಕ್ಕಾಗಿ ಇವರ ಬಳಿಗೆ ಬರಲಾರಂಭಿಸಿದುವು. ಮೋತೀಲಾಲರು ತಮ್ಮ ಜಾಣ್ಮೆಯಿಂದ ಅವುಗಳ ಮೂಲವನ್ನು ಶೋಧಿಸಿ, ತೀರ್ಮಾನ ಕೊಡುತ್ತಿದ್ದ ಚಾತುರ್ಯವು ಹಲವು ವೇಳೆಗಳಲ್ಲಿ ನ್ಯಾಯಾಧೀಶರನ್ನೂ ಬೆರಗುಗೊಳಿಸುತ್ತಿದ್ದಿತು. ಹೆಚ್ಚೇನು, ಆ ಕಾಲದಲ್ಲಿ ಉತ್ತರ ಹಿಂದೂಸ್ಥಾನದಲ್ಲೇ, ನ್ಯಾಯವಾದಿ ವೃತ್ತಿಯನ್ನು ಕೈಕೊಳ್ಳಬೇಕೆಂದು ಇಚ್ಛಿಸುವ ತರುಣ ವಕೀಲರು, ನಮ್ಮ ಪಂಡಿತ ಮೋತೀಲಾಲರ ಹೆಸರು ಹೇಳಿ,- ಅವರ ಆದರ್ಶವನ್ನು ಲಕ್ಷ್ಯದಲ್ಲಿಟ್ಟುಕೊಂಡು, ಮುಂದಡಿಯಿಡುವಂತಾಯಿತು. ಅಂತಹ ಪ್ರತಿಷ್ಠೆಯು ಅವರಿಗೆ ಪ್ರಾಪ್ತವಾಯಿತು. ವಾದಿಸಲಿಕ್ಕೆ ನಿಂತಕಾಲದಲ್ಲಿ ಅವರಲ್ಲಿ ಪ್ರಕಟವಾಗುತ್ತಿದ್ದ ಧೈರ್ಯವೂ, ವಾಗ್ವಿಜೃಂಭಣೆಯೂ, ನಿಸ್ಪೃಹತೆಯೂ, ನ್ಯಾಯಪರತ್ವವೂ ಸಕಲರಿಂದಲೂ ಪ್ರಶಂಸಿಸಲ್ಪಡುತ್ತಿದ್ದುವು. ಮುಂದೆ ಮಹಾತ್ಮಾ ಗಾಂಧಿಜೀಯವರಿಂದ ಪ್ರಾರಂಭಿಸ

ಲ್ಪಟ್ಟ ಅಸಹಕಾರ ಚಳವಳಿಯಲ್ಲಿ ಭಾಗ ತೆಗೆದುಕೊಂಡುದರಿಂದ ತಮ್ಮ ವೃತ್ತಿಯನ್ನು ತ್ಯಜಿಸಿದ ಕಾಲದವರೆಗೆ, ಸಾಮಾನ್ಯವಾಗಿ ಆ ಪ್ರಾಂತದ ಪ್ರತಿಯೊಂದು ದೊಡ್ಡ ವ್ಯವಹಾರವೂ ಇವರ ಕೈತಟ್ಟದೆ ಇತ್ಯರ್ಥವಾದುದಿಲ್ಲ. ನ್ಯಾಯವಿಚಾರದಲ್ಲಿ ಹೀಗೆ ಅತಿಶಯ ಪಕ್ಷಪಾತಿಯಾಗಿದ್ದುದರಿಂದ, ಪ್ರಜೆಗಳ ವಿಷಯದಲ್ಲಿ ಪ್ರಭುತ್ವದವರಿಂದ ನಡೆಯುತ್ತಿದ್ದ ಲೋಪದೋಷಗಳೂ ಸಹನೆಯಾಗದೆ, ನಿರ್ದಾಕ್ಷಿಣ್ಯದಿಂದ ವಾದಿಸುತ್ತ, ಪ್ರಜಾಕ್ಷೇಮಕ್ಕಾಗಿ ಶ್ರಮಿಸುತ್ತಿದ್ದರು. ಅವರು ಅಸಹಕಾರ ಚಳವಳಿಯಲ್ಲಿ ಗೊತ್ತಾಗಿ ಭಾಗ ತೆಗೆದುಕೊಳ್ಳುವುದಕ್ಕೆ ಬಹು ಹಿಂದಿನಿಂದಲೂ ಶಕ್ತರಾದ ಪ್ರಜಾಮುಖಂಡರೆಂದು ಸಕಲರಿಂದಲೂ ಗೌರವಿಸಲ್ಪಡುತ್ತಿದ್ದರು. ಪ್ರಜೆಗಳಿಗೆ ಮುದ್ರಣ ಸ್ವಾತಂತ್ರ್ಯವೂ ವಾಕ್ಸ್ವಾತಂತ್ರ್ಯವೂ ಇರಬೇಕಾದುದು ಅತ್ಯಾವಶ್ಯಕವೆಂಬುದು ಪಂಡಿತರ ಮುಖ್ಯಾಭಿಪ್ರಾಯವಾಗಿದ್ದು, ಅದನ್ನು ವ್ಯಕ್ತಪಡಿಸಬೇಕಾಗಿ ಬಂದಾಗ್ಗೆ ಸರ್ಕಾರದವರ ಕೋಪತಾಪಗಳನ್ನು ಲಕ್ಷ್ಯಮಾಡದೆ, ದಾಕ್ಷಿಣ್ಯಕ್ಕೆ ಒಳಗಾಗದೆ, ತಮ್ಮ ಮನೋದೇವತೆಯು ಸತ್ಯವೆಂದು ನುಡಿವುದನ್ನು ನಿಶ್ಶಂಕೆಯಿಂದ ಸ್ಥಾಪಿಸಿ ಜನ ಪ್ರೀತಿಯನ್ನು ಗಳಿಸಿದರು.

## — ವಿವಾಹ —

ಪಂಡಿತರು ೧೮೮೩ನೆಯ ವರ್ಷದಲ್ಲಿ ನ್ಯಾಯವಾದಿವೃತ್ತಿಯನ್ನು ಪ್ರಾರಂಭಿಸಿದರಲ್ಲವೆ! ಅದಕ್ಕೆ ಒಂದು ವರ್ಷ ಹಿಂದೆ ಎಂದರೆ ಅವರ ಇಪ್ಪತ್ತೊಂದನೆಯ ವಯಸ್ಸಿನಲ್ಲಿ ಶ್ರೀಮತೀ ಸ್ವರೂಪರಾಣಿ ಎಂಬ ಕನ್ಯಾಮಣಿಯನ್ನು ವರಿಸಿ ವಿವಾಹವಾದರು. ಸ್ವರೂಪರಾಣಿಯು ಬಹು ಆಚಾರನಿಷ್ಠನೂ, ಸಾಧುಪ್ರಕೃತಿಯವನೂ ಆದ ಒಬ್ಬ ಬ್ರಾಹ್ಮಣನ ಕುವರಿಯು. ಆಕೆಯು ತನ್ನ ವಿದ್ಯಾಬುದ್ಧಿಗಳು, ನಯವಿನಯಗಳು, ಸೌಂದರ್ಯಸೌಶೀಲ್ಯಗಳು, ಎಲ್ಲಕ್ಕೂ ಹೆಚ್ಚಾಗಿ ಸ್ತ್ರೀಜಾತಿಗೇ ಗೌರವಪ್ರದವಾದ ಲಜ್ಜಾ ಮತ್ತು ಗಾಂಭೀರ್ಯಗಳು, ಈ ಎಲ್ಲವುಗಳಿಂದಲೂ ಪಂಡಿತ ಮೋತೀಲಾಲರಿಗೆ ಅನುರೂಪಳಾದ ಭಾರ್ಯೆಯೆನ್ನಿಸಿಕೊಂಡರು. ಆ ಪುಣ್ಯಾತ್ಮಳ ಭಾಗ್ಯಮಹಿಮೆಯೋ ಎನ್ನುವಂತೆ, ಆಕೆಯ ಪಾಣಿಗ್ರಹಣ ಮಾಡಿದಾರಭ್ಯ ಪಂಡಿತರ ಯಶಸ್ಸೂ ಭಾಗ್ಯವೂ ಸ್ತ್ರಿಪಕ್ಷದ ಹಾಲುಉಕ್ಕಿದಂತೆ ಹೆಚ್ಚುತ್ತ ಹೋಯಿತು.

ಮೋತೀಲಾಲ ಸ್ವರೂಪರಾಣಿಯವರಂತಹ ಅನುಕೂಲದಾಂಪತ್ಯವು, ಲೋಕದಲ್ಲಿ ಬಹು ಅಪೂರ್ವವಾಗಿ ಕಂಡುಬರುವುದು. ಆ ಮಹನೀಯದಂಪತಿಗಳ ಪುಣ್ಯಗರ್ಭದಲ್ಲಿ ಮೂರುಮಂದಿ ಮಕ್ಕಳು ಜನಿಸಿದರು. ಪಂಡಿತ ಜವಾಹಿರಲಾಲರೆಂಬುವರೇ ನಮ್ಮ ಕಥಾನಾಯಕರ ಏಕಮಾತ್ರ ಪುತ್ರರು; ಶ್ರೀಮತೀ ವಿಜಯಲಕ್ಷ್ಮೀದೇವಿ ಮತ್ತು ಸೌ|| ಕೃಷ್ಣನೆಹ್ರೂ ಎಂಬಿಬ್ಬರು ಪುತ್ರಿಯರು ಲೋಕವನ್ನೇ ಬೆರಗುಗೊಳಿಸುವಂತಹ ಪ್ರತಿಭೆ, ಅಖಂಡದ್ರವ್ಯ ಸಂಪಾದನೆ, ಸಕಲರ ಪ್ರೀತಿ ವಿಶ್ವಾಸಗಳಿಗೂ ಪಾತ್ರನಾಗಿರುವಿಕೆ, ಅನುಕೂಲಳಾದ ಭಾರ್ಯೆ, ಆರೋಗ ದೃಢಕಾಯರೂ ಸೌಂದರ್ಯ ಸೌಕುಮಾರ್ಯಗಳಿಂದ ಅನುರೂಪರೂ ಆದ ಪುತ್ರ ಪುತ್ರಿಯರು, ದಿವ್ಯಾರೋಗ್ಯಭಾಗ್ಯ, ಇಷ್ಟನ್ನೂ ಗಳಿಸಿದ್ದು, ಸತ್ಯ ಧರ್ಮ ನ್ಯಾಯ ಪಕ್ಷಪಾತಿಯಾದ ಮನೋಭಾವವನ್ನೂ, ಭಗವತ್ಪಾದಾರವಿಂದಗಳಲ್ಲಿ ಭಕ್ತಿಯನ್ನೂ ಪಡೆದಿದ್ದ ಮನುಷ್ಯನ ಇಹಲೋಕದ ಬಾಳ್ವೆಗೂ ಸ್ವರ್ಗವಾಸಕ್ಕೂ ಏನು ವ್ಯತ್ಯಾಸವುಂಟಾದೀತು ? ವಾಚಕಮಹಾಶಯರೇ, ಈ ಎಲ್ಲವನ್ನೂ ಯುಕ್ತಪ್ರಮಾಣದಲ್ಲಿ ಗಳಿಸಿದ್ದ ನಮ್ಮ ಕಥಾನಾಯಕರು ಸಂಸಾರದಲ್ಲಿ ತಪ್ಪದೆ ಭೂತಳ ಸ್ವರ್ಗಸುಖವನ್ನೇ ಅನುಭವಿಸುತ್ತಿದ್ದರೆಂದರೆ ಅದರಲ್ಲಿ ಅತಿಶಯೋಕ್ತಿಯುಂಟಾಗದು.

## — ರಾಜಕೀಯ ಕಾರ್ಯರಂಗ ಪ್ರವೇಶ —

ಪಂಡಿತ ಮೋತೀಲಾಲರು ರಾಜಕೀಯ ಕಾರ್ಯದಲ್ಲಿ ಪ್ರವೇಶಿಸಿದ್ದು ೧೯೦೭ನೆಯ ಸಂವತ್ಸರದ ಸುಮಾರಿನಲ್ಲಿ! ಆ ವೇಳೆಗೆ ಅವರ ಜೀವಮಾನದಲ್ಲಿ ನಾಲ್ವತ್ತೈದು ವರ್ಷಗಳು ಕಳೆದಿದ್ದುವು. ರಾಜಕೀಯವೆಂಬುದು ಬಹು ಉತ್ತರವಾದಿತ್ವದ ಕಾರ್ಯವೆಂದೂ, ಕೇವಲ ಉತ್ಸಾಹ ಆವೇಶಗಳಿಂದ ಆ ಕಾರ್ಯರಂಗಕ್ಕೆ ನುಗ್ಗುವುದು ಅಪಾಯಕಾರಿಯೆಂದೂ ಅವರು ತಿಳಿದಿದ್ದರು. ಅದರ ಪ್ರತಿಯೊಂದು ಅಂಗವನ್ನೂ ಸಾವಧಾನದಿಂದ ವಿಮರ್ಶಿಸಿ, ತನ್ನ ಬಲಾಬಲಗಳನ್ನು ಅದರ ಸಾಮರ್ಥ್ಯದೊಂದಿಗೆ ತೂಗಿನೋಡಿ, ಒಂದುಬಾರಿ ಪ್ರವೇಶಿಸಿದಮೇಲೆ, ಕೊನೆಯವರೆಗೂ ಮುಂದಿಟ್ಟ ಹೆಜ್ಜೆಯನ್ನು ಹಿಂದೆಗೆಯದಂತೆ ಶ್ರಮಿಸಲು ತನ್ನಿಂದ ಸಾಧ್ಯವೇ ಎಂಬುದನ್ನು ಯೋಚಿಸಿ, ಕಾರ್ಯ ಮಾಡಬಲ್ಲ ಧೀರನೇ ರಾಜಕೀಯ ಕಾರ್ಯಕ್ಕೆ ಯೋಗ್ಯನು ಎಂಬುದು ಅವರ

ಭಾವನೆಯಾಗಿದ್ದಿತು. ಪ್ರಾರಂಭಕ್ಕೇ ಅವರು ಆ ಸಂವತ್ಸರದಲ್ಲಿ ಅಲಹಾಬಾದಿನಲ್ಲಿ ನೆರೆದ ಸಂಯುಕ್ತ ಪ್ರಾಂತಗಳ ಒಂದಾನೊಂದು ಸಾರ್ವಜನಿಕ ಸಮ್ಮೇಳನದ ಅಧ್ಯಕ್ಷರಾಗಿ ಜನಸೇವೆಗೆ ಪ್ರಾರಂಭಿಸಿದರು. ಆದರೂ ಆಗ್ಗೆ ಅವರ ಕೀರ್ತಿಯೂ ಪ್ರತಿಷ್ಠೆಯೂ ತಮ್ಮ ಆ ಪ್ರಾಂತದ ಗಡಿಯನ್ನು ದಾಟಿ ಹೊರಕ್ಕೆ ಪರಿಚಯವಾಗಿರಲಿಲ್ಲ. ಆಗಿನ ಮಂದಪಕ್ಷದಲ್ಲಿ ಪ್ರತಿಭಾವಂತರಾಗಿದ್ದವರೆಂದರೆ, ಸರ್ ಸುರೇಂದ್ರನಾಥ ಬ್ಯಾನರ್ಜಿ, ಸರ್ ಫಿರೋಜ್ ಷಹ ಮೆಹತಾ ಮತ್ತು ಗೋಪಾಲಕೃಷ್ಣ ಗೋಖಲೇ ಮುಂತಾದ ಮಹನೀಯರು. ನಮ್ಮ ಕಥಾನಾಯಕರು, ಆಗ ದೇಶೀಯ ಕಾರ್ಯಗಳಲ್ಲಿ ಅವರ ಹಾಗೆ ಅತಿ ಮುಖ್ಯ ಪಾತ್ರಗಳನ್ನು ವಹಿಸದೆ, ಕೇವಲ ಅವರ ಅನುಯಾಯಿಗಳಾಗಿ ಮಾತ್ರ ಕೆಲಸಮಾಡತೊಡಗಿದ್ದರು.

೧೯೦೯ನೆಯ ಸಂವತ್ಸರದಲ್ಲಿ ಮಾರ್ಲೆ-ಮಿಂಟೋ ಸುಧಾರಣೆ ಎಂಬ ಒಂದು ರಾಜತಂತ್ರ ಪ್ರದರ್ಶನ ಕಾರ್ಯವು ಹೊರಬಿದ್ದಿತು. ಅದರ ಮೂಲಕ ತಮ್ಮ ದೇಶದ ರಾಜಕೀಯ ಜೀವನದ ಮೇಲುಂಟಾಗಬಹುದಾದ ಪರಿಣಾಮವನ್ನು ಕುರಿತು ದೀರ್ಘವಾಗಿ ಯೋಚಿಸಿದ ಮೋತೀಲಾಲರು, ಅಂದಿನಿಂದಲೇ ಸಾರ್ವಜನಿಕ ರಾಜಕೀಯ ಕಾರ್ಯಗಳಲ್ಲಿ ಹೆಚ್ಚು ಭಾಗವನ್ನು ತೆಗೆದುಕೊಂಡು ಕೆಲಸಮಾಡಲಾರಂಭಿಸಿ, ಸಂಯುಕ್ತ ಪ್ರಾಂತದ ನ್ಯಾಯವಿಧಾಯಕ ಸಭೆಯ ಸದಸ್ಯರಾದರು. ಅದರಲ್ಲೂ, ಮತ್ತು ಇತರ ಅನೇಕ ಸಮಿತಿಗಳಲ್ಲೂ ಅವರು ಮುಖ್ಯಪಾತ್ರವನ್ನು ವಹಿಸಿ, ಸರ್ಕಾರದವರ ಆಡಳಿತ ನೀತಿಯನ್ನು ಬಹು ತೀಕ್ಷ್ಣ ರೀತಿಯಿಂದ ವಿಮರ್ಶಿಸಿ, ಖಂಡಿಸತೊಡಗಿದರು. ನಿರ್ದಾಕ್ಷಿಣ್ಯ ಪ್ರಕೃತಿಯ ಇವರ ವಿಮರ್ಶೆಗಳಿಂದಲೂ, ರಾಜ್ಯಾಂಗದವರ ಕಾರ್ಯಗಳನ್ನು ಕುರಿತು ಕಟುತರವಾದ ಟೀಕೆಗಳಿಂದಲೂ ಇವರು ಅಧಿಕಾರಿಗಳ ವಕ್ರದೃಷ್ಟಿಗೆ ಪಾತ್ರರಾಗಬೇಕಾಯಿತು. ದೇಶದ ಸಕಲ ಮತ-ಪಂಗಡಗಳವರೂ ಸಮಾನವಾದ ಸುಖಸೌಲಭ್ಯಗಳನ್ನು ಹೊಂದಲು ಬಾಧ್ಯರು ಎಂಬ ವಿಷಯದಲ್ಲಿ ಇವರಿಗಿದ್ದ ಉದಾರವಾದ ಅಭಿಪ್ರಾಯವು, ಒಂದಾನೊಂದು ಸಂದರ್ಭದಲ್ಲಿ ಅವರು ಹಿಂದೂ ಮತ್ತು ಮಹಮ್ಮದೀಯರಿಗೆ ಇರಬೇಕಾದ ಮತಾಧಿಕಾರವನ್ನು ಕುರಿತು ವಾದಿಸಿದಾಗ್ಗೆ ನಿದರ್ಶನಕ್ಕೆ ಬಂದಿತು. ಅವರ ಅಭಿಪ್ರಾಯದಲ್ಲಿ ಹಿಂದೂ ಮತ್ತು ಮಹಮ್ಮದೀಯರು,

ತಾವು ಹಿಂದೂಗಳು ಮತ್ತು ಮಹಮ್ಮದೀಯರು ಎಂದು ಯೋಚಿಸುವುದಕ್ಕೆ ಮೊದಲೇ ಭಾರತೀಯರು ಎಂದು ಯೋಚಿಸಿ, ಉದಾರಭಾವವನ್ನು ವಹಿಸಿ ದೇಶಕಾರ್ಯಗಳಲ್ಲಿ ಐಕಮತ್ಯದಿಂದ ತೊಡಗಬೇಕಾದುದರ ಆವಶ್ಯಕತೆ ಯನ್ನು ಕಂಡುಕೊಂಡಿದ್ದರು.

ಅವರ ನಿರ್ದಾಕ್ಷಿಣ್ಯ ಪ್ರಕೃತಿಯೂ ಮತ್ತು ಸ್ವಾತಂತ್ರ್ಯ ಮನೋಭಾವವೂ ಮತ್ತೊಂದುವೇಳೆ ಪ್ರದರ್ಶನಕ್ಕೆ ಬಂದ ಸಂದರ್ಭವೊಂದುಂಟು. ೧೯೧೨ನೆಯ ಸಂವತ್ಸರದಲ್ಲಿ, ನ್ಯಾಯವಿಧಾಯಕ ಸಭೆಯಲ್ಲಿ, ರೂರ್ಕಿ ಕಾಲೇಜಿನ ಪ್ರಿನ್ಸಿಪಾಲನಾದ ವುಡ್‌ಸಾಹೇಬನು, ಭಾರತೀಯರ ಗುಣನಡತೆಗಳ ವಿಚಾರವನ್ನೆತ್ತಿ ಅವಹೇಳನ ರೀತಿಯಿಂದ ನುಡಿದಿದ್ದ ಪ್ರಸ್ತಾಪವು ಚರ್ಚೆಗೆ ಬಂತು ಪಂಡಿತ ಮೋತೀಲಾಲರು, ಆ ಪ್ರಶ್ನೆಯನ್ನು ತೆಗೆದು ಕೊಂಡು ವಾದಿಸಲಾರಂಭಿಸಿದರು ರಾಜ್ಯಾಂಗ ಕಾರ್ಯದರ್ಶಿಯು, ಈ ವಿಚಾರವನ್ನು ಕುರಿತು, ವುಡ್ ಸಾಹೇಬನಿಂದ ಬಂದ ಪಶ್ಚಾತ್ತಾಪ ಸೂಚಕ ಕ್ಷಮಾಪ್ರಾರ್ಥನಾ ಪತ್ರಿಕೆಯನ್ನು ಸಭೆಯ ಮುಂದಿಟ್ಟು ಆ ಪ್ರಶ್ನೆಯನ್ನು ಅಲ್ಲಿಗೇ ಅಂತ್ಯಗೊಳಿಸಲು ಹವಣಿಸಿದನು ಆದರೆ, ಅದು ಕೇವಲ ಉಪಶಾಂತಿಕರ ಪ್ರಯತ್ನವೆಂದು ತೋರಿತಲ್ಲದೆ, ನಿಶ್ಚಯವಾದ ಪಶ್ಚಾತ್ತಾಪವನ್ನು ಸೂಚಿಸುವುದಾಗಿರಲಿಲ್ಲ ಅಧ್ಯಕ್ಷನಾಗಿದ್ದ ಸರ್ ಜೇಮ್ಸ್ ಮೆಸ್ಟನ್ ಸಾಹೇಬನಾದರೋ ಆ ವಿಚಾರದಲ್ಲಿ ಸದಸ್ಯರ ಅಭಿಪ್ರಾಯವನ್ನು ಪ್ರತೀಕ್ಷಿಸದೆಯೇ, ತನ್ನ ತೀರ್ಮಾನವನ್ನು ಹೇಳಿ ಆ ಪ್ರಶ್ನೆಯನ್ನು ಉಪಸಂಹಾರಗೊಳಿಸಿಬಿಡಲು ಯತ್ನಿಸಿದನು. ಈ ಬಗೆಯ ಕಪಟವೃತ್ತಿಯು ಪಂಡಿತರಿಗೆ ಸಹನೆಯಾಗಲಿಲ್ಲ. ಅವರು ಒಡನೆ ರೋಷಭೀಷಣರಾಗಿ ಎದ್ದು ನಿಂತು, ಸದಸ್ಯರಾದ ತಮ್ಮ ಸ್ವಾಭಾವಿಕ ಸ್ವಾತಂತ್ರ್ಯವನ್ನು ತುಳಿದು ಅಧಿಕಾರ ವರ್ಗದವರು ಸ್ವೇಚ್ಛೆಯಿಂದ ಪ್ರವರ್ತಿಸುವ ಅಂತಹ ಸಭೆಯಲ್ಲಿ ತಾನಿರಲಾರೆನೆಂದು ಘಂಟಾಘೋಷವಾಗಿ ಉದ್ಘೋಷಿಸಿ, ಒಡನೆ ಸಭೆಮನೆಯಿಂದ ಹೊರಟು ನಡೆದರು. ಆತ್ಮಗೌರವ ಪಾಲನೆಯಲ್ಲಿ ಅಷ್ಟುಮಟ್ಟಿನ ಅಭಿಮಾನಶಾಲಿಗಳಾಗಿದ್ದ ಅವರನ್ನು ಪುನಃ ಸಭೆಮನೆಗೆ ಕರೆತರುವಲ್ಲಿ ಮೆಸ್ಟನ್ ಸಾಹೇಬನ ರಾಜತಂತ್ರ ಪ್ರಜ್ಞೆಯೆಲ್ಲವೂ, ಪಂಡಿತರ ಪರಮ ಮಿತ್ರರೂ ಸಹಾಧ್ಯಾಯಿಗಳೂ ಆದ ಸರ್ ಸುಂದರಲಾಲರ ದಾಕ್ಷಿಣ್ಯವೆಲ್ಲವೂ ವಿನಿಯೋ

ಗವಾಗಬೇಕಾಯಿತು.

— 'ಹೋಂ ರೂಲ್' ಚಳವಳಿ —

ಪ್ರಜಾವರ್ಗದ ಹಕ್ಕುಬಾಧ್ಯತೆಗಳನ್ನು ಕುರಿತು, ಸರ್ಕಾರದವರ ವಂಚಕ ವರ್ತನೆಗಳನ್ನು ಪ್ರತಿಭಟಿಸಿ ವಾದಿಸುತ್ತಿದ್ದ ಮೋತೀಲಾಲರ ಕಾರ್ಯಕ್ಷೇತ್ರವು ವಿಸ್ತರಿಸುವ ಮತ್ತೊಂದು ಸುಸಂಧಿಯು ೧೯೧೬ನೆಯ ಸಂವತ್ಸರದಲ್ಲಿ ಪ್ರಾಪ್ತವಾಯಿತು. ಆಗ ಯೂರೋಪು ಖಂಡದಲ್ಲಿ ಭಯಂಕರ ವಿಶ್ವಸಂಗ್ರಾಮವು ನಡೆಯುತ್ತಿದ್ದಿತು. ಬ್ರಿಟಿಷರು, ಲೋಕದಲ್ಲಿ ಸತ್ಯ ಧರ್ಮ ನ್ಯಾಯಸ್ಥಾಪನೆಗಾಗಿಯೂ, ದಳಿತ ಜನಾಂಗಗಳ ಪುನರುದ್ಧರಣಕ್ಕಾಗಿಯೂ ತಾವು ಯುದ್ಧಕಾರ್ಯದಲ್ಲಿ ಪ್ರವೃತ್ತರಾಗಿದ್ದೇವೆಂದು ಜಗತ್ತಿಗೆ ಡಂಗೂರ ಹೊಡೆದಿದ್ದರು. ಆ ವೇಳೆಯಲ್ಲೇ ಇತ್ತ ಹಿಂದೂಸ್ಥಾನದ ರಾಜಕೀಯ ಪ್ರಶ್ನೆಯನ್ನೂ ತೀಕ್ಷ್ಣ ಪ್ರಮಾಣಕ್ಕೊಯ್ದು ಏನಾದರೊಂದು ಇತ್ಯರ್ಥಕ್ಕೆ ತರಲು ಅದೇ ಸುಸಂಧಿಯೆಂದು ಯೋಚಿಸಿ, ಶ್ರೀಮತಿ ಆನಿಬೆಸೆಂಟಮ್ಮನವರು 'ಹೋಂ ರೂಲ್ ಲೀಗ್' ಎಂಬೊಂದು ಸಂಸ್ಥೆಯನ್ನು ಏರ್ಪಡಿಸಿ ವಿಶೇಷ ರಾಜಕೀಯ ಚಳವಳಿಯನ್ನು ನಡೆಸಿದ್ದರು. ಸರ್ಕಾರದವರೂ ಆ ಚಳವಳಿಯನ್ನು ತುಳಿಯಲು ಭಯಂಕರ ರೀತಿಯ ದಬ್ಬಾಳಿಕೆಯನ್ನು ನಡೆಸಿ, ಕೊನೆಯದಾಗಿ ಬೆಸೆಂಟರ ಸಂಚಾರ-ಪ್ರಚಾರಕಾರ್ಯಗಳನ್ನು ತಡೆಗಟ್ಟಿ ಒಂದೇ ಕಡೆಯಲ್ಲಿರಬೇಕೆಂದು ನಿರ್ಬಂಧಗೊಳಿಸಿದರು.

ರಾಜ್ಯಾಂಗದವರು ಕೈಕೊಂಡ ಈ ದಬ್ಬಾಳಿಕೆಯಿಂದ ದೇಶವೆಲ್ಲ ಅಲ್ಲೋಲ ಕಲ್ಲೋಲವಾದಂತಾಯಿತು. ಇಂತಹ ವಿಷಮ ಪರಿಸ್ಥಿತಿಯು ಸ್ವಾತಂತ್ರ್ಯಕಾಂಕ್ಷಿಯೂ ಪ್ರಜಾಪಕ್ಷವಾದಿಯೂ ಆದ ಮೋತೀಲಾಲರನ್ನು ಚಲನಗೊಳಿಸದಿದ್ದೀತೆ? ಆಗ್ಗೆ ಪಂಡಿತರು, ಕೇವಲ ಮಂದಪಕ್ಷದ ಪ್ರತಿನಿಧಿಗಳಾಗಿ, ಅಲಹಾಬಾದಿನ 'ಲೀಡರ್' ಎಂಬೊಂದು ಮಂದಪಕ್ಷದ ಪತ್ರಿಕೆಯ ಸಂಚಾಲಕರಲ್ಲೊಬ್ಬರಾಗಿದ್ದರು. ರಾಜಕಾರ್ಯಗಳ ವಿಷಮಸ್ಥಿತಿಯು, ಪಂಡಿತರನ್ನು ತಮ್ಮ ಸರ್ವಶಕ್ತಿಯಿಂದಲೂ ಕಾರ್ಯರಂಗವನ್ನು ಪ್ರವೇಶಿಸಿ ಹೋರಾಡುವಂತೆ ಪ್ರೇರಿಸಿತು. ಚಳವಳಿಯಲ್ಲಿ ಮೋತೀಲಾಲರು ಪ್ರವೇಶಿಸಿದೊಡನೆಯೇ, ಅವರಿಗೆ ನ್ಯಾಯವಾದಿ ವೃತ್ತಿಯಲ್ಲಿದ್ದ ಪ್ರತಿಷ್ಠಾಸ್ಥಾನದ ಮಹಿಮೆಯಿಂದ ಇಲ್ಲೂ ಒಡನೆ ಉನ್ನತಸ್ಥಾನವೇ ಪ್ರಾಪ್ತವಾಯಿತು.

ಅದೇ ಕಾಲದಲ್ಲೇ ಬಂಗಾಳಾದಲ್ಲಿ ಸುಪ್ರಸಿದ್ಧ ನ್ಯಾಯವಾದಿಯೆಂದು ಪ್ರಖ್ಯಾತರಾಗಿದ್ದ ಶ್ರೀ ಚಿತ್ತರಂಜನದಾಸರೂ ಈ ಚಳವಳಿಯನ್ನು ಪ್ರವೇಶಿಸಿದ್ದರು. ಮೋತೀಲಾಲರು, ಒಡನೆ ಆ ಸಾರಿ ನಡೆದ ಸಂಯುಕ್ತ ಪ್ರಾಂತಿಕ ರಾಜಕೀಯ ಸಮ್ಮೇಳನದ ವಿಶೇಷ ಅಧಿವೇಶನಕ್ಕೆ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಆ ಸಮ್ಮೇಳನದಲ್ಲಿ ಪಂಡಿತರು ಮಾಡಿದ ಅಧ್ಯಕ್ಷೋಪನ್ಯಾಸವು, ಪ್ರಜಾಸ್ವಾತಂತ್ರ್ಯವನ್ನು ತುಳಿಯಲು ಸರ್ಕಾರದವರು ಎಷ್ಟು ವ್ಯವಸ್ಥಿತರೀತಿಯಿಂದ ದಬ್ಬಾಳಿಕೆಯನ್ನು ನಡಿಸುತ್ತಿದ್ದಾರೆಂಬುದನ್ನು ಕುರಿತು ತೀಕ್ಷ್ಣವಾದ ಟೀಕೆಯೊಂದಿಗೆ ವಿವರಿಸುತ್ತಾ, ಎಲ್ಲರನ್ನೂ ಹೊಡೆದೆಬ್ಬಿಸುವಂತಿದ್ದಿತು. ಆ ಉಪನ್ಯಾಸದ ನಿರ್ಭೀತಿಯ ಸ್ವಭಾವವನ್ನೂ, ವಿಚಾರವೈಖರಿಯನ್ನೂ ಕಂಡು ಕೆರಳಿದ 'ಪಯೋನಿಯರ್' ಎಂಬೊಂದು ಪತ್ರಿಕೆಯು ಪಂಡಿತರನ್ನು 'ಹೋಂರೂಲ್ ಚಳವಳಿಯ ಸೈನ್ಯಾಧಿಪ (ಬ್ರಿಗೇಡಿಯರ್ ಜನರಲ್)' ಎಂದು ಸಂಬೋಧಿಸಿತು

## — ಪತ್ರಿಕಾ ಸಂಪಾದಕ ಕಾರ್ಯ —

ಹೆಚ್ಚು ಕಡಮೆ ಇದೇ ಸಂದರ್ಭದಲ್ಲೇ ಇರಬಹುದು,- ಪಂಡಿತರು ಲೀಡರ್ ಪತ್ರಿಕೆಯ ಸಂಚಾಲಕಸ್ಥಾನದಿಂದ ವಿರಾಮಹೊಂದಿ, 'ಇಂಡಿಪೆಂಡೆಂಟ್' ಎಂಬ ಪತ್ರಿಕೆಯ ಸರ್ವಾಧಿಕಾರವನ್ನೂ ಸ್ವೀಕರಿಸಿ ತಮ್ಮ ರಾಜಕೀಯ ಕಾರ್ಯಕ್ಷೇತ್ರವನ್ನು ಮತ್ತೂ ವಿಸ್ತಾರಗೊಳಿಸಿಕೊಂಡರು ಆ ಪತ್ರಿಕೆಯ ಪ್ರಾರಂಭದ ಒಂದಾನೊಂದು ಸಂಚಿಕೆಯಲ್ಲಿ, ತಮ್ಮ ಧ್ಯೇಯವೇನೆಂಬುದನ್ನು ಕುರಿತು ಅವರು ಹೀಗೆ ಹೇಳಿದ್ದಾರೆ.

'ಜಗತ್ತನ್ನು ಆಳುವ ಧ್ಯೇಯಗಳೆರಡು. ಅವೇ ಜಗತ್ತಿನ ಸ್ವಾಮ್ಯಕ್ಕಾಗಿಯೂ ಬಡಿದಾಡುವವುಗಳು. ಒಂದು ಸ್ವಾರ್ಥತೆ ಮತ್ತೊಂದು ನಿಸ್ವಾರ್ಥತೆ! ಇವುಗಳಲ್ಲೊಂದು ಬಂಧವಿಮೋಚನೆಗೂ ಮತ್ತೊಂದು ಬಂಧನಕ್ಕೂ ಕಾರಣವಾಗುತ್ತವೆ.

'ಇಂಡಿಪೆಂಡೆಂಟ್' ಪತ್ರಿಕೆಯು ಜನಾಂಗದ ಬಂಧವಿಮೋಚನೆಯ ಧ್ಯೇಯವನ್ನಿಟ್ಟುಕೊಂಡು ಶ್ರಮಿಸಲು ಜನ್ಮಗ್ರಹಣಮಾಡಿದೆ. ವ್ಯಕ್ತಿಗಳು ಸಂಘಭಾವನೆಯಿಂದಲೂ, ಸಂಘಗಳು ಕುಲಭಾವನೆಯಿಂದಲೂ, ಕುಲಗಳು

ಜನಾಂಗಭಾವನೆಯಿಂದಲೂ ಪಕ್ವತೆಯನ್ನು ಹೊಂದಿ, ಜನಾಂಗವು ಮಾನವ ಜನ್ಮದ ಔನ್ನತ್ಯ ಧ್ಯೇಯಸಾಧನೆ ಮಾಡುವ ಘನವಾದ ಕಾರ್ಯವನ್ನು ಸಾಧಿಸಲು ಸರ್ವವಿಧದಿಂದಲೂ ಪ್ರಯತ್ನಿಸುವುದೇ ನಮ್ಮ ಪತ್ರಿಕೆಯ ಧ್ಯೇಯವಾಗಿದೆ.

'ಈ ಧ್ಯೇಯಸಾಧನೆಯಲ್ಲಿ ದಾಸ್ಯಮನೋವೃತ್ತಿಗೆ ಒಳಗಾಗುವ ಆತ್ಮಘಾತಕವಾದ ಸಮಯಾನುವರ್ತನ ಮಾರ್ಗವನ್ನು ಅದೆಂದಿಗೂ ಅವಲಂಬಿಸಲಾರದು. ಮರೆಮೋಸಗಳ ಕಪಟ ಮನೋವೃತ್ತಿಯನ್ನು ದೂರೀಕರಿಸಿ ತಪ್ಪನ್ನು ನಿರ್ದಾಕ್ಷಿಣ್ಯದಿಂದ ಹುಡುಕಿ ತೆಗೆದು, ಸರಳವಾದ ಭಾಷೆಯಲ್ಲಿ ನಿಷ್ಕಲ್ಮಷ ಮನೋಭಾವದಿಂದ ಬೆಳಕಿಗೆ ತಂದು ಹೇಳಬೇಕೆಂಬುದೇ ಅದರ ಇಚ್ಛೆ. ಸ್ವಾಭಾವಿಕವಾದ ಮಾನವ ಸ್ವಾತಂತ್ರ್ಯಕ್ಕೆ ವಿಘ್ನವೆಸಿಸುವ ಮಾರ್ಗಗಳನ್ನು ಖಂಡಿಸಿ ಮಾನವ ಕುಲಕ್ಕೆ ಸುಖಸಾಧಕವಾದ ಮಾರ್ಗವನ್ನು ಪ್ರತಿಪಾದಿಸುವಲ್ಲಿ ಶ್ರಮಿಸಬೇಕೆಂಬುದೇ ಅದರ ಅಭಿಲಾಷೆ

'ತನ್ನ ಈ ಕರ್ತವ್ಯಸಾಧನೆಯಲ್ಲಿ ಇಂಡಿಪೆಂಡೆಂಟ್ ಪತ್ರಿಕೆಯು' ಅಮೇರಿಕಾದೇಶದ ಪ್ರೆಸಿಡೆಂಟ್ ವಿಲ್ಸನ್ನರ- 'ಲೋಕದ ಕೆಲಕೆಲ ಜನಾಂಗದವರು ಮಾತ್ರವೇ ಮಿಕ್ಕ ಜನಾಂಗಗಳನ್ನು ಆಳಲು ಬಾಧ್ಯರೆಂಬ ಮಹಾತ್ಮ್ಯವು ಇನ್ನು ಅಂತ್ಯವಾಗಬೇಕಾಗಿದೆ. ಈಗ ಪ್ರಪಂಚದ ಜನಾಂಗಗಳ ಭಾಗ್ಯಸೂತ್ರಗಳು ಸರಳ ಹೃದಯದ ನಿಸ್ವಾರ್ಥ ಜನಗಳ ಕೈಯಲ್ಲಿವೆ' ಎಂಬ ನುಡಿಯನ್ನು ಕಣ್ಣಾಮುಂದಿಟ್ಟು ನಡೆಯುವುದು.''

ಈ ಪತ್ರಿಕೆಯ ಮೂಲಕ ಸಂಯುಕ್ತ ಪ್ರಾಂತದಲ್ಲಿ ಅಗಾಧ ಜನಜಾಗೃತಿಯ ಕಾರ್ಯ ನಡೆಯಿತು ಕೇವಲ ರಾಜಕೀಯ ವಿಚಾರ ಮಾತ್ರವಲ್ಲ. ವಾಙ್ಮಯಾತ್ಮಕ ಮತ್ತು ಐತಿಹಾಸಿಕ ಲೇಖನಗಳೂ ಈ ಪತ್ರಿಕೆಯಲ್ಲಿ ಬರತೊಡಗಿದುವು. ಬೊಂಬಾಯಿ ಕ್ರಾನಿಕಲ್ ಪತ್ರಿಕೆಯ ಉಪಸಂಪಾದಕನು, ತಿಂಗಳೊಂದಕ್ಕೆ ೧೫೦೦ ರೂಪಾಯಿ ವೇತನದಮೇಲೆ ಈ ಪತ್ರಿಕೆಯ ಸಂಪಾದಕ ಸ್ಥಾನವನ್ನು ಕೈಕೊಂಡು ನಡೆಯಿಸತೊಡಗಿದನು. ಈ ಪತ್ರಿಕೆಯ ವೆಚ್ಚಕ್ಕೆ ಸಂಬಂಧಿಸಿದ ದ್ರವ್ಯಭಾರವನ್ನೆಲ್ಲ ಮೋತೀಲಾಲರೇ ಭರಿಸಬೇಕಾಯಿತು. ಆ ಪ್ರಾಂತದ ವಿದ್ಯಾಭ್ಯಾಸದ ಪ್ರಗತಿಗೆ ಅಂತಹ ಪತ್ರಿಕೆ

ಯೊಂದು ಅತ್ಯಾವಶ್ಯಕವೆಂದು ಅವರಿಗೆ ಮನದಟ್ಟಾಗಿದ್ದುದರಿಂದ, ಆ ದ್ರವ್ಯನಷ್ಟವನ್ನು ಕುರಿತು ಅವರು ತಿಲಮಾತ್ರವೂ ಚಿಂತಿಸಲಿಲ್ಲ.

## — "ಮಾಂಟೆಗೂ ಸುಧಾರಣಾ ವರದಿ-೧೯೧೭" —

ಲೋಕಕ್ಷೋಭಕರವಾದ ವಿಶ್ವಸಂಗ್ರಾಮದ ಮಧ್ಯಕಾಲದಲ್ಲೇ ಪ್ರಾಪ್ತವಾದ ಈ ಹೋಂರೂಲು ಚಳವಳಿಯ ಪ್ರಳಯಸ್ವರೂಪವು ಇಂಗ್ಲೆಂಡಿನಲ್ಲಿ ವಿಶೇಷ ಕಲ್ಲೋಲವನ್ನೆಬ್ಬಿಸಿತು. ಜನಗಳ ಮನಶ್ಶಾಂತಿಯು ನಷ್ಟವಾಗಿ ತಳಮಳವೆದ್ದಿತು. ಹಿಂದೂಸ್ತಾನದ ರಾಜ್ಯಭಾರವನ್ನು ಕುರಿತು ಗೊತ್ತಾದ ಒಂದು ನಿಯಮವನ್ನು ಅನುಸರಿಸುವೆವೆಂಬುದನ್ನು ಶೀಘ್ರವಾಗಿಯೇ ಪ್ರಕಟಪಡಿಸಬೇಕೆಂದು ಬ್ರಿಟಿಷ್ ಮಂತ್ರಿಮಂಡಲವು ಜಾಗ್ರತಗೊಳ್ಳುವಂತಾಯಿತು. ಮಂತ್ರಿಮಂಡಲದ ಈ ನಿರ್ಧರ ಅಭಿಪ್ರಾಯವನ್ನನುಸರಿಸಿಯೇ ೧೯೧೭ನೆಯ ಆಗಸ್ಟ್ ೨೦ರಲ್ಲಿ ಆಗ ಹಿಂದೂಸ್ಥಾನದ ಸ್ಟೇಟ್‌ಸೆಕ್ರೆಟರಿಯಾಗಿದ್ದ ಮಾಂಟೆಗೂ ಸಾಹೇಬನು ಒಂದು ಪ್ರಸಿದ್ಧಪತ್ರಿಕೆಯನ್ನು ಹೊರಡಿಸಿದನು. ಅದರಿಂದ 'ಹಿಂದೂಸ್ಥಾನಕ್ಕೆ ಕ್ರಮಕ್ರಮವಾಗಿ ಸ್ವಪರಿಪಾಲನೆಯ ಅಧಿಕಾರವನ್ನು ವಹಿಸಿಕೊಡಬೇಕೆಂಬುದೇ ಬ್ರಿಟಿಷ್ ಸರ್ಕಾರದವರ ಮುಖ್ಯ ಧ್ಯೇಯವಾಗಿದೆ' ಎಂದು ವ್ಯಕ್ತಪಡುವಂತಿದ್ದಿತು.

ಈ ಚರಿತ್ರಪ್ರಸಿದ್ಧವಾದ ವೃತ್ತಾಂತವನ್ನು ಕುರಿತು ಹಿಂದೂದೇಶದ ರಾಜಕೀಯ ಪಕ್ಷಗಳೆಲ್ಲವೂ, ಸ್ವರ್ಗವೇ ಕೈಗೆ ಸಿಕ್ಕಷ್ಟುಮಟ್ಟಿಗೆ ಸಂತೋಷಗೊಂಡುವು. ಸಾಲದುದಕ್ಕೆ, ದಬ್ಬಾಳಿಕೆಯೂ ಸಿಲ್ಲಿಸಲ್ಪಟ್ಟು ಬೆಸೆಂಟಮ್ಮನವರನ್ನು ನಿರ್ಬಂಧದಿಂದ ಮುಕ್ತರನ್ನಾಗಿ ಮಾಡಿದುದು, ರಾಜ್ಯಾಂಗದವರು ನಿಶ್ಚಯವಾಗಿಯೂ ದೇಶದ ಹಿತಸಾಧನೆಯ ವಿಷಯದಲ್ಲಿ ಶ್ರದ್ಧಾವಂತರಾಗಿರುವರೆಂಬುದನ್ನು ಸ್ಪಷ್ಟಗೊಳಿಸಿತು. ಒಡನೆ, ಹಿಂದೂಸ್ಥಾನದ ಬಂಧವಿಮುಕ್ತಿಗೆ ಬೆಸೆಂಟಮ್ಮನವರೂ ಅವರು ಏರ್ಪಡಿಸಿದ್ದ ಹೋಂರೂಲ್ ಲೀಗ್ ಇವೇ ಪರಮಸಾಧನಗಳೆಂಬ ನಂಬಿಕೆಯು ದೃಢವಾಗಿ, ದೇಶವು ಬೆಸೆಂಟರನ್ನು ಲೋಕಮಾತೃವೆಂದು ಗೌರವಿಸಿ, ಕಲ್ಕತ್ತೆಯಲ್ಲಿ ನಡೆದ ರಾಷ್ಟ್ರಮಹಾಸಭೆಯ ಅಧ್ಯಕ್ಷಸ್ಥಾನಕ್ಕೆ ಅವರನ್ನು ಚುನಾಯಿಸಿತು. ಬೆಸೆಂಟರನ್ನು ಸರ್ಕಾರವು ನಿರ್ಬಂಧದಿಂದ ಬಿಡುಗಡೆಮಾಡಿ, ದೇಶವು ರಾಷ್ಟ್ರಮಹಾಸಭೆಯ

ಅಧ್ಯಕ್ಷಸ್ಥಾನವನ್ನಿತ್ತು ಗೌರವಿಸಿತಾದರೂ, ಸೆರೆಮನೆಗಳಲ್ಲಿ ಕೊಳೆಯುತ್ತ ಬಿದ್ದಿದ್ದ ಸಹಸ್ರಾರು ಮಂದಿ ದೇಶಸೇವಕರ ಗತಿಯೇನೆಂದು ಸರ್ಕಾರವು ಇನ್ನೂ ಯೋಚಿಸಿಯೇ ಇರಲಿಲ್ಲ. ಸೆರೆಮನೆಗಳಲ್ಲಿ ಆ ದುರ್ದೈವಿಗಳನ್ನು ಚಿತ್ರಹಿಂಸೆಯಿಂದ ಪೀಡಿಸುತ್ತಿರುವರೆಂಬ ವರ್ತಮಾನವು ಆಗಾಗ್ಗೆ ಹೊರ ಹೊರಟು ಜನಮನವನ್ನು ನೋಯಿಸುತ್ತಿದ್ದಿತು. ಇದು, ಬ್ರಿಟಿಷ್ ಸರ್ಕಾರಕ್ಕೆ ಹಿಂದೂಸ್ಥಾನದ ಕ್ಷೇಮಚಿಂತನೆಯ ವಿಷಯದಲ್ಲಿ ಸಹಾನುಭೂತಿಯುಂಟೇ ಎಂಬ ವಿಷಯದಲ್ಲಿ ಸಂದೇಹವನ್ನು ಹುಟ್ಟಿಸಿತು.

ಪ್ರಜಾವರ್ಗದ ಮನಸ್ಸು ಹೀಗೆ ಸಂಶಯಾವೃತವಾಗಿದ್ದ ಸಂದರ್ಭದಲ್ಲೇ ೧೯೧೮ನೆಯ ಜೂಲೈ ತಿಂಗಳಲ್ಲಿ ಮಾಂಟೆಗೂ ಛೆಲ್ಮ್ಸ್‌ಫರ್ಡ್ ರಿಪೋರ್ಟ್ ಎಂಬ ಹಿಂದೂಸ್ಥಾನದ ಸುಧಾರಣಾ ವರದಿಯೂ ಹೊರಬಿತ್ತು. ಮಾಂಟೆಗೂ ಸಾಹೇಬನ ವಾಕ್ಯದಿಂದ ಲೇಶಮಾತ್ರ ಸಮಾಧಾನಗೊಂಡಿದ್ದ ರಾಜಕೀಯ ಮುಂದಾಳುಗಳು, ಈ ವರದಿಯನ್ನು ಕಂಡು ಕಡು ಕುಪಿತರಾದರು. ಮಂದಪಕ್ಷದವರು, ಹಿಂದಿನ ಸ್ಥಿತಿಗಿಂತಲೂ ಈ ಸುಧಾರಣೆಯ ಮೂಲಕ ಸ್ವಲ್ಪಮಟ್ಟಿನ ಉತ್ತಮಸ್ಥಿತಿಯು ಪ್ರಾಪ್ತಿಸಬಹುದೆಂದು ಸಮಾಧಾನಗೊಂಡರಾದರೂ, ರಾಷ್ಟ್ರೀಯ ಉಗ್ರಪಕ್ಷದವರು ಅದನ್ನು ಎಷ್ಟುಮಾತ್ರವೂ ಒಪ್ಪಿಕೊಳ್ಳದೆ ಪ್ರತಿಭಟಿಸಿದರು. ೧೯೧೬ನೆಯ ಲಕ್ನೋ ಕಾಂಗ್ರೆಸ್ಸಿನಲ್ಲಿ ಒಂದು ಬಗೆಯಿಂದ ಒಂದಾಗಿದ್ದ ಮಂದ-ಉಗ್ರ ಎಂಬೆರಡು ಪಕ್ಷಗಳೂ, ೧೯೧೮ನೆಯ ಸಂವತ್ಸರವೆಂಬ ವೇಳೆಗೆ ಗೊತ್ತಾದ ಬೇರೆ ಬೇರೆ ರಾಜಕೀಯ ಪಕ್ಷಗಳಾಗಿ ಬೇರ್ಪಟ್ಟುಹೋದುವು ರಾಷ್ಟ್ರಮಹಾಸಭೆಯು ಮಂದಪಕ್ಷದವರ ಪಾಲಿಗೆ ಶಾಶ್ವತವಾಗಿ ನಷ್ಟವಾದಂತಾಗಿ, ಮುಂದೆ ಉಗ್ರಪಕ್ಷದವರ ಸೂತ್ರಚಾಲನೆಯಂತೆಯೇ ನಡೆಯತೊಡಗಿತು

೧೯೧೮ನೆಯ ಸಂವತ್ಸರದಲ್ಲಿ ಯೂರೋಪಿನ ವಿಶ್ವಸಂಗ್ರಾಮವು ಅಂತ್ಯವಾಗಿ, ಬ್ರಿಟಿಷರೂ ಅವರ ಮಿತ್ರಮಂಡಲಿಯವರೂ ಜಯಶೀಲರಾದರೆಂಬ ವಿಚಾರವು ಪ್ರಕಟವಾಯಿತು. ಬ್ರಿಟಿಷ್ ಚಕ್ರಾಧಿಪತ್ಯವೆಲ್ಲ ಆನಂದಾಂಬುಧಿಯಲ್ಲಿ ಮುಳುಗಿ ತೇಲಾಡಿತು ಈ ಜಯಕ್ಕೆ, ವಿಶೇಷ ಜನಸಹಾಯ ಧನ ಸಹಾಯಗಳನ್ನೊದಗಿಸಿದ್ದ ಭಾರತದೇಶಕ್ಕೆ, ಈ ಜಯೋತ್ಸವದ ಸಂಭ್ರಮದ ವೇಳೆಯಲ್ಲಿ ಚಕ್ರವರ್ತಿಯವರಿಂದ ಏನಾದರೊಂದು ಅಪೂರ್ವವಾದ

ಮಹತ್ತ್ರಸಾದವು ಲಭ್ಯವಾಗದಿರದೆಂದು ಅದ್ಯಂತ ದೇಶವೇ ಆ ಎಂದು ಬಾಯ್ತೆರೆದುಕೊಂಡು ಕಾದಿದ್ದಿತು. ಅವರೆ ಆ ತೆರೆದ ಬಾಯಲ್ಲಿ ಸುರಿದ ಕಾದ ಕಬ್ಬಿಣದ ರಸದಂತೆ ಮಹಾ ಭಯಂಕರವಾದ 'ರೌಲೆಟ್ ಆಕ್ಟ್' ಎಂಬೊಂದು ಶಾಸನವು ರಾಜ್ಯಾಂಗದವರಿಂದ ತರಲ್ಪಟ್ಟು ದೇಶೀಯರನ್ನು ಹತಾಶರನ್ನಾಗಿ ಮಾಡುವುದೆಂದು ಯಾರು ನೆನೆಸಿದ್ದರು! 'ರೌಲೆಟ್ ಆಕ್ಟ್' ಎಂಬುದು, 'ಬಂಗಾಳದ ರಾಜದ್ರೋಹ ಚಳವಳಿಯಲ್ಲಿ ತೊಡಗಿದ್ದ ಪ್ರಳಯ ಕಾರಿಗಳನ್ನು ನಿರ್ಮೂಲಿಸುವ ಉದ್ದೇಶದಿಂದ ಪ್ರಾರಂಭಿಸಲ್ಪಟ್ಟಿತು' ಎಂಬ ಕಾರಣವನ್ನಿಟ್ಟುಕೊಂಡು, ರಾಜ್ಯಾಂಗದವರು, ಅದನ್ನು ನ್ಯಾಯವಿಧಾಯಕ ಸಭೆಯ ಸದಸ್ಯರು ಎಷ್ಟುಮಟ್ಟಿಗೆ ವಿರೋಧಿಸಿದರೂ ಲಕ್ಷ್ಯಮಾಡದೆ ಕಾನೂನಾಗಿ ಅಂಗೀಕಾರಮಾಡಿಯೇಬಿಟ್ಟರು. ಅದನ್ನು ಉಗ್ರಪಕ್ಷದವರು ಮಾತ್ರವಲ್ಲ-ಮಂದಪಕ್ಷದವರು ಸಹ ಕಟುತರವಾದ ಟೀಕೆಗಳಿಂದ ವಿರೋಧಿಸಿದರು. ಆದರೂ ಏನೂ ಪ್ರಯೋಜನವಾಗಲಿಲ್ಲ. ಬ್ರಿಟಿಷ್ ಸರ್ಕಾರದವರು, ಈ ಚಳವಳಿಯನ್ನು ನಿರ್ಮೂಲಗೊಳಿಸಲು, ಸಾಧ್ಯವಿರುವ ಸಕಲ ಸಾಧನಗಳನ್ನೂ ಸಜ್ಜುಗೊಳಿಸಿಕೊಂಡು, ತಮ್ಮ ಸುರಕ್ಷಣೆಯ ಮಾರ್ಗವನ್ನು ಬಲಪಡಿಸಿಕೊಳ್ಳಲು ಯತ್ನಿಸಿದರೇ ವಿನಾ ಪ್ರಜಾವರ್ಗದಲ್ಲುಂಟಾದ ಅಸಂತುಷ್ಟಿಯನ್ನು ಕುರಿತು ಗಮನಿಸಲೇ ಇಲ್ಲ. ಇದು ರಾಷ್ಟ್ರಧುರೀಣರನ್ನು ವಿಶೇಷವಾಗಿ ರೇಗಿಸಿತೆಂದು ಹೇಳಬೇಕಾದುದೇನು?

## —"ಸತ್ಯಾಗ್ರಹ ಚಳವಳಿ"—

ಅದ್ಯಂತ ಭಾರತದೇಶದಲ್ಲಿ ಈ ಸಂದರ್ಭದಲ್ಲಿ ಉಂಟಾದಷ್ಟುಮಟ್ಟಿನ ಅಸಂತುಷ್ಟಿಯೂ ಸರ್ಕಾರದ ವಿಷಯದಲ್ಲಿ ಅಪನಂಬಿಕೆಯೂ, ಅಸಮಾಧಾನವೂ ಮತ್ತಾವಾಗಲೂ ಉಂಟಾಗಿರಲಿಲ್ಲ. ಜನಮನವು ಇಷ್ಟುಮಟ್ಟಿಗೆ ಪ್ರಕ್ಷುಬ್ಧವಾಗಿದ್ದ ಈ ಸಂದರ್ಭವು ರಾಜ್ಯಾಂಗದವರ ಈ ಅಸಂಭಾವಿತ ಕಾರ್ಯವನ್ನು ಯೋಗ್ಯರೀತಿಯಿಂದ ಎದುರಿಸಬಲ್ಲ ಒಬ್ಬ ರಾಷ್ಟ್ರಧುರೀಣನನ್ನು ಒದಗಿಸಿತು. ಯೂರೋಪಿನ ಮಹಾಸಂಗ್ರಾಮವು ಮುಗಿದ ತರುಣದಲ್ಲೇ ಮಹಾತ್ಮಾ ಗಾಂಧಿಯವರು ಅದ್ಯಂತ ಭಾರತದೇಶಕ್ಕೂ ಏಕಮಾತ್ರ ಧುರೀಣರೆಂದು-ನಾಯಕರೆಂದು ಪ್ರಕಟವಾದರು. ದಕ್ಷಿಣ ಆಫ್ರಿಕಾ

ದಲ್ಲಿ ಸರ್ಕಾರದ ಅನ್ಯಾಯ-ಅಸತ್ಕಾರ್ಯಗಳೊಂದಿಗೆ ಹೋರಾಡಿ ಜಯಶೀಲರಾಗಿ ಬಂದಿದ್ದ ಅವರ ಕೀರ್ತಿಯು ಜನಜನಿತವಾಗಿದ್ದು, ಅವರು ಮನಸ್ಸಿಟ್ಟು ಮಾಡತೊಡಗಿದ ಒಂದು ಕಾರ್ಯವು ಫಲಪ್ರದವಾಗದಿರುವುದಿಲ್ಲವೆಂದು ನಂಬಿಕೆಯನ್ನುಂಟುಮಾಡಿದ್ದಿತು. ಮಹಾತ್ಮಾ ಗಾಂಧಿಯವರು ಪ್ರಕೃತ ಪರಿಸ್ಥಿತಿಯನ್ನು ಕುರಿತು ಸಾವಧಾನದಿಂದ ಯೋಚಿಸಿ ಕೊನೆಗೆ, ಸರ್. ಸುರೇಂದ್ರನಾಥ ಬ್ಯಾನರ್ಜಿಯವರಂತಹ ಮಂದಪಕ್ಷದ ನಾಯಕರನ್ನು ಸಹ ಅಸಮಧಾನಗೊಳಿಸಿರುವ ಅವರ ಅಸಮ್ಮತಿಯ ಅಭಿಪ್ರಾಯಗಳನ್ನು ಸಹ ದುರ್ಲಕ್ಷಿಸಿರುವ ಸರ್ಕಾರದ ಶಿಲಾತ್ಮಕ ಹೃದಯವನ್ನು ಕರಗಿಸಿ, ಅದು ಜನಮನದ ಹಕ್ಕುಬಾಧ್ಯತೆಗಳನ್ನು ಕುರಿತು ಗಮನಿಸುವಂತೆ ಮಾಡಲು ಸತ್ಯಾಗ್ರಹವಲ್ಲದೆ, ಮತ್ತೊಂದು ಮಾರ್ಗವೇ ಇಲ್ಲವೆಂದು ನಿರ್ಧರಿಸಿದರು. ಸತ್ಯಾಗ್ರಹದ ತತ್ವವನ್ನು ಪ್ರತಿಪಾದಿಸುತ್ತಾ ಮಹಾತ್ಮಾಜೀಯವರು ಹೀಗೆಂದು ಪ್ರಸಿದ್ಧಪಡಿಸಿದರು.

'ಈಗ ತರಲ್ಪಟ್ಟಿರುವ ಈ ನ್ಯಾಯ ಚಟ್ಟಗಳು, ಅನ್ಯಾಯಮಯವಾದುವುಗಳೆಂದೂ, ಸತ್ಯ ಮತ್ತು ಸ್ವಾತಂತ್ರ್ಯಗಳನ್ನು ಧ್ವಂಸಗೊಳಿಸತಕ್ಕುವೆಂದೂ, ಅಲ್ಲದೆ ಪ್ರಜಾಸಾಮಾನ್ಯದ ಸ್ವಾಭಾವಿಕವಾದ ಸರ್ವಸಾಮಾನ್ಯದ ಹಕ್ಕುಬಾಧ್ಯತೆಗಳನ್ನೂ ದುರ್ಲಕ್ಷಿಸಿರುವುವೆಂದೂ ಆತ್ಮಸಾಕ್ಷಿಯಾಗಿ ಅಭಿಪ್ರಾಯಗೊಂಡಿರುವ ನಾವು, ಈ ಚಟ್ಟಗಳು ಒಂದುವೇಳೆ ಕೌನ್ಸಿಲ್ ಸಭೆಯಲ್ಲಿ ಮಂಜೂರಾತಿಯನ್ನು ಪಡೆದ ಸಂದರ್ಭದಲ್ಲಿ ಅವುಗಳನ್ನು ನಮ್ಮ ಸರ್ವಶಕ್ತಿಯಿಂದಲೂ ವಿರೋಧಿಸುತ್ತೇವೆ. ಮತ್ತು ಅವನ್ನು ನಾಮಂಜೂರುಮಾಡಿ, ಹಿಂದಕ್ಕೆ ತೆಗೆದುಕೊಳ್ಳುವವರೆಗೆ ಸರ್ಕಾರದ ಆಜ್ಞೆಯನ್ನು ಧಿಕ್ಕರಿಸಿ ನಡೆಯುತ್ತೇವೆ ಹಾಗೆ ನಡೆಯುವುದರಲ್ಲಿ ಸತ್ಯ ಮಾರ್ಗವನ್ನು ತಪ್ಪದೆ, ಹಿಂಸಾ ಮಾರ್ಗಕ್ಕೆ ಕೈಹಾಕದೆ, ಪ್ರಜೆಗಳ ದೇಹ ಮಾನ ಪ್ರಾಣಗಳಿಗೆ ಅಪಾಯವಾಗದಂತೆ ವರ್ತಿಸುತ್ತೇವೆಯೆಂಬದಾಗಿ ಈ ಮೂಲಕ ನಿರ್ಧರಗೊಳಿಸಿದ್ದೇವೆ'.

ಭಯಂಕರವಾದ ರೌಲೆಟ್‌ಆಕ್ಟ್ ಎಂಬ ಆಸುರೀಶಾಸನವನ್ನು ನಿರೋಧಿಸಲು ಮಹಾತ್ಮಾ ಗಾಂಧಿಯವರು ಪ್ರಯೋಗಿಸಿದ ಮೋಲ್ಬಂಡ ಸತ್ಯಾಗ್ರಹವೆಂಬ ರಾಮಬಾಣದ ತತ್ವವು ಪ್ರಜಾವರ್ಗದಿಂದ ಸಂಪೂರ್ಣ

ಬೆಂಬಲವನ್ನು ಪಡೆಯಿತು. ಬಂಗಾಳದ ಮುಖಂಡರಾದ ಚಿತ್ತರಂಜನದಾಸರೂ, ಸಂಯುಕ್ತ ಪ್ರಾಂತಗಳ ಮುಖಂಡರಾದ ನಮ್ಮ ಕಥಾನಾಯಕರೂ ಸತ್ಯಾಗ್ರಹವ್ರತವನ್ನು ಸ್ವೀಕಾರಮಾಡಿ ಮಹಾತ್ಮಾಜೀಯವರ ನಾಯಕತ್ವದಲ್ಲಿದ್ದು ಚಳವಳಿ ನಡೆಯಿಸಲು ಸಮ್ಮತಿಸಿದರು. ಪ್ರಜಾವರ್ಗದ ವಿಶೇಷವಾದ ಅಸಮ್ಮತಿಗೆ ಗುರಿಯಾಗಿದ್ದ ಈ ಶಾಸನಗಳನ್ನು ವಿರೋಧಿಸುತ್ತಿದ್ದ ಈ ಚಳವಳಿಯು, ದಾವಾನಲದ ವೇಗದಿಂದ ಆಸೇತು ಹಿಮಾಚಲವಾಗಿ ಬಹು ಶೀಘ್ರಕಾಲದಲ್ಲೇ ವ್ಯಾಪಿಸಿಬಿಟ್ಟಿತು. ದೇಶದ ಸಕಲ ಭಾಗಗಳಲ್ಲೂ ಈ ಚಳವಳಿಗೆ ವಿಶೇಷ ಬೆಂಬಲ ದೊರೆಯಿತು. ಆದರೆ ಪಂಜಾಬಿನಲ್ಲಿ ಮಾತ್ರ ಅದರ ಕಾರ್ಯಕಲಾಪಗಳು ಸ್ಪಷ್ಟವಾಗಿ ದೃಗ್ಗೋಚರವಾಗುವಷ್ಟು ಮಟ್ಟಿಗೆ ಜನಗಳು ಸತ್ಯಾಗ್ರಹ ಚಳವಳಿಯನ್ನು ಅವಲಂಬಿಸಿ ಕಾರ್ಯೋನ್ಮುಖರಾದರು.

ಭಾರತದೇಶದ ಇತರ ಭಾಗಗಳಿಗಿಂತಲೂ ಪಂಜಾಬುದೇಶದಲ್ಲಿ ಸತ್ಯಾಗ್ರಹ ತತ್ವವು ವಿಶೇಷವಾಗಿ ಹಬ್ಬಲು ಗೊತ್ತಾದ ಕಾರಣವೊಂದುಂಟು. ಮಹಾಯುದ್ಧಕ್ಕೆ ಪಂಜಾಬು ದೇಶವೇ ಲಕ್ಷಾಂತರ ಮಂದಿ ಸೈನಿಕರನ್ನೂ ಕೋಟ್ಯಾಂತರ ಸಂಖ್ಯೆಯ ದ್ರವ್ಯವನ್ನೂ ಒದಗಿಸಿ ಸಹಾಯ ಮಾಡಿದ್ದುದು. ಸರ್ ಮೈಕೇಲ್ ಒಡ್ವೈಯರ್ ಎಂಬ ಆ ದೇಶದ ಸರ್ವಾಧಿಕಾರಿಯು ಮೊಲ್ಕಂಡ ಜನಸ್ತೋಮ ಧನಗಳನ್ನು ಒದಗಿಸುವುದರಲ್ಲಿ ವಿಶೇಷ ಕಾಠಿಣ್ಯವನ್ನು ವಹಿಸಿ ವರ್ತಿಸಿದ್ದನು. ಅಂದಿನಿಂದಲೂ ಜನಗಳ ಮನೋಭಾವವು ಸರ್ಕಾರಕ್ಕೆ ವಿರೋಧವಾಗಿಯೇ ಇತ್ತು. ಆದರೆ ಸರ್ಕಾರಕ್ಕೆ ಆಪತ್ಕಾಲಬಂದಾಗ್ಗೆ ತಾವು ಮಾಡಿದ ಸಹಾಯಕ್ಕೆ ಈಗ ಬಂದ ಪ್ರತ್ಯುಪಕಾರವು ರೌಲೆಟ್ ಶಾಸನವೇ ಎಂದು ತಿಳಿದ ತರುವಾಯ, ಅವರ ಮನಸ್ಸಿನಲ್ಲಿ ಹೊತ್ತಿ ಹೊಗೆಯಾಡುತ್ತಿದ್ದ ಅಗ್ನಿಯು ಜ್ವಾಲಾಸ್ವರೂಪವನ್ನು ಹೊಂದಿತು. ಜನಗಳ ಮನಸ್ಸು ಹಾಗೆ ಪ್ರಕ್ಷುಬ್ಧವಾಗಿದೆಯೆಂಬ ಸಂಗತಿಯು ಸರ್ಕಾರದ ಅಧಿಕಾರಿಗಳಿಗೂ ತಿಳಿಯದಿರಲಿಲ್ಲ. ಯಾವುದಾದರೊಂದು ಬಗೆಯಿಂದ ತಮ್ಮ ದರ್ಪವನ್ನು ಪ್ರಕಟಿಸಿ ಪ್ರಜೆಗಳನ್ನು ಸರ್ಕಾರದ ವಿಷಯದಲ್ಲಿ ಭಯಗ್ರಸ್ತರನ್ನಾಗಿ ಮಾಡಬೇಕೆಂದು ಅಧಿಕಾರವರ್ಗದವರು ಹವಣಿಸಿದ್ದರು. ಅಮೃತಸರ ಪಟ್ಟಣವು ಯಜ್ಞಕುಂಡವಾಯಿತು. ಪಂಜಾಬಿನ ಸರ್ವಾಧಿಕಾರಿಯು

ಆ ಪಟ್ಟಣವನ್ನು ಜನರಲ್ ಡೈಯರ್ ಎಂಬ ಸೈನ್ಯಾಧಿಕಾರಿಯ ಆಡಳಿತಕ್ಕೆ ಒಳಪಡಿಸಿ, ಶಾಂತಿರಕ್ಷಣೆ ಮಾಡಬಹುದೆಂದು ಯೋಚಿಸಿದನು. ಡೈಯರನು ಯುದ್ಧಕಾಲದ ಶಾಸನವನ್ನು ಪ್ರಕಟಗೊಳಿಸಿ, ನಾಲ್ಕು ಮಂದಿಗೆ ಹೆಚ್ಚಾಗಿ ಒಂದೆಡೆಯಲ್ಲಿ ಕಲೆತರೆ ಅದು ಅಕ್ರಮಕೂಟವೆಂದು ಪರಿಗಣಿತವಾಗಿ ಶಿಕ್ಷಾರ್ಹವಾಗುವುದೆಂದು ತಿಳಿಯಪಡಿಸಿದನು. ಅಧಿಕಾರಿವರ್ಗದವರು ಅನಾವಶ್ಯಕವಾಗಿ ಮಾಡುತ್ತಿದ್ದ ಈ ನಿರ್ಬಂಧದ ಆಜ್ಞೆಗಳು ಮೇಲೆ ಮೇಲೆ ಪ್ರಜೆಗಳ ಮನಸ್ಸನ್ನು ತಾಪಗೊಳಿಸತೊಡಗಿದುವು. ಡೈಯರನ ಆ ಅನ್ಯಾಯಮಯ ಆಜ್ಞೆಯನ್ನು ವಿರೋಧಿಸಿ ಪ್ರಜಾವರ್ಗದ ಮುಖಂಡರು ರಾಮಬಾಗ್ ಎಂಬಲ್ಲೊಂದು ಸಾರ್ವಜನಿಕ ಸಭೆಯನ್ನು ನಡೆಸಿದರು. ಗೊತ್ತಾದ ವೇಳೆಗೆ ಸಭೆ ನೆರೆಯಿತು. ಒಡನೆ ಡೈಯರನು ೯೦ ಮಂದಿ ಸೈನಿಕರನ್ನೂ, ಮದ್ದಿನ ಗಾಡಿಗಳನ್ನೂ ತಂದು, ಆ ತೋಟದ ಬಾಗಿಲಿಗೆ ಸರಿಯಾಗಿ ನಿಲ್ಲಿಸಿ ನೆರೆದಿದ್ದ ಜನಸಮೂಹದಮೇಲೆ ಗುಂಡು ಹಾರಿಸಲು ಆಜ್ಞೆ ಮಾಡಿದನು. ಎರಡು ಸಾವಿರ ಜನಗಳಿಂದ ಕೂಡಿದ್ದ ಆ ಸಭೆಯಮೇಲೆ ೧೬೬೦ ಗುಂಡುಗಳನ್ನು ಹಾರಿಸಿ ಭಯಂಕರ ನರಹತ್ಯವನ್ನಾಚರಿಸಿದನು. ಹಾಹಾಕಾರವು ಮುಗಿಲುಮುಟ್ಟಿತು ಹೆಂಗಸರೂ ಮಕ್ಕಳೂ ಎಲ್ಲಿಗೆ ಹೋಗಬೇಕು ಏನು ಮಾಡಬೇಕು ಎಂದು ತಿಳಿಯದೆ, ಭಯಾಕ್ರಾಂತರಾಗಿರುವಲ್ಲಿ ಇದ್ದಲ್ಲೇ ಗುಂಡುಬಡಿದು ಒರೆಗಿದರು. ಎಷ್ಟು ಜನಗಳು ಸತ್ತರೋ, ಮತ್ತೆಷ್ಟು ಮಂದಿ ಗಾಯಗೊಂಡರೋ ಹೇಳಿ ಕೇಳುವವರಿಲ್ಲದೆ, ಮನೋಹರವಾದ ಆ ರಾಮಬಾಗೆಲ್ಲವೂ ಭಯಂಕರ ಸ್ಮಶಾನ ಸದೃಶವಾಯಿತು. ಅಮೃತಸರದಂತೆಯೇ ಪಂಜಾಬಿನ ಲಾಹೋರ್, ಗುಜರಾನ್‌ವಾಲಾ, ಮಲಿಯಾನ್‌ವಾಲಾ ಮುಂತಾದ ಹಲವು ಪಟ್ಟಣಗಳಲ್ಲೂ ಯುದ್ಧಕಾಲದ ಶಾಸನವನ್ನೇ (Martial law) ಜಾರಿಗೆ ತಂದರು. ಜನಗಳಿಗೆ ತಮ್ಮ ಧನ ಮಾನ ಪ್ರಾಣಗಳು ಎಷ್ಟು ಮಾತ್ರಕ್ಕೂ ಸುರಕ್ಷಿತವಾಗಿಲ್ಲವೆಂಬ ಭಾವನೆಯು ಸ್ಥಿರವಾಯಿತು. ಪಂಜಾಬಿನಲ್ಲಾದ ಈ ನರಹತ್ಯಾ ಕಾರ್ಯವೂ, ಪ್ರತಿಕ್ಷಣವೂ ಕೋವಿಯ ಮೊನೆಯನ್ನು ಮುಂದುಮಾಡಿಯೇ ಸಾಗಿಸುತಿದ್ದ ರಾಜ್ಯಭಾರವೂ, ಅಲ್ಪಸ್ವಲ್ಪ ಪ್ರಮಾಣದಿಂದಲಾದರೂ ರಾಜಭಕ್ತಿಯನ್ನಿಟ್ಟುಕೊಂಡಿದ್ದವರಲ್ಲೂ ಅಪನಂಬಿಕೆಯನ್ನೂ ಸರ್ಕಾರದ ವಿಷಯದಲ್ಲಿ ವಿರೋಧಭಾವ

ವನ್ನೂ ಉಂಟುಮಾಡಿತು. ಈ ಭಯಂಕರ ವಾರ್ತೆಯು ದೇಶದಮೂಲೆ ಮೂಲೆಗೂ ವ್ಯಾಪಿಸಿ ಜನಗಳಲ್ಲಿ ಹಾಹಾಕಾರವನ್ನೆಬ್ಬಿಸಿತು. ಕವಿರವೀಂದ್ರ ನಾಥರು, ಸರ್ಕಾರದ ಈ ಕಾರ್ಯವನ್ನು ಬಹು ತೀಕ್ಷ್ಣವಾಗಿ ನಿಷೇಧಿಸಿ, ತನ್ನ ಅಸಮ್ಮತಿಯ ಸೂಚನೆಗಾಗಿ ತಮಗಿದ್ದ ಸರ್ ಎಂಬ ಬಿರುದನ್ನು ತ್ಯಜಿಸಿಬಿಟ್ಟರು. ಸರ್ಕಾರದ ಆಡಳಿತದ ವಿಷಯದಲ್ಲಿ ಅಸಮಾಧಾನವು ಮುಗಿಲುಮುಟ್ಟುವಂತಿದ್ದಿತು.

ದೇಶದ ಸ್ಥಿತಿಯು ಹೀಗೆ ಇದ್ದ ಸಂದರ್ಭದಲ್ಲೇ ೧೯೧೯ನೆಯ ಡಿಸಂಬರು ೨೩ನೆಯ ದಿನ ಸರ್ಕಾರದವರು, ರಾಜಕೀಯ ಸುಧಾರಣಾ ವರದಿಯೊಂದನ್ನು ಪ್ರಕಟಿಸಿದರು. ಪಂಜಾಬಿನಲ್ಲಿ ನಡೆದ ನರಹತ್ಯಾದಿಗಳ ವಿಚಾರಣೆಗೆಂದು ಹಂಟರ್ ಕಮಿಟಿ ಎಂಬೊಂದು ಸಮಿತಿಯನ್ನು ಏರ್ಪಡಿಸಿದರು. ರಾಜ್ಯಾಂಗ ಸುಧಾರಣಾ ವರದಿಯನ್ನು ದಯಪಾಲಿಸಿದುದರ ಚಿನ್ಹೆಯೋ ಎಂಬಂತೆ ರಾಜಕೀಯ ಬಂದಿಗಳನ್ನೆಲ್ಲ ಸೆರೆಮನೆಯಿಂದ ಬಿಡುಗಡೆ ಮಾಡಿದರು ಸರ್ಕಾರದವರ ಈ ಕಾರ್ಯಗಳಿಂದ ಜನಗಳ ಮನಸ್ಸಿನ ಮೇಲೆ ಲೇಶಮಾತ್ರದ ಶಾಂತತಾಪ್ರಾಪ್ತಿಯ ಪರಿಣಾಮವುಂಟಾಯಿತೆನ್ನಬಹುದು. ಈ ಕಾಲದಲ್ಲೇ ಅಮೃತಸರ ನಗರದಲ್ಲಿ ರಾಷ್ಟ್ರೀಯಮಹಾಸಭೆಯನ್ನು ನೆರೆಯಿಸಲು ರಾಷ್ಟ್ರಧುರೀಣರು ನಿಶ್ಚಯಿಸಿದರು. ಪ್ರಜಾವರ್ಗದ ಮನಸ್ಸು ಹಲವು ಬಗೆಗಳಿಂದ ನೊಂದು ಬೆಂದು ಕುಂದತೊಡಗಿದ್ದ ಅಂತಹ ವಿಷಮವೇಳೆಯಲ್ಲಿ, ಅಷ್ಟು ಬಗೆಯ ವ್ಯತ್ಯಸ್ತ ಪರಿಸ್ಥಿತಿಯಲ್ಲಿ ದೇಶವು ಗೊತ್ತಾಗಿ ಅನುಸರಿಸಿ ನಡೆಯಬೇಕಾಗಿದ್ದ ಮಾರ್ಗವೇನೆಂಬುದನ್ನು ಅದಕ್ಕೆ ತೋರಿಸಲು ಯೋಗ್ಯನಾದ ಒಬ್ಬ ಧೀಮಂತನು ರಾಷ್ಟ್ರಮಹಾಸಭೆಯ ಅಧ್ಯಕ್ಷನಾಗಿ, ಮಾರ್ಗದರ್ಶಕನಾಗತಕ್ಕ ಆವಶ್ಯಕತೆಯಿದ್ದಿತು. ಆ ಸಂದರ್ಭದಲ್ಲಿ ರಾಷ್ಟ್ರವು ಪಂಡಿತ ಮೋತೀಲಾಲ ನೆಹ್ರೂ ಮಹಾಶಯರನ್ನು. ಅಮೃತಸರ ರಾಷ್ಟ್ರಮಹಾಸಭೆಯ ಅಧ್ಯಕ್ಷಪೀಠಕ್ಕೆ ಆರಿಸಿತು. ಇದರಿಂದಲೇ ಅವರ ಯೋಗ್ಯತೆಯು ಎಷ್ಟುಮಟ್ಟಿನದೆಂಬುದು ವ್ಯಕ್ತವಾಗುತ್ತದೆಯಲ್ಲವೆ?

## — ರಾಷ್ಟ್ರಮಹಾಸಭಾಧ್ಯಕ್ಷಪದವಿ —

ಅತ್ತ ಯೂರೋಪಿನ ಮಹಾಸಂಗ್ರಾಮವು ಅಂತ್ಯವಾಗಿ, ಇತ್ತ ಭಾರತದೇಶದಲ್ಲೂ ಸ್ಥಿತಿಗತಿಗಳು ವ್ಯತ್ಯಸ್ತವಾಗಿದ್ದ ಆಗಿನ ಸಂದರ್ಭದಲ್ಲಿ ರಾಷ್ಟ್ರಮಹಾಸಭೆಯ ಸೂತ್ರಗಳನ್ನು ಹಿಡಿದು ನಡೆಯಿಸಬಲ್ಲ ಮನುಷ್ಯನು ವಿಶೇಷ ಯೋಗ್ಯತಾ ಸಂಪನ್ನನಿರಬೇಕಾದುದು ಆವಶ್ಯಕವಾಗಿದ್ದಿತು. ಚಕ್ರವರ್ತಿ ಸಾರ್ವಭೌಮರು, ಯುದ್ಧವು ಜಯಪ್ರದವಾದುದಕ್ಕಾಗಿ, ರಾಜಕೀಯ ಕೈದಿಗಳನ್ನೆಲ್ಲ ಬಿಡುಗಡೆಮಾಡಿ, ಭಾರತದೇಶಪಾಲನೆಯಲ್ಲಿ ಕೆಲಕೆಲ ಸುಧಾರಣೆಗಳನ್ನುಂಟುಮಾಡಲು ಸಮ್ಮತಿಪಟ್ಟುದರ ಕುರುಹಾಗಿ ರಾಜ್ಯಾಂಗದವರು ವರದಿಯನ್ನು ಪ್ರಕಟಿಸಿದ್ದರಷ್ಟೆ! ಆ ಸಂದರ್ಭದಲ್ಲಿ ದೇಶಕಾಲಸ್ಥಿತಿಗಳನ್ನು ಅನುಸರಿಸಿ ಅತ್ತ ರಾಜರಿಗೂ ಇತ್ತ ಪ್ರಜೆಗಳಿಗೂ ಹಿತಕರವಾದ ಮಾತುಗಳನ್ನಾಡಿ, ಉಭಯರಲ್ಲೂ ಸ್ನೇಹ ಪ್ರೇಮಗಳು ಅಭಿವೃದ್ಧಿಯಾಗುವಂತೆ ಪ್ರಯತ್ನಿಸುವುದೇನು ಸಾಮಾನ್ಯವಾದ ಕಾರ್ಯವಲ್ಲ! ಈ ಮಹತ್ಕಾರ್ಯವನ್ನು ನಿರ್ವಹಿಸಲು, ರಾಷ್ಟ್ರವು ಏಕಾಭಿಪ್ರಾಯದಿಂದ, ನಮ್ಮ ಕಥಾನಾಯಕರೇ ಸಮರ್ಥರೆಂದು ತಿಳಿದು ಅಂಗೀಕರಿಸಿತು. ಪಂಡಿತ ಮೋತೀಲಾಲರು ೧೯೧೯ನೆಯ ಡಿಶಂಬರ್ ತಿಂಗಳಲ್ಲಿ ಅಮೃತಸರ ನಗರದಲ್ಲಿ ನಡೆದ ರಾಷ್ಟ್ರಮಹಾಸಭೆಗೆ ಅಧ್ಯಕ್ಷರಾದರು.

ಪಂಡಿತರು, ಆ ಮಹತ್ವದ ಸ್ಥಾನವನ್ನು ಅಧಿರೋಹಿಸಿ ತಮ್ಮ ಅಧ್ಯಕ್ಷಭಾಷಣದಲ್ಲಿ ಹೇಳಿದ ಕೆಲ ವಿಚಾರಗಳು ಬಹು ವಿಶೇಷವಾದುವಿವೆ. "ಪ್ರಪ್ರಥಮದಲ್ಲಿ ರಾಷ್ಟ್ರಕಾರ್ಯ ನಿರ್ವಹಣಕ್ಕಾಗಿ ಇಲ್ಲಿ ನೆರೆದಿರುವ ನಾವು ಮಾಡಬೇಕಾದ ಕಾರ್ಯವೊಂದುಂಟು. ಪಂಜಾಬಿನ ಅಮೃತಸರದಲ್ಲೂ ಇತರ ಊರುಗಳಲ್ಲೂ ಈಚೆಗೆ ನಡೆದ ನರಹತ್ಯದಲ್ಲಿ ಕೊಲ್ಲಲ್ಪಟ್ಟವರ ಪವಿತ್ರಾತ್ಮಗಳಿಗೆ ನಮ್ಮ ಭಕ್ತಿವಿಶ್ವಾಸಗಳನ್ನೂ ಗೌರವಭಾವವನ್ನೂ ಪ್ರಕಟಪಡಿಸುವುದರೊಂದಿಗೆ, ಆ ದುರಂತಕಾಲದಲ್ಲಿ ಆಯಾ ಊರುಗಳಲ್ಲಿ ಪ್ರತ್ಯಕ್ಷವಾಗಿ ವಾಸಿಸಿದ್ದು ಮರಣಕ್ಕಿಂತಲೂ ದುಃಖಕರವಾದ ಕಷ್ಟನಷ್ಟಗಳನ್ನೂ ಅಸಹನೀಯ ಹಿಂಸೆ, ಹಲವು ಬಗೆಯ ಅವಾಚ್ಯ ಅಪಮಾನಗಳನ್ನೂ ಸಹಿಸಿದ ಸ್ತ್ರೀಯರಿಗೂ ಪುರುಷರಿಗೂ ಸಹಾನುಭೂತಿ, ಕೃತಜ್ಞತೆ

ಗಳನ್ನು-ಈ ಮಹಾಸಭೆಯು ರಾಷ್ಟ್ರದಪರವಾಗಿ ಸಮರ್ಪಿಸುತ್ತದೆ. ಮೃತರ ಸ್ಮರಣೆಗಾಗಿ ಶ್ವೇತಶಿಲಾನಿರ್ಮಿತವಾದ ಅಥವ ಲೋಹನಿರ್ಮಿತವಾದ ಎಂತಹ ಪ್ರತಿಮೆಯೂ, ಯೋಗ್ಯವೆನ್ನಿಸದು. ಈ ಸಂದರ್ಭದಲ್ಲಿ ನಾವುಗಳು ಮಾಡಿದ ಭಾಷಣಗಳು ಮರೆತುಹೋಗುವುವು. ತೀರ್ಮಾನಿಸಿದ ಠರಾವುಗಳು ಕೇವಲ ಐತಿಹಾಸಿಕನಿಗೆ ಮಾತ್ರ ಪ್ರಯೋಜಕವೆನ್ನಿಸಬಲ್ಲುವು. ಆದರೆ ದೇಶಮಾತೆಯ ಗೌರವರಕ್ಷಣೆಗಾಗಿ ಆಕೆಯ ಪುತ್ರಪುತ್ರಿಯರು ಅನುಭವಿಸಿದ ಕಷ್ಟಸಂಕಟಗಳೂ ಅವರ ಉದಾತ್ತವಾದ ಹಲವು ಬಗೆಯ ತ್ಯಾಗಗಳೂ ಭಾರತ ದೇಶಮಾತೆಯಿಂದ ಎಂದಿಗೂ ಮರೆಯಲ್ಪಡವು.

"ದೇಶದಲ್ಲಿ ನಡೆದ ಭಯಂಕರ ನರಹತ್ಯೆ, ಕಾರಾಗೃಹವಾಸ ಮುಂತಾದ ಕಾರಣಗಳಿಂದ ದೇಶೀಯರ ಮನಸ್ಸಿನಮೇಲೆ ಮುಸುಕಿರುವ ಕಾವಳದ ಮಧ್ಯದಲ್ಲಿ ಒಂದೇಒಂದು ಆಶಾಕಿರಣವು ಅಸ್ಪಷ್ಟವಾಗಿ ಕಂಡುಬರುತ್ತಿತ್ತು. ಚಕ್ರವರ್ತಿ ಸಾರ್ವಭೌಮರು, ಈ ದೇಶದಲ್ಲಿ ರಾಜಕೀಯ ಕಾರಣಕ್ಕಾಗಿ ಬಂದೀವಾಸವನ್ನೂ, ನಿರ್ಬಂಧವನ್ನೂ ಅನುಭವಿಸುತ್ತಿರುವವರ ವಿಷಯದಲ್ಲಿ ದಯಾಭಾವವನ್ನು ಸೂಚಿಸಿ, ಸಂದೇಶವನ್ನು ಕಳುಹಿಸಿರುವುದು ಅನೇಕ ಭಾರತೀಯ ಕುಟುಂಬಗಳಿಗೆ ಹೃದಯಾಹ್ಲಾದಕರವಾಗಿದೆ. ಮತ್ತು ಮಹನೀಯರೇ, ನಮ್ಮ ಪಾಲಿಗೆ ಬಂದ ಅನಂತದೌರ್ಭಾಗ್ಯಗಳಲ್ಲಿ, ರಾಜರೂ ಅವರ ಅನುಯಾಯಿಗಳೂ ನಮ್ಮ ವಿಷಯದಲ್ಲಿ ಪ್ರಕಟಿಸುವ ಈ ಬಗೆಯ ದಯಾಮಮತೆಗಳೇ ಪರಸ್ಪರರಲ್ಲಿ ಪ್ರೀತಿವಿಶ್ವಾಸಗಳನ್ನು ಹೆಚ್ಚಿಸುವಲ್ಲಿ ಸಹಕಾರಿಗಳಾಗುವುವು. ಆದುದರಿಂದ ಈ ರಾಷ್ಟ್ರೀಯ ಮಹಾಸಭಾ ಆವರಣದಲ್ಲಿ ಇಂದು ನೆರೆದಿರುವ ನಾವು ನಮ್ಮ ಪರವಾಗಿಯೂ ಭಾರತದೇಶವಾಸಿಗಳ ಪರವಾಗಿಯೂ, ದಯಾಘನರಾದ ಚಕ್ರವರ್ತಿ ಸಾರ್ವಭೌಮರಿಗೆ ನಮ್ಮ ವಂದನೆಗಳನ್ನು ಈ ಮೂಲಕ ಸಮರ್ಪಿಸತಕ್ಕುದು ಯುಕ್ತವಾಗಿದೆಯೆಂದು ಸೂಚಿಸಲೆಳೆಸುತ್ತೇನೆ'.

ಪಂಡಿತ ಮೋತೀಲಾಲರ ಈ ಭಾಷಣವು, ಎಷ್ಟು ದೇಶಾಭಿಮಾನಪೂರಿತವೂ, ರಾಜಭಕ್ತಿಯುಕ್ತವೂ, ಸೌಮ್ಯವೂ ಆದುದೆಂದು ಹೇಳಬೇಕಾದುದಿಲ್ಲ. ಆ ಮಹಾಸಭೆಯ ಕಾರ್ಯಕಲಾಪವೆಲ್ಲವೂ,''ಹೀಗೆಯೇ ನಿರಾಕ್ಷೇಪ

ಣೀಯವಾಗಿ ನಡೆಯಿತು. ಆ ಮಹಾಸಭೆಯಲ್ಲೇ ಮೋತೀಲಾಲರಿಂದ ಈ ಕೆಳಗೆ ಹೇಳಿದ ಠರಾವುಗಳು ಚರ್ಚೆಗೆ ತರಲ್ಪಟ್ಟು ತೀರ್ಮಾನವಾದುವು.

(ಅ) ಈ ಹಿಂದಿನ ರಾಷ್ಟ್ರಮಹಾಸಭಾಧಿವೇಶನದಲ್ಲಿ ತೀರ್ಮಾನಕ್ಕೆ ತರಲ್ಪಟ್ಟಿರುವ, ಭಾರತದೇಶವು ಸಂಪೂರ್ಣ ಸ್ವತಂತ್ರಪಾಲನೆಗೆ ತಕ್ಕ ಯೋಗ್ಯತಾಸಾಮರ್ಥ್ಯಗಳನ್ನು ಗಳಿಸಿಕೊಂಡಿದೆಯೆಂಬುದನ್ನು ಈ ಮಹಾಸಭೆಯ ಪುನಃ ಸ್ಥಿರಗೊಳಿಸುತ್ತದೆ. ಮತ್ತು ಅದಕ್ಕೆ ವಿರೋಧವಾಗಿ ಎಲ್ಲಾವರೂ ಹೇಳಲ್ಪಟ್ಟಿದ್ದರಾಗಲೀ, ಭಾವಿಸಲ್ಪಟ್ಟಿದ್ದರಾಗಲೀ. ಅಂತಹ ಹೇಳಿಕೆ ಭಾವನೆಗಳನ್ನು ನಿರಾಕರಿಸತಕ್ಕುದೆಂದೂ ಈ ಮಹಾಸಭೆಯು ತೀರ್ಮಾನಿಸುತ್ತದೆ.

(ಬ) ಈ ಮಹಾಸಭಾಧಿವೇಶನವು, ಹಿಂದಿನ ಡೆಲ್ಲಿ ಕಾಂಗ್ರೆಸ್ಸಿನಲ್ಲಿ, ರಾಜ್ಯಾಂಗ ಪದ್ಧತಿಯ ಸುಧಾರಣೆಗಳ ವಿಷಯದಲ್ಲಿ ಮಾಡಿದ್ದ ತೀರ್ಮಾನವನ್ನು ಪುನಃ ಅಂಗೀಕರಿಸುವುದಲ್ಲದೆ, ಈಗ ಸರ್ಕಾರದವರಿಂದ ಕೊಡಲ್ಪಟ್ಟಿರುವ ಸುಧಾರಣಾ ವರದಿಯು, ಅತೃಪ್ತಿಕರವೂ, ಅಸಂತುಷ್ಟಿಕರವೂ ಮಾತ್ರವಲ್ಲ, ನಿರಾಶಾಜನಕವೂ ಆಗಿದೆಯೆಂದು ಈ ಮಹಾಸಭೆಯು ಅಭಿಪ್ರಾಯಪಡುತ್ತದೆ.

(ಕ) ಭಾರತದೇಶವು ಸ್ವತಂತ್ರಪಾಲನೆಯಲ್ಲಿ ಇಚ್ಛೆಗೊಂಡಿರುವುದರಿಂದ, ಬ್ರಿಟಿಷ್ ಪಾರ್ಲಿಮೆಂಟು, ಶೀಘ್ರಕಾಲದಲ್ಲೇ ಈ ದೇಶಕ್ಕೆ ಸಂಪೂರ್ಣ ಸ್ವಪರಿಪಾಲನಾ ಅಧಿಕಾರವನ್ನು ಒದಗಿಸಿಕೊಡಬೇಕೆಂದು ಈ ಮಹಾಸಭೆಯು ಆಗ್ರಹಪೂರ್ವಕವಾಗಿ ಸೂಚಿಸುತ್ತದೆ.

ಬಂಗಾಳದ ದಿವಂಗತ ಚಿತ್ತರಂಜನದಾಸರು, ಅಧ್ಯಕ್ಷರಿಂದ ಸೂಚಿಸಲ್ಪಟ್ಟ ಈ ಠರಾವುಗಳನ್ನು ಪುಷ್ಟೀಕರಿಸಿ ಮಾತನಾಡಿದರು. ಮತ್ತು ಬೊಂಬಾಯಿ ಆಧಿಪತ್ಯದ ಪರವಾಗಿ ಲೋಕಮಾನ್ಯ ತಿಲಕರು ಪುಷ್ಟೀಕರಿಸಿದರು. ಆದರೆ, ಮಹಾತ್ಮಾಜೀಯವರು, ಈ ತೀರ್ಮಾನಗಳಲ್ಲಿ, ಎರಡನೆಯದರ ಕೊನೆಯ 'ನಿರಾಶಜನಕ' ಎಂಬ ಮಾತನ್ನು ತೆಗೆಯಬೇಕೆಂದೂ ಮೂರನೆಯದರಲ್ಲಿ, ಚಕ್ರವರ್ತಿಯವರ ರಾಜಸಂದೇಶದಲ್ಲಿ ಉಕ್ತವಾಗುವ -' ನಮ್ಮ ಪ್ರಜೆಗಳೂ ಅಧಿಕಾರವರ್ಗದವರೂ, ಒಂದೇ ಧ್ಯೇಯಸಾಧನೆಯಲ್ಲಿ ಪರಸ್ಪರ

ಸಹಕಾರ ಸಹಾನುಭೂತಿಗಳಿಂದ ಮುಂದರಿಸಲೆಂದೂ, ತನ್ಮೂಲಕ ಭಾರತ ದೇಶದಲ್ಲಿ ಕ್ರಮಕ್ರಮವಾಗಿ ಸಂಪೂರ್ಣ ಸ್ವಪರಿಪಾಲನಾ ಪದ್ಧತಿಯ ಸ್ಥಾಪನೆಗೆ ಮಾರ್ಗವೇರ್ಪಡುವ ಪ್ರಯತ್ನದೊಂದಿಗೆ ನವಯುಗವು ಪ್ರಾರಂಭವಾಗಲೆಂದೂ ನಾವು ಆಸಿಸಿ, ನಂಬುತ್ತೇವೆ' ಎಂಬ ಆಶಯವೂ ಮತ್ತು 'ಸುಧಾರಣಾ ವಿಷಯದಲ್ಲಿ ವಿಶೇಷವಾಗಿ ಶ್ರಮಿಸಿದ ಸ್ಟೇಟ್ ಸೆಕ್ರೆಟರಿ, ಮಾಂಟೆಗೊ ಸಾಹೇಬರಿಗೆ ಈ ಮಹಾಸಭೆಯು ತನ್ನ ಕೃತಜ್ಞತೆಗಳನ್ನು ಸಮರ್ಪಿಸುತ್ತದೆ' ಎಂಬ ಮಾತುಗಳನ್ನು ಸೇರಿಸಬೇಕೆಂದೂ, ಅಪೇಕ್ಷಿಸಿದರು. ಮಹಾತ್ಮಾಜೀಯವರ ತಿದ್ದುಪಡಿಯನ್ನು ಪಂಡಿತ ಮದನಮೋಹನಮಾಳವ್ಯರು ಸಮರ್ಥಿಸಿದರು. ಕೊನೆಗೆ ಮೂರನೆಯ ಠರಾವು-'ಭಾರತದೇಶದಲ್ಲಿ ಸಂಪೂರ್ಣ ಸ್ವಪರಿಪಾಲನೆಯನ್ನು ಸ್ಥಾಪಿಸಲು, ಈಗ ಬ್ರಿಟಿಷ್ ಪಾರ್ಲಿಮೆಂಟಿನಿಂದ ಕೊಡಲ್ಪಟ್ಟಿರುವ ಸುಧಾರಣಾ ಪದ್ಧತಿಯನ್ನು ಸಾಧ್ಯವಿರುವಷ್ಟು ಮಟ್ಟಿಗೆ ಅನುಸರಿಸಿ ನಡೆಯುವುದೆಂದೂ, ಈ ಸುಧಾರಣಾ ವಿಚಾರದಲ್ಲಿ ವಿಶೇಷ ಶ್ರಮಸಹಿಸಿದ ಮಾಂಟೆಗೂ ಸಾಹೇಬರಿಗೆ ಈ ಮಹಾಸಭೆಯು ತನ್ನ ಕೃತಜ್ಞತೆಯನ್ನು ಸೂಚಿಸುತ್ತದೆ' ಎಂದೂ ಬದಲಾಯಿಸಲ್ಪಟ್ಟಿತು. ಇವು ಮಾತ್ರವಲ್ಲದೆ, ಪಂಜಾಬ್‌ದೇಶದ ಅವ್ಯವಸ್ಥಪರಿಪಾಲನೆಗೆ ಸಂಬಂಧಿಸಿದ ಹಲವು ವಿಚಾರಗಳು ಚರ್ಚೆಗೆ ಬಂದುವು. ಅಮೃತಸರದ ಬಳಿಯಲ್ಲಿ ನಡೆದ ನರಹತ್ಯೆಯ ಕಾಲದಲ್ಲಿ ಸಂಭವಿಸಿದ ಹಲವು ಅಕಾರ್ಯಗಳನ್ನು ಸರಿಯಾಗಿ ವಿಚಾರ ಮಾಡಿ ಒಂದು ವರದಿಯನ್ನು ಪ್ರಕಟಿಸಲು ಒಂದು ಉಪಸಮಿತಿಯು ನಿಯಮಿಸಲ್ಪಟ್ಟಿತು. ಆ ಉಪಸಮಿತಿಯಲ್ಲಿ ಮಹಾತ್ಮಾಗಾಂಧಿಯವರು, ಪಂಡಿತ ಮೋತೀಲಾಲನೆಹ್ರು, ಪಂಡಿತ ಮದನಮೋಹನಮಾಳವ್ಯರು, ದೇಶಬಂಧು ಚಿತ್ತರಂಜನದಾಸ್, ಮತ್ತು ಡಾ. ಅನ್ಸಾರಿ, ಮುಂತಾದವರು ಇದ್ದು ಕೆಲಸ ಮಾಡಿದರು.

## — ಅದ್ವಿತೀಯ ಸ್ವಾರ್ಥತ್ಯಾಗ —

ರಾಷ್ಟ್ರಮಹಾಸಭೆಯಿಂದ ನಿಯಮಿತರಾದ ಮೇಲ್ಕಂಡ ಸಮಿತಿಯವರು ಅಮೃತಸರ ನರಹತ್ಯ ವಿಚಾರದಲ್ಲಿ ಕೂಲಂಕುಷವಾದ ವಿಚಾರ ನಡೆಸಿ ಒಂದು ವರದಿಯನ್ನು ಪ್ರಕಟಿಸಿದರು. ಈ ವಿಚಾರಕಾಲದಲ್ಲಿ ನಮ್ಮ ಕಥಾ

ನಾಯಕರಿಗೂ ಮತ್ತು ಮಹಾತ್ಮಾ ಗಾಂಧಿಯವರೇ ಮುಂತಾದ ಆ ಸಮಿತಿಯ ಇತರ ಸಭಾಸದರಿಗೂ, ಬ್ರಿಟಿಷ್ ಅಧಿಕಾರಿಗಳ ರಾಕ್ಷಸೀಕೃತ್ಯವನ್ನು ಕಂಡು ಬಹು ಅಸಹ್ಯವೂ, ಬೇಸರವೂ, ರೋಷವೂ ಉಂಟಾದುವು. ರಾಜ್ಯಾಂಗದವರು ಪ್ರಕಟಿಸಿದ್ದ ವರದಿಯು ಹಲವು ನಿಶ್ಚಯ ಸಂಗತಿಗಳನ್ನು ಮರೆಸಿಟ್ಟು, ಪ್ರಜೆಗಳು ಸರ್ಕಾರಕ್ಕೆ ವಿರುದ್ಧವಾಗಿ ದಂಗೆಯೆದ್ದ ಅಂತಹ ಅಪಾಯ ಸಂದರ್ಭದಲ್ಲಿ ಧೈರ್ಯ ಶೌರ್ಯಗಳನ್ನು ಪ್ರಕಟಿಸಿದ ಬಗ್ಗೆ, ನರಹಂತಕರೂ ನಿರ್ಘೃಣರೂ ಆದ ಡೈಯರನೇ ಮುಂತಾದ ಅಧಿಕಾರಿಗಳನ್ನು ಸ್ವಾಮಿಕಾರ್ಯನಿಷ್ಠರೆಂದು ಹೊಗಳಿದ್ದಿತು. ಮಾತ್ರವಲ್ಲ ಇಂಗ್ಲೆಂಡಿನಲ್ಲಿ ಒಂದು ಪಕ್ಷದವರು, ಡೈಯರನ ಸಾಮ್ರಾಜ್ಯಸೇವೆಯನ್ನು ಮುಕ್ತವಾಣಿಯಿಂದ ಅಭಿನಂದಿಸಿ ಮೂರುಲಕ್ಷ ರೂಪಾಯಿಗಳ ಒಂದು ನಿಧಿಯನ್ನು ಕೂಡಿಸಿ ಆತನಿಗೆ ಕೊಟ್ಟು ಬಹುಮಾನಿಸಿದರು. ಬ್ರಿಟಿಷ್ ಸರ್ಕಾರದವರ ಮತ್ತು ಬ್ರಿಟಿಷ್ ಜನತೆಯ ಈ ಬಗೆಯ ಮನೋಭಾವವು ಮಹಾತ್ಮಾಜಿಯವರಿಗೂ ರಾಷ್ಟ್ರಧುರೀಣರಾದ ಮೋತೀಲಾಲರೇ ಮೊದಲಾದವರಿಗೂ ಬ್ರಿಟಿಷ್ ಸರ್ಕಾರದ ವಿಷಯದಲ್ಲಿದ್ದ ಅಲ್ಪಸ್ವಲ್ಪ ನಂಬಿಕೆ ವಿಶ್ವಾಸಗಳನ್ನೂ ಧ್ವಂಸಮಾಡಿತು. ಒಡನೆ ಕಲ್ಕತ್ತಾ ನಗರದಲ್ಲಿ ರಾಷ್ಟ್ರಮಹಾಸಭೆಯ ಒಂದು ವಿಶೇಷ ಅಧಿವೇಶನವನ್ನು ಕರೆದು, ಅದರಲ್ಲಿ ಸ್ವರಾಜ್ಯಪ್ರಾಪ್ತಿಗೆ ದೇಶವು ಅನುಸರಿಸಬೇಕಾದ ಮಾರ್ಗವನ್ನು ಠರಾಯಿಸಬೇಕೆಂದು ನಿಶ್ಚಯಿಸಿದರು. ದಿವಂಗತ ಪಾಂಚಾಲಕೇಸರಿ, ಲಾಲಾಲಜಪತ್‌ರಾಯರು ಅದರ ಅಧ್ಯಕ್ಷಸ್ಥಾನವನ್ನು ವಹಿಸಿ, ಸರ್ಕಾರದವರೊಂದಿಗೆ ಅಸಹಕಾರ ಮಾಡತಕ್ಕುದೇ ಪೇಲ್ಕಂಡ ಅವರ ಧೂರ್ತತನಗಳಿಗೆಲ್ಲ ಯೋಗ್ಯ ಪ್ರತಿಕ್ರಿಯೆಯೆಂದು ಉದ್ಘೋಷಿಸಿದರು. ಸರ್ಕಾರದ ನ್ಯಾಯಾಸ್ಥಾನಗಳನ್ನೂ, ಪಾಠಶಾಲೆ ಕಾಲೇಜುಗಳನ್ನೂ ಬಹಿಷ್ಕರಿಸಬೇಕೆಂದು ನ್ಯಾಯವಾದಿಗಳಿಗೂ ವಿದ್ಯಾರ್ಥಿಗಳಿಗೂ, ಕೌನ್ಸಿಲುಗಳನ್ನು ಬಹಿಷ್ಕರಿಸಬೇಕೆಂದು ಮೆಂಬರುಗಳಿಗೂ, ವಿದೇಶೀ ವಸ್ತುಗಳನ್ನು ಬಹಿಷ್ಕರಿಸಬೇಕೆಂದು ಜನತೆಗೂ, ಸರ್ಕಾರದಿಂದ ಕೊಡಲ್ಪಟ್ಟಿರುವ ಬಿರುದು ಬಹುಮಾನಗಳನ್ನು ಬಹಿಷ್ಕರಿಸಬೇಕೆಂದು ಶ್ರೀಮಂತರಿಗೂ ಬೋಧಿಸುವ ಹಲವು ಠರಾವುಗಳು ತರಲ್ಪಟ್ಟು ಮಂಜೂರಾದುವು. ಮುಂದೆ ಅದೇ ಸಂವತ್ಸರದ ಡಿಸೆಂಬರ್

ತಿಂಗಳಲ್ಲಿ ನಾಗಪುರದಲ್ಲಿ ನಡೆದ ರಾಷ್ಟ್ರಮಹಾಸಭೆಯಲ್ಲಿ ಈ ಠರಾವುಗಳೆಲ್ಲವೂ ಸ್ಥಿರೀಕರಿಸಲ್ಪಟ್ಟುವು. ಅಸಹಕಾರಿತೆಯೇ ಮುಖ್ಯ ಮಂತ್ರವೆಂದು ಸಕಲರ ಅಭಿಪ್ರಾಯದಲ್ಲೂ ನಿಶ್ಚಿತವಾಯಿತು. ಬಂಗಾಳಾದಲ್ಲಿ ಚಿತ್ತರಂಜನದಾಸರು, ತಿಂಗಳೊಂದಕ್ಕೆ ಮೂವತ್ತು ನಾಲ್ವತ್ತು ಸಾವಿರ ರೂಪಾಯಿಗಳ ಸಂಪಾದನೆಯಿದ್ದ ತಮ್ಮ ನ್ಯಾಯವಾದಿ ವೃತ್ತಿಗೆ ತಿಲತರ್ಪಣವಿತ್ತು ದೇಶಸೇವೆಗೆ ಸಿದ್ಧರಾದರು. ಈ ಅಗಾಧ ತ್ಯಾಗಕ್ಕಾಗಿ ಮೆಚ್ಚಿ ದೇಶವು ಅವರನ್ನು ದೇಶಬಂಧುವೆಂಬ ಸಾರ್ಥಕನಾಮದಿಂದ ಸಂಬೋಧಿಸಿ ಗೌರವಿಸಿತು ಒಂದಿಗೇ ನಮ್ಮ ಕಥಾನಾಯಕರ ಏಕಮಾತ್ರ ಪುತ್ರನೂ ಬ್ಯಾರಿಸ್ಟರ್ ಪದವೀಧರನೂ ಆಗಿದ್ದ ಪಂಡಿತ ಜವಾಹಿರ್‌ಲಾಲ್ ಮಹಾಶಯನು ತನ್ನ ನ್ಯಾಯವಾದಿವೃತ್ತಿಯನ್ನು ತ್ಯಜಿಸಿಬಿಟ್ಟನು. ಪಂಡಿತ ಮೋತೀಲಾಲರೂ, ದಾಸರಂತೆಯೇ ಅತ್ಯಗಾಧ ಸಂಪಾದನೆಗೆ ಆಕರವಾಗಿದ್ದ ತಮ್ಮ ನ್ಯಾಯವಾದಿವೃತ್ತಿಗೆ ತಿಲಾಂಜಲಿಯನ್ನಿತ್ತು ಮಹಾತ್ಮಾಜೀಯವರ ಅಸಹಕಾರ ಚಳವಳಿಯ ಕಾರ್ಯಕ್ಕಾಗಿ ತನುಮನಧನಗನ್ನರ್ಪಿಸಲು ಸಿದ್ಧರಾಗಿ ಮುಂದುವರಿಯಲು ಪಂಡಿತ ಜವಾಹಿರಲಾಲರ ವಿಶೇಷ ಪ್ರೇರಣೆಯೇ ಕಾರಣವೆಂದು ಜನತೆಯ ಭಾವನೆಯಿದೆ. ಎಂತಾದರಾಗಲಿ, ಈ ತಂದೆ ಮಕ್ಕಳು ಮಾತ್ರವಲ್ಲ, ನೆಹ್ರೂ ಕುಟುಂಬದಲ್ಲಿನ ಪುರುಷರುಮಾತ್ರವಲ್ಲ- ಸ್ತ್ರೀಯರೂ ಸಹ ಈ ಚಳವಳಿಗೆ ನುಗ್ಗಿ, ದೇಶಕಾರ್ಯಕ್ಕಾಗಿ ಶ್ರಮಿಸಲು ನಡುಕಟ್ಟಿ ಬಂದರು.

ನೆಹ್ರೂ ಮನೆತನದವರು ಅಸಹಕಾರ ಚಳುವಳಿಯ ಬೆಳೆವಣಿಗೆಗಾಗಿ ಮಾಡಿದ ಸ್ವಾರ್ಥತ್ಯಾಗವು ಅಪಾರವಾದುದು. ಮೋತೀಲಾಲರು ದೇಶಸೇವೆಗಾಗಿ ಪಟ್ಟ ದೇಹಶ್ರಮದ ವಿಚಾರವಂತಿರಲಿ, ಅವರು ಮಾಡಿರುವ ದ್ರವ್ಯದಾನಾದಿ ಇತರ ಮಹಾತ್ಯಾಗಗಳೇ ಅವರಿಗೆ ದೇಶಭಕ್ತರಲ್ಲಿ ಅತ್ಯುತ್ಕೃಷ್ಟ ತರಗತಿಯನ್ನು ಗಳಿಸಿಕೊಡಬಲ್ಲುವು. ಪಂ. ಮೋತೀಲಾಲರು ತಮ್ಮ 'ಆನಂದಭವನ'ವೆಂಬ ಅನ್ವರ್ಥ ನಾಮಧೇಯದ ದಿವ್ಯ ಸೌಧದಲ್ಲಿ ರಾಜಮಹಾರಾಜರುಗಳನ್ನು ನಾಚಿಸುವಂತಹ ಎಂತಹ ವೈಭವ ಸಂಪನ್ನತೆಯಲ್ಲಿ ಜೀವಿಸುತ್ತಿದ್ದವರೆಂಬುದನ್ನು ಕಂಡವರು ಹಲವರುಂಟು. ಆ ಸಂಸ್ಥಾನದ ರಾಜಪ್ರತಿನಿಧಿ ( ಗ ವ ರ್ನ ರ್ ) ಯೂ, ವೈಸರಾಯಿಯುವರ

ಕೌನ್ಸಿಲ್ ಮೆಂಬರುಗಳೂ, ಇತರ ಮಹಾ ಶ್ರೀಮಂತರೂ ಪಂಡಿತ ಮೋತೀಲಾಲರ ಆ ದಿವ್ಯ ಗೃಹದಲ್ಲಿ ಅನೇಕವೇಳೆ ಅತಿಥಿಗಳಾಗಿ, ರಾಜಯೋಗ್ಯವಾದ ದಿವ್ಯೌತಣಗಳಿಂದ ಸತ್ಕರಿಸಲ್ಪಡುತ್ತಿದ್ದುದುಂಟು. ಅವರು ಅನುಭವಿಸುತ್ತಿದ್ದ ದಿವ್ಯ ವಿಭವಗಳೂ ಅನುಪಮೇಯವಾಗಿ ಸಕಲರ ದೃಷ್ಟಿಯನ್ನೂ ಆಕರ್ಷಿಸುತ್ತಿದ್ದುವು. ಅವರು ಉಪಯೋಗಿಸುತ್ತಿದ್ದ ಉಡುಪು ವಾರವಾರವೂ ಫ್ರಾನ್ಸ್‌ದೇಶದ ಪ್ಯಾರಿಸ್‌ನಗರದ ದೋಭಿಗಳಿಂದ ಒಗೆಯಲ್ಪಟ್ಟು ಬರುತ್ತಿದ್ದುದೆಂದಮೇಲೆ, ಅವರು ಎಷ್ಟುಮಟ್ಟಿಗೆ ಭೌತಿಕಸುಖಸಂತೋಷಗಳಲ್ಲಿ ಮುಳುಗಿದ್ದರೆಂದು ಹೇಳಬೇಕಾದುದಿಲ್ಲವಷ್ಟೆ! ಪ್ರಾಪಂಚಿಕವಾದ ಇಂದ್ರಿಯ ಭೋಗಗಳ ಅನುಭವವನ್ನು ಇಷ್ಟುಮಟ್ಟಿಗೆ ಮೆಚ್ಚಿಕೊಂಡಿದ್ದ ಮನುಷ್ಯನೊಬ್ಬನು, ದೇಶಸೇವೆಯೆಂಬ ಮಹದುದ್ದೇಶದಿಂದ, ಆ ಸರ್ವಸುಖಗಳಿಗೂ ತಿಲಾಂಜಲಿಯಿತ್ತು ಸಕಲವಿಧವಾದ ದೇಹ ಕಷ್ಟಗಳಿಗೂ ಸಿದ್ಧನಾದನೆಂದರೆ ಅದಕ್ಕಿಂತಲೂ ಹೆಚ್ಚಿನ ಸ್ವಾರ್ಥತ್ಯಾಗವಾವುದು! ನಮ್ಮ ಕಥಾನಾಯಕರು ಅದ್ವಿತೀಯ ಮನಸ್ಥೈರ್ಯದಿಂದ, ಅಸಹಕಾರ ಚಳವಳಿಯಲ್ಲಿ ಪದಾರ್ಪಣಮಾಡಿದ ದಿನದಿಂದ ದೇಶಸೇವಾದೀಕ್ಷೆಯ ಮುಖ್ಯ ಚಿನ್ಹವಾದ ಖಾದೀಬಟ್ಟೆಯನ್ನು ಧಾರಣಮಾಡಲಾರಂಭಿಸಿದರು. ಅವರು ಮಾತ್ರವಲ್ಲ. ಗಾಳಿಯ ಪೊರೆಗಳೋ ಎಂಬಷ್ಟುಮಟ್ಟಿನ ಸೂಕ್ಷ್ಮವೂ ಮೃದುವೂ ಆದ ಚೀನಿ ಚೀನಾಂಬರಗಳನ್ನು ಧರಿಸುತ್ತಿದ್ದ ಅವರ ಕುಟುಂಬದ ಸ್ತ್ರೀಜನರೂ ಸಹ, ಶುದ್ಧವಾದ-ಒರಟಾದ ಖಾದೀ ಬಟ್ಟೆಯನ್ನು ಪರಮ ಪ್ರೇಮದಿಂದ ಧರಿಸತೊಡಗಿದರು. ಅಲಹಾಬಾದಿನ ನಾಗರಿಕರಿಗೆ ಪಂಡಿತರೇ ಶಿರೋಭೂಷಣಪ್ರಾಯರಾಗಿ ನಡವಳಿಕೆಯಲ್ಲಿ ಅಗ್ರಗಣ್ಯರಾಗಿದ್ದವರು. ಪಾಶ್ಚಾತ್ಯ ಪದ್ಧತಿಗಳನ್ನು ಪಂಡಿತರು ಮೆಚ್ಚಿಕೊಂಡು, ಅವನ್ನನುಸರಿಸಿ ನಡೆಯುತ್ತಿದ್ದಾಗ್ಗೆ, ಅವರನ್ನು ಅನುಕರಣಮಾಡಿದ್ದವರು, ಇಂದು ಅವರು ಖಾದೀ ಉಡುಗೆಯನ್ನುಟ್ಟು ಸ್ವದೇಶೀ ವ್ರತವನ್ನು ಅನುಸರಿಸಿದ ಒಡನೆಯೇ, ಹಿಂದೆ ಮುಂದೆ ನೋಡದೆ ಅವರನ್ನು ಹಿಂಬಾಲಿಸಿ, ತಾವೂ ಖಾದಿಯನ್ನೇ ವಿಶೇಷವಾಗಿ ಉಪಯೋಗಿಸತೊಡಗಿದರು.

## — ಕಾರಾಗಾರವಾಸ —

ಪ್ರಬಲವಾದ ಬ್ರಿಟಿಷ್‌ಸರ್ಕಾರಕ್ಕೆ ಪ್ರತಿದ್ವಂದ್ವಿಯಾದ ಚಳವಳಿಯೊಂದನ್ನು ಹೂಡಿ ಅದರ ನಾಯಕತ್ವವನ್ನು ವಹಿಸುವುದೆಂದರೆ, ಅದು ಜಳ್ಳೆದೆಯ ಹಂದೆಗಳು ಕೈಕೊಳ್ಳತಕ್ಕ ಕಾರ್ಯವಲ್ಲವಷ್ಟೆ! ಅಂತಹ ಕಾರ್ಯವನ್ನು ಕೈಕೊಂಡು ಮುಂದಕ್ಕೆ ಬಂದಮೇಲೆ, ಅದರಿಂದ ಪ್ರಾಪ್ತವಾಗತಕ್ಕ ಗೌರವದ ಹೂಮಾಲೆಗೆ ಕೊರಳನ್ನೊಡ್ಡಬೇಕಾದುದು ಹೇಗೆ ತಪ್ಪದೋ—ಅದರಿಂದ ಪ್ರಾಪ್ತವಾಗತಕ್ಕ ಕೈ ಕೋಳಗಳಿಗೆ ಕೈಗಳನ್ನೊಡ್ಡಬೇಕಾದುದೂ ಹಾಗೆಯೇ ತಪ್ಪದು. ಅಸಹಕಾರ ಚಳವಳಿಯು ಮಹಾತ್ಮಾಜೀಯವರ ಅವಿರಳ ಪರಿಶ್ರಮದಿಂದ ದೇಶವಾದ್ಯಂತವೂ ದಾವಾನಲದಂತೆ ವ್ಯಾಪಿಸಿ ಹಬ್ಬತೊಡಗಿತು. ಅದರ ಬೇಗೆಯನ್ನು ಸಹಿಸುವುದು ಸರ್ಕಾರಕ್ಕೆ ಅಸಾಧ್ಯವಾಯಿತು. ಅವರು ಆತ್ಮಗೌರವ ರಕ್ಷಣೆಗಾಗಿ ಪ್ರಾರಂಭಿಸಿದ ದಬ್ಬಾಳಿಕೆಯ ಶಸ್ತ್ರಕ್ಕೆ ದೇಶಭಕ್ತರಾದ ಹಲವು ಮಂದಿ ದೇಶಪುತ್ರರು ಬಲಿಬಿದ್ದರು. ದೇಶವಾದ್ಯಂತವೂ ಸರ್ಕಾರದ ಉಗ್ರಶಾಸನದ ವಿಷಯದಲ್ಲಿ ವಿಶೇಷ ಅಸಹನೆಯನ್ನು ವ್ಯಕ್ತಪಡಿಸುತ್ತಿತ್ತು. ಇಂತಹ ಸಂದರ್ಭದಲ್ಲೇ, ಇಂಗ್ಲೆಂಡಿನ ಯುವರಾಜರಾದ ಪ್ರಿನ್ಸ್‌ಆಫ್‌ವೇಲ್ಸ್ ರಾಜಕುಮಾರರನ್ನು ಇಂಡಿಯಾ ಸರ್ಕಾರವು ಆಹ್ವಾನಿಸಿ, ಅವರನ್ನು ದೇಶದ ವಿವಿಧ ಭಾಗಗಳಿಗೆ ಕರೆದೊಯ್ದು ಈ ದೇಶದ ನಿಜಸ್ಥಿತಿಯ ಪರಿಚಯವನ್ನು ಅವರಿಗೆ ಉಂಟುಮಾಡಿಕೊಡುವ ಒಂದು ಬಲವಂತದ ಕಾರ್ಯವನ್ನು ಕೈಕೊಂಡಿತು. ಸರಕಾರದ ಈ ಒತ್ತಾಯದ ಕಾರ್ಯವು ಪ್ರಜೆಗಳ ಇಷ್ಟಕ್ಕೆ ಎಷ್ಟುಮಟ್ಟಿಗೆ ವಿರೋಧವಾದುದೆಂಬುದನ್ನು ವ್ಯಕ್ತಪಡಿಸಬೇಕೆಂದು ಮಹಾತ್ಮಾಜೀಯವರು, ದೇಶದಲ್ಲೆಲ್ಲ ನಿಷೇಧಾರ್ಥಕ ಸಭೆಗಳನ್ನು ನಡೆಯಿಸಬೇಕೆಂದೂ, ಅವರು ಯಾವ ಯಾವ ಊರುಗಳಿಗೆ ಬರುತ್ತಾರೋ ಆಯಾ ದಿನಗಳಲ್ಲಿ ಆಯಾ ಊರುಗಳಲ್ಲಿ ಅಂಗಡಿ ಮುಂಗಟ್ಟುಗಳನ್ನು ತೆರೆಯದೆ, ಜನಗಳಾರೂ ಅವರಿಗಾಗಿ ಏರ್ಪಡುವ ಉತ್ಸವಗಳಲ್ಲಿ ಭಾಗವಹಿಸದೆ ಅವರ ಆಗಮನವನ್ನೇ ಬಹಿಷ್ಕರಿಸಬೇಕೆಂದೂ ಪ್ರಕಟಿಸಿದರು. ಮುಂಬಯಿನಗರದಲ್ಲಿ. ಈ ಬಹಿಷ್ಕಾರವು ವಿಶೇಷ ಯಶಸ್ವಿಯಾಗಿ ನೆರವೇರಿತು. ಅಲಹಾಬಾದಿನಲ್ಲಿ ಆ ಜಿಲ್ಲಾ ಕಲೆಕ್ಟರನು ಮೋತೀಲಾಲರ ಹೆಸರಿಗೆ ಒಂದು ಪತ್ರವನ್ನು ಕಳುಹಿಸಿದನು. ಅವ

ರಲ್ಲಿ,-'ನೀವು ಈ ದಿನ ಇಷ್ಟುಹೊತ್ತಿಗೆ ನಿಮ್ಮ ಮನೆಯ ಬಾಗಿಲನ್ನು ಮುಚ್ಚಿ, ರಾಜಕುಮಾರರ ಮೆರೆವಣಿಗೆಗೆ ವಿಘ್ನವಾಗದಂತೆ ಜಾಗ್ರತರಾಗಿರ ಬೇಕು. ಮತ್ತು ಗುಮಾನಿಗೆ ಅರ್ಹರಾದ ಜನಗಳನ್ನು ನಿಮ್ಮ ಮನೆಯಲ್ಲಿ ಸೇರಿಸದಂತೆ ಇರಬೇಕು' ಎಂದು ಮುಂತಾಗಿ ಬರೆಯಲ್ಪಟ್ಟಿತ್ತು. ಮರ್ಯಾದಸ್ಥನಾದ ಗೃಹಸ್ಥನೊಬ್ಬನಿಗೆ ಗೌರವಹಾನಿಕರವಾದ ಇಂತಹ ಪತ್ರಗಳನ್ನು ಕಳುಹಿಸುವುದರ ಔಚಿತ್ಯವನ್ನು ಸಹ ಯೋಚಿಸಲಾರದಷ್ಟು ಮಟ್ಟಿಗೆ ಅಧಿಕಾರಿ ವರ್ಗದವರ ತಲೆಯು ಕೆಟ್ಟುಹೋಗಿತ್ತು. ಪಂಡಿತರು -' ನಮ್ಮ ಗೃಹಕೃತ್ಯಗಳಲ್ಲಿ ಕೈಹಾಕಲು ನಿಮಗೇನೂ ಅಧಿಕಾರವಿಲ್ಲ' ಎಂದು ಪ್ರತ್ಯುತ್ತರ ಬರೆದು ಕಳುಹಿಸಿ, ಎಂದಿನಂತೆ ತಮ್ಮ ರಾಜಕೀಯ ಕಾರ್ಯಗಳಲ್ಲಿ ಆಸಕ್ತರಾಗಿರುತ್ತಿದ್ದರು. ಕಲೆಕ್ಟರಿಗೆ ಬರೆದ ಪತ್ರದಲ್ಲಿ,-ರಾಜಪುತ್ರನಿಗೆ ಯಾವ ಬಗೆಯ ಅಪಾಯವೂ ಹಾನಿಯೂ ಉಂಟಾಗದಂತೆ ಜಾಗ್ರತನಾಗಿರ ತಕ್ಕುದು ಸತ್ಯಾಗ್ರಹಿಯ ಕರ್ತವ್ಯಗಳಲ್ಲೊಂದು ಎಂಬ ಸಂಗತಿಯನ್ನು ನಾನು ತಿಳಿದಿದ್ದೇನೆ-ಎಂದೂ ಬರೆದಿದ್ದರು. ಆದರೂ ಮುಂದೆ ಎರಡುದಿನ ಗಳೊಳಗಾಗಿ, ಎಂದರೆ ೧೯೨೧ನೆಯ ಡಿಶಂಬರು ೬ನೆಯ ದಿನ ಪಂಡಿತ ಮೋತೀಲಾಲರನ್ನೂ ಅವರ ಮಗ ಪಂ. ಜವಾಹಿರಲಾಲರನ್ನೂ ಮೋಹನಲಾಲನೆಹ್ರು ಮತ್ತು ಶ್ಯಾಮುಲಾಲನೆಹ್ರು ಎಂಬಿಬ್ಬರು ಅವರ ಅಣ್ಣಂದಿರ ಮಕ್ಕಳನ್ನೂ ಮಿಕ್ಕ ಹಲವರನ್ನೂ ಸರ್ಕಾರವು ಸೆರೆಹಿಡಿದು ಬಂಧಿಸಿಟ್ಟಿತು. ಮುಂದೆ ಅವರಮೇಲೆ ನ್ಯಾಯಾಸ್ಥಾನದಲ್ಲಿ ಮೊಕದ್ದಮೆಯು ವಿಚಾರಣೆಗೆ ಬಂದಾಗ್ಗ ಪಂಡಿತರು, ನ್ಯಾಯಾಧಿಪತಿಯ ಪ್ರಶ್ನೆಗಳೊಂದಕ್ಕೂ ಪ್ರತ್ಯುತ್ತರ ಕೊಡದೆ, ತಮ್ಮ ಪರವಾಗಿ ವಾದಿಸಿಕೊಳ್ಳಲೂ ಇಚ್ಛಿಸದೆ,—ನಾನು ಇಂದು ನಿಂತಿರುವುದು ನ್ಯಾಯಾಸ್ಥಾನದ ಮುಂದಲ್ಲ. ಆದರೆ ನನ್ನ ಮಾತೃಭೂಮಿಯ ಶತ್ರುವಾದ ಆಳರಸರ ಒಬ್ಬ ಪ್ರತಿನಿಧಿಯ ಮುಂದೆ ನಿಂತಿದ್ದೇನೆ. ಇಲ್ಲಿ ನ್ಯಾಯದೊರೆಯುವುದಿಲ್ಲವೆಂಬ ನಂಬಿಕೆಯು ನನಗಿರುವುದರಿಂದ ನಾನೇನೂ ಹೇಳಬಯಸುವುದಿಲ್ಲ' ಹೀಗೆಂದು ನುಡಿದರು. ಅವರಿಗೆ ಆರು ತಿಂಗಳ ಸಜೆಯು ವಿಧಿಸಲ್ಪಟ್ಟಿತು. ಅಂತೆಯೇ ಮಿಕ್ಕ ಮೂವರಿಗೂ ಆರಾರು ತಿಂಗಳ ಕಾರಾಗಾರವಾಸವು ಪ್ರಾಪ್ತವಾಯಿತು.

ಮಾತೃದೇಶಸೇವೆಯೇ ಜೀವಿತದ ಮುಖ್ಯೋದ್ದೇಶವೆಂದು ತಿಳಿದ

ಮಹನೀಯರು, ಈ ಬಂಧನಕ್ಕಾಗಿ ಅಂಜುವರೆ,—ಚಿಂತಿಸುವರೆ! ಪಂಡಿತರು, ನ್ಯಾಯಾಧಿಪತಿಯು ಕೊಟ್ಟ ತೀರ್ಪನ್ನು ಹಸನ್ಮುಖದಿಂದ ಕೇಳಿ ಸರ್ಕಾರದವರು ನನ್ನನ್ನೂ ಒಬ್ಬ ಧುರೀಣನೆಂದು ಅಂಗೀಕರಿಸಿದರಲ್ಲಾ ಎಂದು ಹೆಮ್ಮೆಗೊಂಡರು. ಸರ್ಕಾರದವರು ಪಂ. ಮೋತೀಲಾಲರ ಮತ್ತು ದೇಶಬಂಧು ದಾಸರು ಮುಂತಾದ ಮಹಾ ವ್ಯಕ್ತಿಗಳನ್ನು ಸೆರೆಹಿಡಿದು ನಿರ್ಬಂಧದಲ್ಲಿಟ್ಟರಾದರೂ ಒಡನೆ ರಾಷ್ಟ್ರಧುರೀಣರನ್ನೆಲ್ಲ ಒಂದೆಡೆ ಸೇರಿಸಿ ಸಮಾಧಾನಕ್ಕಾಗಿ ಒಂದು ಬಗೆಯ ಪ್ರಯತ್ನಪಡುವಂತಹ ತಮ್ಮ ಚಿತ್ತವೃತ್ತಿಯನ್ನೂ ತೋರಿಸಿಕೊಂಡರು. ದಾಸ್ ಮತ್ತು ನೆಹ್ರೂಗಳಂತಹ ಆಗರ್ಭಶ್ರೀಮಂತತೆಯನ್ನು ಅನುಭವಿಸುತ್ತಿದ್ದವರಿಗೆ ಸೆರೆಮನೆಯ ವಾಸವು ಮಹಾತ್ಮಾಜೀಯವರಿಗೆ ಸಹನೆಯಾಗದೆ, ಸರ್ಕಾರದವರೊಂದಿಗೆ ಯಾವುದಾದರೊಂದು ಬಗೆಯಿಂದ ಒಪ್ಪಂದಮಾಡಿಕೊಂಡು ಅವರುಗಳನ್ನು ಬಿಡುಗಡೆ ಮಾಡಿಸೋಣವೇ ಎಂದು ಅಪೇಕ್ಷೆಯಿದ್ದಿತು. ಮೋತೀಲಾಲರು ಈ ಸುಳಿವನ್ನು ಹೇಗೋ ತಿಳಿದು,—'ನಮ್ಮ ಕಷ್ಟ ತಾಪತ್ರಯಗಳನ್ನು ಮನಸ್ಸಿಗೆ ತಂದುಕೊಂಡು, ದೇಶಹಿತಕಾರ್ಯವನ್ನು ಮಾನಸಿಕಮಾಡುವುದು ಯುಕ್ತವಲ್ಲ. ಸರ್ಕಾರದವರು ಸಂಧಿಗೆ ಬಂದಾಗ್ಗೆ, ಮಾತೃಭೂಮಿಯ ಹಕ್ಕು ಬಾಧ್ಯತೆಗಳನ್ನು ಕುರಿತು ಖಂಡಿತವಾದ ಮಾತುಗಳನ್ನಾಡುವಲ್ಲಿ ನಮ್ಮ ಬಂಧನವೂ ಕಷ್ಟಾನುಭವದ ಯೋಚನೆಯೂ ಅಡ್ಡಿಬಾರದಿರಲಿ' ಎಂದು ಲಕ್ನೋ ಸೆರೆಮನೆಯಿಂದ ಬರೆದು ಕಳುಹಿಸಿದರು.

ಹಿಂದೂಸ್ಥಾನದ ಪ್ರಜೆಗಳಿಗೂ, ಮುಖ್ಯವಾಗಿ ಸಂಯುಕ್ತಪ್ರಾಂತದ ನಿವಾಸಿಗಳಿಗೂ, ಪಂ. ಮೋತೀಲಾಲರಲ್ಲಿ ಎಷ್ಟುಮಟ್ಟಿನ ಪ್ರೀತಿ ವಿಶ್ವಾಸಗಳೂ ಗೌರವ ನಂಬಿಕೆಗಳೂ ಇದ್ದುವೆಂಬುದು ಅವರು ನಿರ್ಬಂಧಿತರಾಗಿ ಸೆರೆಮನೆಯನ್ನು ಸೇರುವವರೆಗೆ ಯಾರ ಪರಿಚಯಕ್ಕೂ ಬಂದಿರಲಿಲ್ಲ. ಅವರ ತರುವಾಯ ಆ ಪ್ರಾಂತದಲ್ಲಿ ಅವರ ಸ್ಥಾನಕ್ಕೆ ಬರುವ ಮನುಷ್ಯನೊಬ್ಬನೂ ಕಂಡುಬರಲಿಲ್ಲ. ಮೋತೀಲಾಲರನ್ನು ಅವರಿಗೆ ಗೊತ್ತಾಗಿದ್ದ ನಿರ್ಬಂಧದ ಅವಧಿಗಿಂತಲೂ ಮುಂಚಿತವಾಗಿಯೇ ಬಿಡುಗಡೆಮಾಡುತ್ತಾರೆಂಬ ಒಂದು ಪ್ರವಾದವಿದ್ದಿತು. ಅಲ್ಲದೆ ಅವರಿಗೆ ಉಬ್ಬಸರೋಗವಿದ್ದು, ಅದು ಸೆರೆಮನೆಯ ಕ್ಷುದ್ರ ಜೀವಿತದಿಂದ ಬಹುಮಟ್ಟಿಗೆ ಹೆಚ್ಚಿ ದಿನದಿನಕ್ಕೆ

ದೇಹಸ್ಥಿತಿಯು ಕೆಡಲಾರಂಭಿಸಿತು. ಪಂಡಿತರು, ತಮ್ಮ ಮಿತ್ರರೂ, ಆಗ್ಗೆ ತಮ್ಮೊಂದಿಗೇ ಸೆರೆಮನೆಯಲ್ಲಿ ಕಷ್ಟಾನುಭವಮಾಡುತ್ತಿದ್ದವರೂ ಆದ ಡಾ. ಮುರಾರಿಲಾಲ್ ಮತ್ತು ಡಾ. ಜವಹರಲಾಲ್ ಇವರು ತಮ್ಮ ಪರಾಮರಿಕೆಯನ್ನು ನೋಡಿಕೊಳ್ಳುವಂತೆ ಸಮ್ಮತಿಸಬೇಕೆಂದು ಮೇಲಧಿಕಾರಿಗಳನ್ನು ಕೇಳಿಕೊಂಡು ಒಪ್ಪಿಗೆಯನ್ನು ಪಡೆದರು. ಆದರೇನು, ಅವರಿಗೆ ಇನ್ನೂ ಉತ್ತಮವಾದ ಚಿಕಿತ್ಸೆಯು ಪ್ರಾರಂಭವಾಗುವುದಕ್ಕೆ ಮೊದಲೇ, ಅವರನ್ನು ನೈನಿ ಜೈಲ್ ಎಂಬಲ್ಲಿಗೆ ವರ್ಗಾಯಿಸಿಬಿಟ್ಟರು. ಸರ್ಕಾರದ ಈ ಆತುರದ ಚರ್ಯೆಗೆ ಕಾರಣವೇನೋ ಎಂದು ವಿಚಾರಿಸಲು, ಪಂಡಿತರ ಆರೋಗ್ಯಸೌಕರ್ಯಕ್ಕಾಗಿಯೇ ಹಾಗೆ ವರ್ಗಾಯಿಸಿದುದು ಎಂದು ಪ್ರತ್ಯುತ್ತರ ಬಂತು. ಆದರೆ ನಿಜಸ್ಥಿತಿಯು ಅದಲ್ಲ. ಅವರ ಮಕ್ಕಳಾದ ಪಂ. ಜವಾಹಿರಲಾಲ್ ನೆಹ್ರೂಯವರನ್ನು ಆಗತಾನೇ ಲಕ್ನೋ ಕಾರಾಗೃಹಕ್ಕೆ ಕರೆತಂದಿದ್ದರು. ತಂದೆಮಕ್ಕಳಿಬ್ಬರನ್ನೂ ಒಂದೇ ಸ್ಥಳದಲ್ಲಿರಿಸುವುದು ಕ್ಷೇಮವಲ್ಲವೆಂದು ಸರ್ಕಾರದವರು ಮಾಡಿದ ಹಂಚಿಕೆಯಿದು. ಆದರೆ ಮಹನೀಯರಾದ ಪಂಡಿತ ಮೋತೀಲಾಲರು ಈ ಬಗೆಯ ಕಿರುಕುಳಗಳಿಗೆಲ್ಲ ಬೆದರದೆ ತಮ್ಮ ಪಾಲಿಗೆ ಬಂದ ಸೆರೆಮನೆಯವಾಸವನ್ನು ಧೈರ್ಯದಿಂದ ಅನುಭವಿಸಿ ಜೂನ್ ೬ನೆಯ ತಾರೀಖಿನದಿನ ಬಿಡುಗಡೆಯಾಗಿ, ಸಹೋದ್ಯೋಗಿಗಳಿಗೆಲ್ಲ ಪರಮಾನಂದವನ್ನುಂಟುಮಾಡಿದರು.

## — ಪುನಶ್ಚ ಹರಿಃ ಓಂ —

ರಾಜಯೋಗ್ಯವಾದ ಭೋಗಭಾಗ್ಯಗಳನ್ನು ಅನುಭವಿಸುತ್ತಿದ್ದ ತಮಗೂ ತಮ್ಮ ಕುಟುಂಬದವರಿಗೂ ಪ್ರಾಪ್ತವಾದ ಸೆರೆಮನೆಯವಾಸ ಮುಂತಾದುವು ಮೋತೀಲಾಲರನ್ನು ಎಷ್ಟು ಮಾತ್ರಕ್ಕೂ ಎದೆಗುಂದಿಸಲಿಲ್ಲ- ಮಾತ್ರವಲ್ಲ- ಅವರಲ್ಲಿ ನವಜೀವನದ ಒರತೆಯನ್ನೇ ಎಬ್ಬಿಸಿತು. ಸೆರೆಮನೆಯಿಂದ ಹೊರಕ್ಕೆ ಬಂದೊಡನೆಯೇ ರಾಷ್ಟ್ರಮಹಾಸಭೆಯ ಕಾರ್ಯದರ್ಶಿತ್ವವನ್ನು ಕೈಕೊಂಡು ಪರಮೋತ್ಸಾಹದಿಂದ- ನವತರುಣರಂತೆ ಪುನಃ ಕಾರ್ಯಪ್ರಾರಂಭಮಾಡಿದರು. ಅವರ ಅನುಕೂಲತೆಗಾಗಿ ರಾಷ್ಟ್ರಮಹಾಸಭೆಯ ಮುಖ್ಯ ಕಚೇರಿಯು ಅಹಮ್ಮದಾಬಾದಿನಿಂದ ಅಲಹಾಬಾದಿಗೆ ವರ್ಗಾಯಿಸಲ್ಪಟ್ಟಿತು.

ಆ ಪ್ರಾಂತಕ್ಕೆ ಸಂಬಂಧಿಸಿದ ಹಲವು ರಾಜಕೀಯ ಕಾರ್ಯಗಳು ಅವರ ಬರುವನ್ನೇ ಕಾಯ್ದುಕೊಂಡಿದ್ದುದರಿಂದ, ಪಂಡಿತರು ಒಡನೆ ಆ ಪ್ರಾಂತವಲ್ಲೆಲ್ಲ ಸಂಚಾರಮಾಡಿ, ಖಾದೀಬಟ್ಟೆಯ ಪ್ರಚಾರಕಾರ್ಯವೇ ಆಗ ಸರ್ವೋತ್ಕೃಷ್ಟವೂ ಸರ್ವರಿಗೂ ಸಾಧ್ಯವಿರತಕ್ಕುದೂ ಆದ ಕಾರ್ಯವೆಂದು ಹಲವು ಸಭೆಗಳಲ್ಲಿ ಉಪನ್ಯಾಸಮಾಡಿ ತಿಳಿಸಿದರು. ಆ ಸಂವತ್ಸರದ ಡಿಶಂಬರಿನಲ್ಲಿ ಅಹಮ್ಮದಾಬಾದಿನಲ್ಲಿ ನಡೆದ ರಾಷ್ಟ್ರಮಹಾಸಭಾಧಿವೇಶನದಲ್ಲಿ, ಅಸಹಕಾರ ಚಳವಳಿಯು ಇನ್ನೂ ಮುಂದರಿಸಲ್ಪಟ್ಟಿತು. ಸಾಧ್ಯವಿದ್ದೆಡೆಗಳಲ್ಲೆಲ್ಲ ವೈಯಕ್ತಿಕ ಮತ್ತು ಸಾಮೂಹಿಕ ಶಾಸನಭಂಗ ಚಳವಳಿಯನ್ನೂ ಪ್ರಾರಂಭಿಸಬಹುದೆಂಬ ಠರಾವು ಮಂಜೂರಾಯಿತು. ಒಂದಿಗೇ ಮಹಾತ್ಮಾಜೀಯವರಿಗೆ ರಾಷ್ಟ್ರಕಾರ್ಯವಿಚಾರಗಳಲ್ಲಿ ಸರ್ವತಂತ್ರ ಸ್ವಾತಂತ್ರ್ಯಾಧಿಕಾರವೂ ಕೊಡಲ್ಪಟ್ಟಿತು. ಮಹಾತ್ಮಾಜೀಯವರು ಬಡೋರ್ಲೀ ತಾಲ್ಲೂಕಿನಲ್ಲಿ ಶಾಸನಭಂಗ ಚಳವಳಿಯನ್ನು ಪ್ರಾರಂಭಿಸಲು ಹೊರಟರು. ಆದರೆ, ಚೌರಿಚೌರ ಎಂಬಲ್ಲೊಂದು ಭಯಂಕರ ದಂಗೆಯು ನಡೆದು, ದಂಗೆಯವರು ಸರ್ಕಾರೀ ಕಟ್ಟಡಗಳನ್ನೂ ಕಾಗದಪತ್ರಗಳನ್ನೂ ಸುಟ್ಟು, ಪೋಲೀಸಿನವರನ್ನು ಕೊಂದು ಅನೇಕ ಭೀಕರ ಕಾರ್ಯಗಳನ್ನು ಮಾಡಿಬಿಟ್ಟರು. ಈ ನರಹಿಂಸಾವೃತ್ತಾಂತವು ತಿಳಿದೊಡನೆಯೇ ಮಹಾತ್ಮಾಜೀಯವರು, ಶಾಸನಭಂಗ ಚಳವಳಿಯನ್ನು ಆರಂಭಿಸಿ ನಡೆಯಿಸಲು ಸಾಕಾದಷ್ಟು ಪ್ರಮಾಣದಲ್ಲಿ ಅಹಿಂಸಾತತ್ವವು ಇನ್ನೂ ಜನಮನದಲ್ಲಿ ಮೂಡಿಲ್ಲವೆಂದು ಭಾವಿಸಿ, ತಮ್ಮ ಉದ್ದೇಶವನ್ನು ಅಷ್ಟಕ್ಕೇ ನಿಲ್ಲಿಸಿ, ಮುಂದೆ ಖಾದೀಪ್ರಚಾರ, ಹಿಂದೂ ಮಹಮ್ಮದೀಯರ ಐಕ್ಯತೆ ಅಲ್ಲದೆ ಇತರ ಹಲಕೆಲವು ಸಾಮಾಜಿಕ ಸುಧಾರಣೆಗಳು ಮುಂತಾದುವುಗಳಲ್ಲಿ ತಮ್ಮ ಗಮನವನ್ನಿಟ್ಟರು.

ಮಹಾತ್ಮಾಜೀಯವರು ಹೀಗೆ ದೇಶಹಿತಸಾಧನೋದ್ದೇಶದಿಂದ ನೂತನಕಾರ್ಯವನ್ನು ಕೈಕೊಂಡರೂ, ಅವರಿಗೆ ಬಲಭುಜವೋ ಎಂಬಂತೆ ನಿಂತು, ನಮ್ಮ ಕಥಾನಾಯಕರು ಸಹಕರಿಸುತ್ತಿದ್ದರು. ಒಂದು ಸಂದರ್ಭದಲ್ಲಿ ಮಾತ್ರ, ಮಹಾತ್ಮರು, ಸರ್ಕಾರದ ಕೈಬೊಂಬೆಗಳಂತೆ ಇರುವ ಕೌನ್ಸಿಲುಗಳನ್ನು ಬಹಿಷ್ಕರಿಸಬೇಕೆಂದು ಪಟ್ಟಿದ್ದ ಅಭಿಪ್ರಾಯಕ್ಕೆ ವ್ಯತಿರಿಕ್ತವಾಗಿ, ದೇಶಬಂಧು ದಾಸರೊಂದಿಗೆ ಸೇರಿ ಚಳವಳ ನಡಿಸಿ, ಸ್ವರಾಜ್ಯವಾದಿಗಳ

ತಂತವಿಂದ ಕೌನ್ಸಿಲು ಸಭೆ ಮನೆಗಳನ್ನು ತುಂಬಿದರು. ಸರ್ಕಾರದ ಸದಸ್ಯರು ತಂದ ಮಸೂದೆಗಳೊಂದೊಂದನ್ನೂ ವಿರೋಧಿಸಿ, ರಾಜ್ಯಾಂಗಪಕ್ಷಕ್ಕೆ ಒಂದೊಂದು ಪ್ರಾಂತದಲ್ಲೂ ವಿಶೇಷ ಅಪಜಯವುಂಟಾಗುವಂತೆ ಮಾಡಿದರು.

## — ಸೈಮರ್ನ್ ಕಮಿಷನ್-ನೆಹ್ರೂ ರಿಪೋರ್ಟ್ —

ಭಾರತದೇಶದ ಆಡಳಿತದಲ್ಲಿ, ಬ್ರಿಟಿಷ್ ಸರ್ಕಾರದವರು ಅನುಸರಿಸುತ್ತಿರುವ ಭೇದನೀತಿಯು ಈ ಸಂದರ್ಭದಲ್ಲಿ ಪ್ರಕಟವಾದಷ್ಟು ಸ್ಪಷ್ಟವಾಗಿ ಮತ್ತಾವಾಗಲೂ ಪ್ರಕಟವಾಗಿರಲಿಲ್ಲ. ಹಿಂದೂಗಳೂ ಮುಹಮ್ಮದೀಯರೂ ನೂರಾರು ವರ್ಷಗಳಿಂದಲೂ ಈ ದೇಶದಲ್ಲಿ ನೆರೆಹೊರೆಯವರಾಗಿ ಅನ್ಯೋನ್ಯತೆಯಿಂದ ಬಾಳ್ವೆಮಾಡುತ್ತಿದ್ದಾರೆ. ಹಿಂದೂರಾಜರ ಕೈಕೆಳಗೆ ಮುಹಮ್ಮದೀಯರೂ ನವಾಬರ - ಸುಲ್ತಾನರ ಬಳಿಯಲ್ಲಿ ಬ್ರಾಹ್ಮಣಾಧಿಕಾರಿಗಳೂ ಕೆಲಸಮಾಡಿ ಸುಖಸಂತೋಷಗಳನ್ನು ಅನುಭವಿಸಿಕೊಂಡಿದ್ದ ಉದಾಹರಣೆಗಳು ದೇಶದ ಎಲ್ಲಾ ಭಾಗದಲ್ಲೂ ದೊರೆಯುತ್ತಿವೆ. ಆದರೆ ಈಗ ಅನೇಕ ಸ್ಥಳಗಳಲ್ಲಿ ಮುಹಮ್ಮದೀಯರ ಮಸೀದಿಯ ಎದುರಿಗೆ ಹಿಂದೂಗಳು ತಮ್ಮ ಉತ್ಸವಾದಿಗಳನ್ನು ಕೊಂಡೊಯ್ಯುವಾಗ್ಗೆ ಮೇಳಮಾಡಕೂಡದೆಂಬ ಕಾರಣವನ್ನೇ ಮುಂದುಮಾಡಿಕೊಂಡು, ಮುಹಮ್ಮದೀಯರು ಹಿಂದೂಗಳನ್ನು ಆಗರ್ಭಶತ್ರುಗಳೋ ಎಂಬಂತೆ ದ್ವೇಷಿಸಲಾರಂಭವಾದ ಈ ಅಲ್ಪಕಾರಣ ನಿಮಿತ್ತವಾಗಿ ಅನೇಕ ಭಾಗಗಳಲ್ಲಿ ಹಿಂದೂ ಮುಹಮ್ಮದೀಯರ ಜಗಳಗಳು ನಡೆದು ರಕ್ತಪ್ರವಾಹಗಳು ಹರಿದುವು. ದೇಶನಾಯಕರಲ್ಲಿ ಹಲವರು ಈ ದುಸ್ಥಿತಿಯನ್ನು ಪರಿಹರಿಸಲು ಅಗಾಧ ಪ್ರಯತ್ನಗಳನ್ನು ನಡಿಸಿದರು. ಅವರಲ್ಲಿ ನಮ್ಮ ಕಥಾನಾಯಕರೂ ಒಬ್ಬರು. ಪಂ. ಮೋತೀಲಾಲರ ಅಭಿಪ್ರಾಯದಲ್ಲಿ, ಯಾವನೊಬ್ಬನು ಹಿಂದುವೇ ಮುಹಮ್ಮದೀಯನೇ ಎಂಬ ಪ್ರಶ್ನೆಯು ಉತ್ಪನ್ನವಾಗುವುದಕ್ಕಿಂತ ಮುಂಚೆ ಅವನು ಭಾರತೀಯನೇ ಎಂಬ ವಿಚಾರಕ್ಕೇ ಹೆಚ್ಚು ಗಮನ ಕೊಡತಕ್ಕದು ಎಂಬುದಾಗಿತ್ತು. ಜಾತಿಮತ ಸಂಬಂಧವಾದ ಪ್ರಶ್ನೆ ಬಂದಾಗಲೆಲ್ಲ ಅವರು ಈ ಧ್ಯೇಯವನ್ನಿಟ್ಟುಕೊಂಡೇ ವ್ಯವಹರಿಸುತ್ತಿದ್ದರು.

ದೇಶೀಯರ ಮನಸ್ಸು ಹೀಗೆ ಅತ್ಯಲ್ಪಕಾರಣಗಳಿಗಾಗಿ ಒಡೆದು,

ಅವರು ಪರಸ್ಪರರ ಕತ್ತು ಹಿಸುಕಲು ಸಿದ್ಧರಾಗಿದ್ದ ಕಾಲದಲ್ಲೇ, ರಾಜ್ಯಾಂಗದವರು ಈ ದೇಶದ ರಾಜ್ಯಾಂಗ ಸುಧಾರಣೆಗಾಗಿ ಸರ್ ಜಾನ್ ಸೈಮನ್ ಎಂಬವರ ಅಧ್ಯಕ್ಷತೆಯಲ್ಲಿ ಒಂದು ಕಮಿಷನನ್ನು ಏರ್ಪಡಿಸಿದರು. ಈ ಕಮಿಷನ್ನಿನಲ್ಲಿ ಒಬ್ಬನಾದರೂ ಭಾರತೀಯ ಸದಸ್ಯನಿಲ್ಲದೆ, ಹಿಂದೂದೇಶ ವಿಚಾರವನ್ನು ಎಂದೂ ಕಂಡು ಕೇಳಿ ಅರಿಯದ ಆಂಗ್ಲೇಯರೇ ಇದ್ದು ಕಾರ್ಯ ಮಾಡುವಂತೆ ಏರ್ಪಟ್ಟಿದ್ದ ಸ್ಥಿತಿಯು ಸಕಲ ರಾಜಕೀಯ ಪಕ್ಷಗಳವರ ಮನಸ್ಸಿನಲ್ಲೂ ಕಳವಳವನ್ನೆಬ್ಬಿಸಿತು. ಭಾರತೀಯರ ಮುಖಕ್ಕೆ ಮಸಿ ಹಚ್ಚುವ ಉದ್ದೇಶದಿಂದಲೇ ಪ್ರಾರಂಭವಾದ ಈ ಸಮಿತಿಯನ್ನು ಬಹಿಷ್ಕರಿಸಬೇಕೆಂದೂ, ಅದು ಸಾಕ್ಷ್ಯಗಳನ್ನು ತೆಗೆದುಕೊಳ್ಳಲು ಈ ದೇಶಕ್ಕೆ ಬಂದಾಗ್ಗೆ ಅದರಲ್ಲಿ ಯಾರೊಬ್ಬರೂ ಭಾಗ ತೆಗೆದುಕೊಳ್ಳಕೂಡದೆಂದೂ ಚಳವಳವೆದ್ದಿತು. ಈ ಚಳವಳಕ್ಕೆ ಪ್ರತ್ಯುತ್ತರವಾಗಿ, ಭಾರತೀಯ ಸದಸ್ಯರೇ ಉಳ್ಳ ಮತ್ತೊಂದು ಸಮಿತಿಯನ್ನು ನಿರ್ಮಿಸಿ ಇದರೊಂದಿಗೇ ಕೆಲಸಮಾಡುವಂತೆ ಏರ್ಪಡಿಸಿದರಾದರೂ, ಅದೂ ದೇಶೀಯರಿಗೆ ಸಮಾಧಾನವನ್ನುಂಟುಮಾಡಲಿಲ್ಲ. ಆಗ ರಾಷ್ಟ್ರ ಮಹಾಸಭೆಯ ಕಾರ್ಯನಿರ್ವಾಹಕ ಮಂಡಲಿಯು ಭಾರತದೇಶದ ರಾಜ್ಯಾಂಗ ವಿಧಾನದ ರಚನೆಯನ್ನು ವಿವರಿಸುವ ಒಂದು ವರದಿಯನ್ನು ನಿರ್ಮಿಸಲಿಚ್ಛಿಸಿ, ಒಂದು ಸಮಿತಿಯನ್ನು ಏರ್ಪಡಿಸಿತು. ಅದಕ್ಕೆ ನಮ್ಮ ಕಥಾನಾಯಕರೇ ಅಧ್ಯಕ್ಷರಾಗಿ ಬಹು ಪರಿಶ್ರಮಪಟ್ಟು, ಒಂದು ವರದಿಯನ್ನು ರಚಿಸಿದರು. ಅದಕ್ಕೆ 'ನೆಹ್ರೂ ರಾಜ್ಯಾಂಗ ರಚನಾ ವರದಿ' ಅಥವಾ 'ನೆಹ್ರೂ ಕಾನ್ಸ್ಟಿಟ್ಯೂಷನ್' ಎಂದು ಹೆಸರು. ಅದನ್ನು ಅವಲೋಕಿಸಿದರೆ, ಪಂ. ಮೋತೀಲಾಲರಿಗೆ ಲೋಕದ, ದೇಶದೇಶಾಂತರಗಳ ರಾಜ್ಯಭಾರಗಳನ್ನು ಕುರಿತು ಜ್ಞಾನವೂ ರಾಜ್ಯಾಂಗರಚನೆಯಲ್ಲಿದ್ದ ಅಮೌಲ್ಯ ನೈಪುಣ್ಯವೂ ಎಂತಹ ಉಚ್ಚತರಗತಿಯದು ಎಂಬುದರ ಪರಿಚಯವಾಗುವುದು. ಈ ನೆಹ್ರೂ ರಿಪೋರ್ಟಿನಲ್ಲಿ, ಮುಂದೆ ಭಾರತದೇಶಪಾಲನೆಯು – ಈಗ ಅಮೆರಿಕದ ಕೆನಡ, ಆಸ್ಟ್ರೇಲಿಯ ಮುಂತಾದ ದೇಶಗಳ ಸಂಬಂಧವು ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಇರುವಂತೆಯೇ-ಸಾಮಂತರಾಜ್ಯ ಪರಿಪಾಲನಾ ಪದ್ಧತಿಯನ್ನನುಸರಿಸಿ ನಡೆಯಬೇಕು. ಇವರ ಒಳ

ಆಡಳಿತಗಳಲ್ಲಿ ಅದಕ್ಕೆ ಸಂಪೂರ್ಣ ಸ್ವಾತಂತ್ರ್ಯವಿರಬೇಕು, ಎಂಬ ಉದಾತ್ತ ರಾಜನೀತಿ ತತ್ವಗಳನ್ನು ಒಳಕೊಂಡಿದೆ.

## — ರಾಷ್ಟ್ರ ಮಹಾಸಭಾಧ್ಯಕ್ಷತೆ —

ದೇಶಾಭಿವೃದ್ಧಿ ದೃಷ್ಟಿಯಿಂದ ರಾಷ್ಟ್ರ ಮಹಾಸಭೆಯವರು ನಡಿಸುತ್ತಿದ್ದ ಚಳವಳಿಗಳು ಮತ್ತು ಅವುಗಳನ್ನು ಧ್ವಂಸಗೊಳಿಸಲು ಸರ್ಕಾರದವರು ಪ್ರಯೋಗಿಸುತ್ತಿದ್ದ ಪ್ರತಿಕ್ರಿಯಾಸ್ತ್ರಗಳು ಇವುಗಳ ಗಲಭೆಯಲ್ಲಿ ದೇಶದ ಸ್ಥಿತಿಯು ಅಲ್ಲೋಲಕಲ್ಲೋಲವಾಗಿ ಹೋಯಿತು. ದೇಶದ ವಾತಾವರಣವೇ ಬದಲಾಯಿಸಿತು. ಪ್ರಜಾವರ್ಗದ ಮನಸ್ಸಿನಲ್ಲಿ ದೇಶೀಯ ವಿಚಾರದಲ್ಲಿ ಶ್ರದ್ಧಾಭಕ್ತಿಗಳು ಹೆಚ್ಚು ತೊಡಗಿದುವು. ಇದೇ ಸಂದರ್ಭದಲ್ಲೇ ಕಾಂಗ್ರೆಸ್ ಅಧಿವೇಶನವು ನಡೆವ ಕಾಲವೂ ಒದಗಿಬಂತು. ದೇಶದಲ್ಲಿ ಎಲ್ಲೆಲ್ಲಿ ನೋಡಿದರೂ ಜಾತಿಮತ ದ್ವೇಷಾಸೂಯೆಗಳ ದಾವಾನಲ, ಅದನ್ನು ಅಣಗಿಸಬೇಕೆಂಬ ಉದ್ದೇಶವನ್ನು ಮುಂದುಮಾಡಿಕೊಂಡು ಸರ್ಕಾರದವರು ಅದರಮೇಲೆ ಭೇದನೀತಿಯೆಂಬ ಎಣ್ಣೆಯನ್ನು ಸುರಿಯುತ್ತಿದ್ದ ಪ್ರತಿಕ್ರಿಯೆ, ಮೇಲೆಮೇಲೆ ದೇಶದಲ್ಲಿ ಪ್ರಬಲಿಸುತ್ತಿದ್ದ ಆರ್ಥಿಕ ದುಸ್ಥಿತಿ, ಈ ಮುಂತಾದ ಹಲವು ವಿಚಾರಗಳನ್ನು ಸಾವಧಾನದಿಂದ ವಿಮರ್ಶಿಸಿ ದೇಶಕ್ಕೆ ಒಂದು ಯೋಗ್ಯ ಧ್ಯೇಯವನ್ನು ಕಲ್ಪಿಸಿಕೊಡಬಲ್ಲ ಮುಂದಾಳ್ತನವು ನಮ್ಮ ಕಥಾನಾಯಕರಲ್ಲಲ್ಲದೆ ಬೇರೊಬ್ಬರಲ್ಲಿ ಕಂಡು ಬಾರದುದ್ದುದನ್ನು ಯೋಚಿಸಿ, ರಾಷ್ಟ್ರ ಮಹಾಸಭೆಯು ಪುನಃ ಅವರ ಕೊರಳಿಗೇ ಮಾಲೆ ಹಾಕಿತು. ೧೯೨೮ರಲ್ಲಿ ಕಲ್ಕತ್ತಾ ನಗರದಲ್ಲಿ ನಡೆದ ಈ ರಾಷ್ಟ್ರ ಮಹಾಸಭೆಗೆ ಅಧ್ಯಕ್ಷರಾಗಿ ಪಂಡಿತ ಮೋತೀಲಾಲ ನೆಹ್ರೂ ಮಹಾಶಯರು ದೇಶೀಯರಿಂದ ಪಡೆದ ಗೌರವಾದರಗಳು ಅಪೂರ್ವವೂ, ಅಭೂತ ಪೂರ್ವವೂ ಆದುವು. ಅವರು ಕುಳಿತಿದ್ದ ರಥಕ್ಕೆ ಮೂವತ್ನಾಲ್ಕು ಕುದುರೆಗಳನ್ನು ಕಟ್ಟಿ ಕಲ್ಕತ್ತೆಯ ರಾಜಬೀದಿಗಳಲ್ಲಿ ಮೆರೆವಣಿಗೆ ಮಾಡಿಸಿದರು. ದೇಶೀಯರ ಉತ್ಸಾಹಾವೇಶಗಳು ಮುಗಿಲು ಮುಟ್ಟಿದುವು. ಈ ಮಹಾಸಭೆಯಲ್ಲಿ 'ನೆಹ್ರೂ ರಿಪೋರ್ಟ'ನ್ನು ಪುನರ್ವಿಮರ್ಶೆಮಾಡಿ, ರಾಷ್ಟ್ರವು ಅಂಗೀಕಾರ ಮಾಡಿತು. ಅದರಲ್ಲಿ ಪ್ರತಿಪಾದಿಸಲ್ಪಟ್ಟ ವಿಧಾನದಂತೆ, ಬ್ರಿಟಿಷ್ ಸರ್ಕಾರ

ರವು 'ಡೊಮಿನಿಯನ್ ಸ್ಟೇಟಸ್' ಪದ್ಧತಿಯನ್ನು ಒಂದು ವರ್ಷದೊಳಗಾಗಿ ಕೊಡುವುದಾದರೆ ಅದನ್ನು ಅಂಗೀಕರಿಸತಕ್ಕುದೆಂದೂ, ಹಾಗಾಗದಿದ್ದಲ್ಲಿ, ಒಂದು ವರ್ಷವಾದ ತರುವಾಯ, ಬ್ರಿಟಿಷ್ ಸರ್ಕಾರದ ಅಧೀನವನ್ನು ತ್ಯಜಿಸಿ ಸಂಪೂರ್ಣ ಸ್ವಾತಂತ್ರ್ಯ ಸಾಧನೆಗೆ ಪ್ರಯತ್ನಿಸತಕ್ಕುದೇ ಭಾರತ ರಾಷ್ಟ್ರ ಮಹಾಸಭೆಯ ಧ್ಯೇಯವಾಗಿರತಕ್ಕುದೆಂದೂ ನಿರ್ಣಯವಾಯಿತು.

ರಾಷ್ಟ್ರ ಮಹಾಸಭೆಯ ಈ ನಿರ್ಣಯವಾದ ತರುವಾಯ ಒಂದು ವರ್ಷ ಕಾಲವು ಕಳೆಯುತ್ತಿರಲಾಗಿ, ೧೯೨೯ನೆಯ ನವಂಬರು ತಿಂಗಳಲ್ಲಿ, ವೈಸರಾಯಿಯವರು ಒಂದು ಆಶಾಜನಕವಾದ ರಾಜಕೀಯ ಭವಿಷ್ಯವನ್ನು ಪ್ರಕಟಿಸಿದರು. ಭಾರತದೇಶಕ್ಕೆ - 'ಡೊಮಿನಿಯನ್ ಸ್ಟೇಟಸ್' ಎಂಬ ರಾಜ್ಯಾಂಗ ಪದ್ಧತಿಯನ್ನು ಕೊಡತಕ್ಕುದೇ ಬ್ರಿಟಿಷ್ ಸರ್ಕಾರದ ಅಂತಿಮ ಅಪೇಕ್ಷೆ! ಆ ರಾಜ್ಯಾಂಗ ರಚನೆಯ ರೀತಿ ನೀತಿಗಳನ್ನು ಸ್ವಲ್ಪ ಸಾವಧಾನ ವಾಗಿ ವಿಮರ್ಶಿಸತಕ್ಕುದು ಅತ್ಯಾವಶ್ಯಕವಾಗಿದೆ. ಆದುದರಿಂದ ಈ ವಿಸ್ತಾರವಾದ ದೇಶದ ನಿವಾಸಿಗಳ ಮತ್ತು ದೇಶೀಯ ರಾಜರುಗಳ ಪ್ರತಿನಿಧಿಗಳನ್ನು ಒಳಗೊಂಡ ಒಂದು ಚಕ್ರಗೋಷ್ಠಿ ಸಭೆಯು (*Round Table Conference*) ನಡೆಯಿಸಲ್ಪಡುತ್ತದೆ. ಅದರಲ್ಲಿ ತೀರ್ಮಾನವಾದಂತೆ ಮುಂದೆ ಭಾರತ ರಾಜ್ಯಾಂಗರಚನೆಯಾಗತಕ್ಕುದು' ಈ ಪ್ರಕಟಣೆಯು ಲೇಶ ಮಾತ್ರ ಆಶಾಜನಕವಾಗಿಯೇನೋ ಕಂಡುಬಂದಿತು. ವೈಸರಾಯಿಯವರ ಈ ಪ್ರಕಟಣೆಯು ಬ್ರಿಟಿಷ್ ಸರ್ಕಾರದವರು ಹೃತ್ಪೂರ್ವಕವಾಗಿ ಪಟ್ಟ ಅಭಿಪ್ರಾಯವೇ ಹೇಗೆ ಎಂಬುದನ್ನು ನಿರ್ಧರಪಡಿಸಿಕೊಳ್ಳಬೇಕೆಂದು ಮಹಾತ್ಮಾ ಗಾಂಧಿಜೀಯವರೂ ಪಂಡಿತ ಮೋತೀಲಾಲರೂ ವೈಸರಾಯಿಯವರನ್ನು ಕಂಡು-'ತಾವು ಏರ್ಪಡಿಸುವ ಚಕ್ರಗೋಷ್ಠಿ ಸಭೆಯ ಮುಖ್ಯೋದ್ದೇಶವು ಭಾರತದೇಶಕ್ಕೆ ಡೊಮಿನಿಯನ್ ಸ್ಟೇಟಸ್ ಎಂಬುದರಿಂದ ವ್ಯಕ್ತವಾಗುವ ಸಾಮಂತರಾಜ್ಯ ಪಾಲನೆಯನ್ನು ಪ್ರಸಾದಿಸತಕ್ಕುದೇ ಆಗಿರಬೇಕು. ಮಾತ್ರವಲ್ಲ ಆ ಸಭೆಯು, ಅದನ್ನು ಯಾವ ಕ್ರಮವನ್ನನುಸರಿಸಿ ಪ್ರದಾನ ಮಾಡತಕ್ಕುದು ಎಂಬುದನ್ನು ಚರ್ಚಿಸಿ ತೀರ್ಮಾನಿಸಲಿಕ್ಕಾಗಿಯೇ ಸೇರತಕ್ಕುದು ಎಂಬ ನಿರ್ಧಾರವನ್ನು - ವಾಗ್ದಾನವನ್ನು ಕೊಡಲು ತಮ್ಮಿಂದ ಸಾಧ್ಯವುಂಟೇ' ಎಂದು ಪ್ರಶ್ನಿಸಿದರು. ಆದರೆ ವೈಸರಾಯರು, ಆ ವಿಷಯ

ದಲ್ಲಿ ಅಷ್ಟು ಜವಾಬುದಾರಿಯ ವಾಗ್ದಾನಮಾಡುವುದು ನಮ್ಮಿಂದ ಸಾಧ್ಯವಿಲ್ಲವೆಂದು ನುಡಿದುಬಿಟ್ಟರು.

ವೈಸರಾಯಿಯವರ ಈ ಚರ್ಯೆಯು ದೇಶನಾಯಕರ ಮನಸ್ಸಿನಲ್ಲಿ ಸಂದೇಹದ ಬೀಜಗಳನ್ನು ಬಿತ್ತಿತು. ಮುಂದೆ ಸ್ವಲ್ಪ ದಿವಸಗಳಲ್ಲೇ ಲಾಹೋರ್ ನಗರದಲ್ಲಿ ನಡೆದ ರಾಷ್ಟ್ರಮಹಾಸಭಾಧಿವೇಶನಕ್ಕೆ ಮೋತೀಲಾಲರ ಪುತ್ರರತ್ನ ಪಂಡಿತ ಜವಾಹಿರ್‌ಲಾಲರೇ ಅಧ್ಯಕ್ಷರಾಗಿರಬೇಕೆಂದು ರಾಷ್ಟ್ರದ ಸಕಲ ಪ್ರಾಂತಗಳೂ ಏಕಾಭಿಪ್ರಾಯದಿಂದ ಅನುಮತಿಸಿದುವು. ಸ್ವತಃ ತಂದೆಯು ಮಗನಿಗೆ ಈ ಮಹಾ ರಾಷ್ಟ್ರಾಧಿಪತ್ಯದ ಆಡಳಿತಸೂತ್ರಗಳನ್ನು ಒಪ್ಪಿಸಿಕೊಟ್ಟ ಅಂದಿನ ದೃಶ್ಯವು ಹಿಂದೆ ಸೂರ್ಯಚಂದ್ರವಂಶಗಳ ಮಹಾ ಚಕ್ರವರ್ತಿಗಳು, ತಮ್ಮ ಮಕ್ಕಳಿಗೆ ರಾಜ್ಯಭಾರವನ್ನು ವಹಿಸುತ್ತಿದ್ದಂತಹ ಅಪೂರ್ವ ದೃಶ್ಯವನ್ನು ಸೂಚಿಸುವಂತಿದ್ದಿತು. ಮೂವತ್ತೈದು ಕೋಟಿ ಪ್ರಜಾಪರಿಪೂರ್ಣವಾದ ಈ ಅಗಾಧ ಸಾಮ್ರಾಜ್ಯದ ಮುಕುಟರಹಿತ ಸಾರ್ವಭೌಮ ಪದವಿಯನ್ನು ಸ್ವೀಕರಿಸಿ, ಅಶೇಷ ಪ್ರಜಾವರ್ಗದಿಂದ ಜಯಜಯಕಾರವನ್ನು ಸ್ವೀಕರಿಸುತ್ತಾ ಅಶ್ವಾರೋಹಿಯಾಗಿ ಮೆರವಣಿಗೆಯಲ್ಲಿ ಪ್ರಯಾಣಮಾಡಿ ಬರುತ್ತಿದ್ದ ತಮ್ಮ ವೀರ-ಧೀರ ಕುಮಾರರನ್ನು ಸಂದರ್ಶಿಸುವ ಅಪೂರ್ವ ಸುಯೋಗವನ್ನು ಪಡೆದ ತಂದೆತಾಯಿಗಳು ನಮ್ಮ ನೆಹ್ರೂ ದಂಪತಿಗಳು. ಪಂಡಿತ ಮೋತೀಲಾಲರು ಲೋಕದಲ್ಲಿನ ಇತರ ಹಲವು ಗೃಹಸ್ಥರಂತೆ ಪುತ್ರಸಂತಾನವನ್ನು ಪಡೆದರು ಮಾತ್ರವಲ್ಲ ಆ ಪುತ್ರನು ತಮ್ಮ ಕಣ್ಣೆದುರಿಗೇ, ಜಗತ್ತಿನ ಒಂದು ಮಹಾ ಸಾಮ್ರಾಜ್ಯದಲ್ಲಿ ಮಹೋನ್ನತನೆಂದು ಪೂಜಿಸಲ್ಪಡುವುದನ್ನು ನೋಡುವ ಪುಣ್ಯವನ್ನೂ ಗಳಿಸಿದರು. ಇಂತಹ ಧನ್ಯಾತ್ಮರಿನ್ನಾರುಂಟು ?

ಭಾರತ ದೇಶದ ತರುಣವೃಂದಕ್ಕೆ ಮುಖಂಡರಾದ ಪಂ. ಜವಾಹಿರ್‌ಲಾಲರ ಅಧ್ಯಕ್ಷತೆಯಲ್ಲಿ ನಡೆದ ಲಾಹೋರ್ ರಾಷ್ಟ್ರಮಹಾಸಭಾಧಿವೇಶನವು, ಮೇಲ್ಕಂಡಂತೆ ವೈಸರಾಯಿಯವರಿಂದ ಬಂದ ಪ್ರತ್ಯುತ್ತರವು ತೃಪ್ತಿಕರವಾಗಿಲ್ಲದಿದ್ದುದನ್ನು ಪರಿಭಾವಿಸಿ, ಹಿಂದಿನ ವರ್ಷ ಕಲ್ಕತ್ತಾ ನಗರದ ಅಧಿವೇಶನದಲ್ಲಿ ಠರಾಯಿಸಲ್ಪಟ್ಟಂತೆ ಸಂಪೂರ್ಣ ಸ್ವಾತಂತ್ರ್ಯಸಾಧನೆಯೇ ರಾಷ್ಟ್ರದ ಮುಖ್ಯ ಧ್ಯೇಯವಾಗಿರತಕ್ಕುದು ಎಂಬ ಮಹತ್ವದ ನಿರ್ಣಯ

ವನ್ನು ಸಭೆಯು ಮುಂದೆ ತಂದು ಚರ್ಚಿಸಿ ತೀರ್ಮಾನಿಸಿತು. ಇದು ಆಳರ ಸರ ಹೃದಯದಲ್ಲಿ ತಾಪವನ್ನುಂಟುಮಾಡಿತೆಂದು ಹೇಳಬೇಕಾದುದಿಲ್ಲ. ಒಂದಿಗೇ ಮಹಾತ್ಮಾ ಗಾಂಧಿಜೀಯವರು, ಸಿವಿಲ್ ಡಿಸ್‌ಒಬೀಡಿಯನ್ಸ್ ಎಂಬ ಕಾನೂನು ಭಂಗದ ಚಳವಳಿಯನ್ನು ಮತ್ತೆ ಪ್ರಾರಂಭಿಸಿದರು. ಪಂಡಿತ ಮೋತೀಲಾಲ ನೆಹ್ರೂಯವರು, ವೈಸರಾಯಿಯವರ ಕೌನ್ಸಿಲಿನ ತಮ್ಮ ಸದಸ್ಯತ್ವಕ್ಕೆ ರಾಜೀನಾಮೆಯನ್ನು ಕಳುಹಿಸಿ, ಕಾನೂನುಭಂಗದ ಚಳವಳಿಯಲ್ಲಿ ಮುಖ್ಯಪಾತ್ರವನ್ನು ವಹಿಸಿ ದುಡಿಯಲಾರಂಭಿಸಿದರು.

## — ಆನಂದಭವನವು - ಸ್ವರಾಜ್ಯ ಭವನವಾಯಿತು —

ಈ ಕಾಲದಲ್ಲಿ ಪಂಡಿತ ಮೋತೀಲಾಲರು ಮಾಡಿದ ಒಂದು ಕಾರ್ಯವು, ತಲೆತಲಾಂತರದವರೆಗೂ, ಅವರ ಕೀರ್ತಿಯನ್ನು ಭಾರತದೇಶದಲ್ಲಿ ಶಾಶ್ವತಗೊಳಿಸಬಲ್ಲುದಾಗಿದೆ. ಲಕ್ಷಾಂತರ ಬೆಲೆಬಾಳುವ ರಾಜಭವನಕ್ಕೆ ಸದೃಶವಾದ 'ಆನಂದಭವನ'ವೆಂಬ ಅವರ ದಿವ್ಯ ಸೌಧವನ್ನು ರಾಷ್ಟ್ರದ ಉಪಯೋಗಕ್ಕಾಗಿ ದಾನಮಾಡಿದರು. ಈ ಮಹಾದಾನವನ್ನು ರಾಷ್ಟ್ರದ ಪರವಾಗಿ ಸ್ವೀಕಾರಮಾಡಿದವರೆಂದರೆ, ಅವರ ಸಾಕ್ಷಾತು ಪುತ್ರರೇ ಆದ ಪಂಡಿತ ಜವಾಹಿರಲಾಲರು, ತಮ್ಮ ತಂದೆಯು ದೇಶಹಿತ ದೃಷ್ಟಿಯಿಂದ ಅರ್ಪಿಸುತ್ತಿರುವ ಈ ಮಹಾದಾನವನ್ನು ರಾಷ್ಟ್ರಕ್ಕಾಗಿ ಸ್ವೀಕರಿಸಿ, ಮುಂದೆ ಆದರಲ್ಲೇ ರಾಷ್ಟ್ರಮಹಾಸಭೆಯ ಕಾರ್ಯಕಲಾಪಗಳೆಲ್ಲವೂ ನಡೆಯುವ ಮುಖ್ಯ ಕಚೇರಿಯು ನೆಲೆಸಿರತಕ್ಕುದೆಂದು ನಿರ್ಣಯಮಾಡಿದರು. ಇಂತಹ ಮಹೋದಾರ ಹೃದಯರಾದ ನರಪುಂಗವರನ್ನು ಹೆತ್ತ ಮಾತಾಪಿತೃಗಳು ಎಂತಹ ಧನ್ಯರೋ!—ಈ ದಾನವು ಕ್ರಮವಾಗಿ ದಾನಪತ್ರ ಮೂಲಕವಾಗಿ ಸರ್ಕಾರದ ಕಾಯಿದೆಯನ್ನನುಸರಿಸಿ 'ರಿಜಿಸ್ಟರ್' ಆಗಿ, ಅದರ ಆಡಳಿತಕ್ಕಾಗಿ, ಪಂಡಿತ ಜವಾಹಿರಲಾಲರನ್ನೊಳಗೊಂಡ, ಒಂದು ಪಂಚಾಯಿತರ ಆಡಳಿತಕ್ಕೆ ಒಳಪಟ್ಟು, ರಾಷ್ಟ್ರಕಾರ್ಯಕ್ಕಾಗಿಯೇ ಉಪಯೋಗಿಸಲ್ಪಡುತ್ತಿದೆ.

## — ಮತ್ತೊಮ್ಮೆ ಸೆರೆಮನೆ —

ಲಾಹೋರ್ ಕಾಂಗ್ರೆಸ್ ಮಹಾಸಭೆಯ ನಿರ್ಣಯದಂತೆ, ದೇಶದಲ್ಲಿ ರಾಷ್ಟ್ರ ಜಾಗೃತಿಯು ಅತಿಶಯ ತೀಕ್ಷ್ಣತೆಯಿಂದ ನಡೆಯಸಾಗಿತು. ಸ್ವ

ರಾಜ್ಯ ಮಂತ್ರವು ಈ ವಿಶಾಲವಾದ ದೇಶದ ಮೂಲೆಮೂಲೆಯನ್ನೂ ಮು ಟ್ಟಿತು. ಮತ್ತೊಂದುವೇಳೆ ಸರ್ಕಾರವು ದೇಶನಾಯಕರನ್ನೆಲ್ಲ ಸೆರೆಮನೆಗೆ ತುಂಬಲಾರಂಭಿಸಿತು. ರಾಷ್ಟ್ರ ಮಹಾಸಭಾಧ್ಯಕ್ಷರಾದ ಪಂಡಿತ ಜವಾಹಿ ರಲಾಲರನ್ನು ೧೯೩೦ನೆಯ ಮೇ ತಿಂಗಳಲ್ಲಿ ಬಂಧಿಸಿಟ್ಟರು. ಅವರು ಸೆರೆಮ ನೆಗೆ ಹೋಗುವಾಗ ತಮ್ಮ ಸ್ಥಾನಕ್ಕೆ ತಮ್ಮ ತಂದೆಯಾದ ಮೋತೀಲಾಲರೇ ಬರತಕ್ಕದೆಂದು ಗೊತ್ತುಮಾಡಿದರು. ಪಂಡಿತ ಮೋತೀಲಾಲರು ಅಂತಹ ಮುಪ್ಪಿನಲ್ಲೂ ಬಹು ಜವಾಬುದಾರಿಯ ಆ ಕಾರ್ಯವನ್ನು ಸಂತೋಷದಿಂದ ವಹಿಸಿಕೊಂಡು, ಅತ್ಯುತ್ಸಾಹದಿಂದ ದೇಶಸೇವಾಕಾರ್ಯಗಳನ್ನು ಮಾಡುತ್ತಿ ದ್ದರು. ಅವರ ಕಾರ್ಯಗಳೂ ಸರ್ಕಾರದವರಿಗೆ ಸಹನೆಯನ್ನುಂಟುಮಾಡ ಲಿಲ್ಲವಾದುದರಿಂದ, ಅವರನ್ನೂ ಸೆರೆಹಿಡಿದು, ಆರುತಿಂಗಳ ಕಾರಾಗಾರ ವಾಸದ ಶಿಕ್ಷೆಯನ್ನು ವಿಧಿಸಿ, ನೈನಿ ಜೈಲಿನಲ್ಲಿ ಇರಿಸಿದರು.

ಈ ಸಂದರ್ಭದಲ್ಲೇ ಸರ್ ತೇಜ್ ಬಹದ್ದೂರ್ ಸಪ್ರು ಮತ್ತು ಮಿ|| ಜಯಕರ್ ಎಂಬಿಬ್ಬರು ದೊಡ್ಡ ಮನುಷ್ಯರು ಸರ್ಕಾರದವರಿಗೂ ರಾಷ್ಟ್ರ ಧುರೀಣರಿಗೂ ಮಧ್ಯಸ್ಥರಾಗಿ ಮಾತುಕಥೆಗಳನ್ನು ನಡೆಯಿಸಿ, ಎರಡು ಪಂಥ ಗಳಿಗೂ ಸಂಧಿಯನ್ನುಂಟುಮಾಡಬೇಕೆಂದು ಅಗಾಧ ಪ್ರಯತ್ನಗಳನ್ನು ಮಾಡಿದರು. ಅದು ವೈಸರಾಯ್ ಲಾರ್ಡ್ ಇರ್ವಿನ್ನರಿಗೂ ಸಮ್ಮತವಾಗಿ, ಆಗ್ಗೆ ಎರವಾಡಾ ಸೆರೆಮನೆಯಲ್ಲಿದ್ದ ಮಹಾತ್ಮ ಗಾಂಧಿಯವರೊಂದಿಗೆ ಆಲೋಚನೆ ನಡಿಸಲು ಪಂ. ಮೋತೀಲಾಲರನ್ನೂ, ಪಂ. ಜವಾಹಿರಲಾಲ ರನ್ನೂ ಎರವಾಡಾ ಸೆರೆಮನೆಗೇ ಕರೆತಂದರು.

## — ಮೃತ್ಯು —

ಜನ್ಮಾರಭ್ಯ ರಾಜಕುಮಾರರಂತೆಯೇ ಮಹದ್ವೈಭವದಲ್ಲಿ ಜೀವಿಸಿದ ಮೋತೀಲಾಲರಿಗೆ ಮೇಲೆ ಮೇಲೆ ಸೆರೆಮನೆಯ ಬಹು ಕಿರುಕುಳದ ಜೀವನಾ ನುಭವ ಪ್ರಾಪ್ತವಾದುದೂ, ಅಲ್ಲದೆ ನಿದ್ರಾಹಾರಗಳ ಲಕ್ಷ್ಯವಿಲ್ಲದೆ ಮಾಡ ಬೇಕಾದ ದೇಶಸೇವೆಯ ಅಗಾಧ ಕಾರ್ಯವು ಅವರ ಪಾಲಿಗೆ ಬಂದುದೂ ಕಾರಣವಾಗಿ, ರೋಗಪ್ರವೇಶವಾಯಿತು. ಒಡನೆ ಹಿಂದಿನಿಂದಲೂ ದೇಹದ ಲ್ಲಿದ್ದು ಆಗಾಗ ಬಾಧೆಪಡಿಸುತ್ತಿದ್ದ ಉಬ್ಬಸ ರೋಗವು ಪ್ರಕೋಪಸ್ಥಿತಿಗೆ

ಬಂದು, ಅವರನ್ನು ಹಣ್ಣು ಮಾಡಿತು. ದಿನದಿನಕ್ಕೆ ರೋಗಬಾಧೆಯು ಹೆಚ್ಚಾಗುತ್ತಿದ್ದುದರಿಂದ, ಮುಂದೆ ಅವರಿಂದ ಸೆರೆಮನೆಯ ವಾಸವು ಅಸಾಧ್ಯವೆಂದೆಣಿಸಿ, ಸರ್ಕಾರದವರೇ ಅವರನ್ನು ಬಿಡುಗಡೆಮಾಡಿದರು. ಒಡನೆ ಮೋತೀಲಾಲರು ಹವಾ ಬದಲಾವಣೆಗಾಗಿ ಮಸ್ಸೂರೀ ಎಂಬಲ್ಲಿಗೆ ಹೋದರು ಅಲ್ಲಿ ಸ್ವಲ್ಪಮಟ್ಟಿಗೆ ಮೇಲೆಂಬಂತೆ ತೋರಿ, ಪುನಃ ಉಲ್ಬಣಾವಸ್ಥೆಗೇರಿದುದರಿಂದ ಅಲ್ಲಿಂದ ಪುನಃ ಅಲಹಾಬಾದಿಗೆ ಬಂದರು. ಸ್ವಗೃಹಕ್ಕೆ ಬಂದ ತರುವಾಯ ಕಾಹಿಲೆಯು ಮತ್ತೂ ಹೆಚ್ಚಾಗಿ, ಶ್ವಾಸಕೋಶಗಳು, ಮತ್ತು ಉದರ ಭಾಗಗಳಿಗೆ ಸಂಬಂಧಿಸಿದ ರೋಗಗಳು ಪ್ರಬಲಿಸಿ, ಉಗುಳಿದರೆ ರಕ್ತ ಬೀಳುವುದೇ ಮುಂತಾದ ದುಶ್ಚಿಹ್ನೆಗಳು ಕಾಣಲಾರಂಭವಾದುವು. ತರುವಾಯ ಅವರ ಹಿತಚಿಂತಕರು ಅವರನ್ನು ಕಲ್ಕತ್ತಾಕ್ಕೆ ಕರೆದೊಯ್ದು, ಡಾ. ಸರ್. ನೀಲರತ್ನ ಸರ್ಕಾರ್ ಮತ್ತು ಡಾ. ಎ. ಸಿ. ವಕೀಲ್ ಎಂಬ ಸುಪ್ರಸಿದ್ಧ ವೈದ್ಯರ ಸ್ವಾಧೀನದಲ್ಲಿಟ್ಟರು. ತರುವಾಯ ಕೆಲವು ದಿವಸ ಕವಿರಾಜ ಶ್ಯಾಮದಾಸ ವಾಚಸ್ಪತಿ ಎಂಬ ಬಂಗಾಳೀ ವೈದ್ಯರ ಆರೈಕೆಯಲ್ಲೂ ಇದ್ದು ಚಿಕಿತ್ಸೆ ಹೊಂದಿದರು. ದಕ್ಷಿಣೇಶ್ವರ ಸಮೀಪದ ಗಂಗಾಕೂಲದಲ್ಲಿ ಒಂದು ಆರೋಗ್ಯಕರವಾದ ಸ್ಥಳದಲ್ಲಿದ್ದು, ಇನ್ನೇನು-ಸ್ವಲ್ಪ ಸ್ವಲ್ಪ ಗುಣ ಮುಖಕ್ಕೆ ಬರುತ್ತಿದೆ ಎನ್ನುತ್ತಿರುವಾಗಲೇ, ಅವರ ಸೊಸೆಯಾದ ಶ್ರೀಮತಿ ಕಮಲಾನೆಹ್ರೂಯವರನ್ನು ಸರ್ಕಾರದವರು ಸೆರೆಹಿಡಿದರೆಂಬ ವರ್ತಮಾನವು ತಿಳಿಯಿತು. ಈ ವಾರ್ತೆಯನ್ನು ಕೇಳಿ ಬಹು ವಿಷಣ್ಣವದನರಾಗಿ, ಅಲ್ಲಿಯ ಚಿಕಿತ್ಸೆಯನ್ನು ಮಾನಸಿಕಮಾಡಿ, ಅಲಹಾಬಾದಿಗೆ ಹೊರಟರು. ಅಲ್ಲಿಗೆ ಬಂದ ತರುವಾಯ ಒಂದುದಿನ-ಇಪ್ಪತ್ನಾಲ್ಕು ಗಂಟೆಗಳಕಾಲ, ಬಹು ಅಪಾಯಸ್ಥಿತಿಯಲ್ಲಿದ್ದು ಕಳೆದರು. ೧೯೩೧ನೇ ಫೆಬ್ರವರಿ ೪ನೆಯ ತಾರೀಖಿನ ವೇಳೆಗೆ ಅವರ ಸ್ಥಿತಿಯು ಬಹು ವಿಚಾರಕರವೆನ್ನಿಸಿ, ಅವರ ಆಪ್ತೇಷ್ಟರು, ವೈದ್ಯರ ಸಲಹೆಯಂತೆ ಅವರನ್ನು ಲಕ್ನೋವಿಗೆ ಎಕ್ಸ್-ರೇ (X-Ray) ಪರೀಕ್ಷೆಗಾಗಿ ಕರೆದೊಯ್ದರು.

ಅಲಹಾಬಾದಿನಿಂದ ಲಕ್ನೋವರೆಗಿನ ಪ್ರಯಾಣವು ಆಯಾಸಕರವಾಗಿಯೇ ಇದ್ದರೂ ಅದರಿಂದ ರೋಗಿಯ ಸ್ಥಿತಿಯಲ್ಲೇನೂ ಹೆಚ್ಚುಕಡಮೆಯಾಗಲಿಲ್ಲ. ಆದರೆ ಮೂರನೇ ದಿನ ಅವರನ್ನು ಆಸ್ಪತ್ರೆಗೆ ಕರೆದುಕೊಂಡು

ಹೋಗುವುದೇ ಕಷ್ಟವೆನ್ನಿಸಿತು. ಮುಖವೂ ಕೈಕಾಲುಗಳೂ ಬಾತುಕೊಂಡಂತೆ ಕಂಡುಬಂದುವು. ಐದನೆಯ ತಾರೀಖು ರಾತ್ರಿ ಡಾಕ್ಟರುಗಳೂ ದಾದಿಯರೂ ಬಹು ಜಾಗರೂಕತೆಯಿಂದ ಕಾದಿದ್ದು ನೋಡಿಕೊಂಡರು. ಮಧ್ಯರಾತ್ರಿಯ ವೇಳೆಗೆ, ಇನ್ನು ಪಂಡಿತ ಮೋತೀಲಾಲರ ಆಸೆಯಿಲ್ಲವೆಂಬಂತಹ ಚಿಹ್ನೆಗಳು ಕಾಣಸಾಗಿದುವು. ಬಂಧುಗಳಿಗೂ ರಾಷ್ಟ್ರಧುರೀಣರಿಗೂ ಈ ವಿಚಾರವು ತಿಳಿದವಡನೆ ಸರ್ವರೂ ನೂರಾರು ಸಂಖ್ಯೆಯಿಂದ ಅವರ ಹಾಸಿಗೆಯ ಬಳಿ ನೆರೆಯಲಾರಂಭಿಸಿದರು. ದೇಶಸೇವಾ ವಿಚಾರದಲ್ಲಿ ಅವರಿಗೆಲ್ಲಾ ಏನು ಸಂದೇಶವನ್ನು ಕೊಡಬೇಕೆಂದು ಅವರ ಮನಸ್ಸಿನಲ್ಲಿತ್ತೋ ಅದನ್ನು ತಿಳಿಯಬಲ್ಲವರಾರು? ಮಧ್ಯರಾತ್ರಿಯು ಕಳೆದ ಸ್ವಲ್ಪ ಹೊತ್ತಿನೊಳಗಾಗಿಯೇ ಪಂಡಿತರಿಗೆ ಸ್ಮೃತಿ ತಪ್ಪಿಹೋಯಿತು. ಸುಮಾರು ಪ್ರಾತಃಕಾಲದ ೪ ಘಂಟೆಯವರೆಗೂ ಜ್ಞಾನವು ಹಿಂದಿರುಗಬಹುದೆಂದು ನಿರೀಕ್ಷಿಸಿಕೊಂಡಿದ್ದರು. ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಇನ್ನು ಪಂಡಿತರು ಪರಲೋಕದ ಅತಿಥಿಯಲ್ಲದೆ, ಇಹಲೋಕದ ಪ್ರಜೆಯಲ್ಲವೆಂಬ ಸಂಗತಿಯು ವ್ಯಕ್ತವಾಯಿತು. ಸರಿ, ತರುವಾಯ ೬-೩೦ ಗಂಟೆಯ ಹೊತ್ತಿಗೆ ಹೆಂಡಿರು ಮಕ್ಕಳನ್ನೂ ಸಕಲ ಬಂಧುಬಾಂಧವರನ್ನೂ, ಸಹಕರ್ಮಚಾರಿಗಳನ್ನೂ, ದೇಶಬಾಂಧವರನ್ನೂ, ಹೆಚ್ಚೇನು, ಪ್ರಾಣಕ್ಕಿಂತಲೂ ಹೆಚ್ಚೆಂದು ತಿಳಿದು ಪಂಡಿತರು ಸೇವಿಸುತ್ತಿದ್ದ ದೇಶಮಾತೆಯ ಪಾದಕಮಲಗಳನ್ನೂ ಬಿಟ್ಟು ಅವರ ಪ್ರಾಣಪಕ್ಷಿಯು ಅಂತರಿಕ್ಷಕ್ಕಡರಿ ಕಣ್ಮರೆಯಾಗಿ ಹಾರಿಹೋಯಿತು. ಪಂಡಿತ ಮೋತೀಲಾಲರು ಮೃತ್ಯುವಶರಾದರು.

## ಉ ಪ ಸಂ ಹಾ ರ

ಪಂಡಿತ ಮೋತೀಲಾಲರು ದಿವಂಗತರಾದರೆಂಬ ವಾರ್ತೆಯು ಒಡನೆ ಕಾಡುಕಿಚ್ಚಿನಂತೆ ನಗರದಲ್ಲೆಲ್ಲ ವ್ಯಾಪಿಸಿತು. ತತ್ಕ್ಷಣವೇ ಸಹಸ್ರಾರು ಮಂದಿ ಆ ಮಹಾತ್ಯಾಗಿಯ ಮೃತದೇಹ ದರ್ಶನಕ್ಕಾಗಿ ಗುಂಪುಗುಂಪಾಗಿ ಬಂದರು. ಅವರ ದೇಹವನ್ನು ಲಕ್ನೋವಿನಿಂದ ಅಲಹಾಬಾದಿಗೆ ತರಬೇಕೆಂದು ನಿರ್ಧರವಾಯಿತು. ಸುಮಾರು ೧೧ ಘಂಟೆಯಮೇಲೆ, ಅವರಿಳಿದಿದ್ದ 'ಕಲಕಾಂಕರ' ಸೌಧದ ಬಳಿ ಜನಸಮೂಹವು ಅಪಾರವಾಗಿ ಸೇರಿ

ಜನಸಾಗರವೋ ಎನ್ನಿಸುವಂತಾಯಿತು. ಅಷ್ಟು ಜನಸಮೂಹವಿದ್ದರೂ ಏನೂ ಗದ್ದಲವಿಲ್ಲದೆ ಎಲ್ಲರೂ, ಮೌನವಾಗಿದ್ದು ಆ ಮಹನೀಯರ ಮೃತ ಕಳೇಬರವನ್ನು ದರ್ಶಿಸಬೇಕೆಂಬ ಉತ್ಸುಕತೆಯಿಂದ ಆಹಾರದ ಯೋಚನೆಯನ್ನೇ ಮರೆದು, ಅಲ್ಲಿ ಉರಿವ ಬಿಸಿಲಲ್ಲಿ ಬೇಯುತ್ತಾ ನಿಂತಿದ್ದರು. ಅಷ್ಟರಲ್ಲಿ ಮಹಾತ್ಮಾಜೀಯವರೂ, ಪಂ. ಜವಾಹಿರಲಾಲರೂ, ಡಾ. ಬಿಧನಚಂದ್ರ ರಾಯ್‌ಯವರೂ, ಮೋತೀಲಾಲರ ಮೃತಶರೀರವನ್ನು ಹೊತ್ತು ತಂದು ಮೋಟಾರ್ ಗಾಡಿಯಲ್ಲಿ ಇರಿಸಿದರು. ನಿಶ್ಯಬ್ದವಾಗಿದ್ದ ಅಷ್ಟು ದೊಡ್ಡ ಜನಸಮೂಹವೂ, ಆ ದೃಶ್ಯವನ್ನು ನೋಡಿದೊಡನೆಯೇ ತಡೆಯಲಾರದೆ, ಒಮ್ಮೆ ಬಿಕ್ಕಿಬಿಕ್ಕಿ ನಿಟ್ಟುಸಿರುಬಿಟ್ಟು, ಕಣ್ಣಲ್ಲಿ ಧಾರಾಳವಾಗಿ ನೀರು ಸುರಿಯುತ್ತಿರಲು, ಮತ್ತೇನೂ ಮಾಡದೆ, ಆತನ ಆ ಪವಿತ್ರದೇಹವನ್ನು ದೇಶೀಯ ಝಾಂಡಾದಿಂದಲೂ, ಮತ್ತು ಹೂಮಾಲೆಗಳಿಂದಲೂ ಮುಚ್ಚಿ ತಮ್ಮ ಕೊನೆಯ ಕಣ್ಣೀರ ಕಾಣಿಕೆಯನ್ನು ಸಮರ್ಪಿಸಿದರು.

ತರುವಾಯ, ಮೋತೀಲಾಲರ ಪತ್ನಿ ಸ್ವರೂಪರಾಣಿ ದೇವಿಯವರೂ ವ್ಯಸನಾಧಿಕ್ಯತೆಯಿಂದ ಹೊರಕ್ಕೆ ಕರೆತರಲ್ಪಟ್ಟು ಮತ್ತೊಂದು ಗಾಡಿಯಲ್ಲಿ ಕುಳಿತರು. ಒಡನೆ ಅಲ್ಲಿಂದ ಹೊರಟ ಆ ಮೋಟಾರ್ ಬಂಡಿಗಳು ಸುಮಾರು ನಾಲ್ಕು ಗಂಟೆಯಹೊತ್ತಿಗೆ ಅಲಹಾಬಾದಿಗೆ ಬಂದು ಸೇರಿದುವು. ಆ ದಿನ ಪ್ರಾತಃಕಾಲವೇ ಪಂಡಿತರ ಮರಣವಾರ್ತೆಯನ್ನು ಕೇಳಿದ ಆ ನಗರದ ನಿವಾಸಿಗಳು ಆನಂದಭವನದ ಬಳಿ ಲಕ್ಷಸಂಖ್ಯೆಯಿಂದ ನೆರೆದು ತಮ್ಮ ಧುರೀಣರನ್ನು ಗೌರವಿಸಲು ಕಾದಿದ್ದರು. ಆನಂದಭವನದಿಂದ ಮೃತ ಕಳೇಬರದ ಮೆರವಣಿಗೆಯು ಲಕ್ಷಾಂತರ ಜನಗಳ ಗುಂಪಿನೊಂದಿಗೆ ಹೊರಟಿತು. ನಗರದ ಪ್ರಮುಖ ವ್ಯಕ್ತಿಗಳೂ ಮ. ಗಾಂಧಿಯವರೇ ಮುಂತಾದ ರಾಷ್ಟ್ರಧುರೀಣರೂ ಆ ಮೆರವಣಿಗೆಯಲ್ಲಿದ್ದು, ಪ್ರಯಾಗ ಸಂಗಮಕ್ಷೇತ್ರವನ್ನು ಸೇರಿ, ಅಲ್ಲಿ ಸಾಯಂಕಾಲ ೬-೩೦ ಗಂಟೆಯ ಹೊತ್ತಿನಲ್ಲಿ ಶ್ರೀಗಂಧದ ಕೊರಡುಗಳಿಂದ ರಚಿತವಾಗಿದ್ದ ಚಿತೆಯಮೇಲೆ ಪಂಡಿತ ಮೋತೀಲಾಲರ ಶವವನ್ನಿಟ್ಟು ವಿಧ್ಯುಕ್ತರೀತಿಯಲ್ಲಿ ದಹನಕ್ರಿಯೆಯನ್ನು ನಡೆಸಿದರು.

ಆ ಕಾಲದಲ್ಲಿ ಮಹಾತ್ಮಾಗಾಂಧಿಯವರೂ, ಪಂ. ಮದನಮೋಹನ ಮಾಳವ್ಯರವರೂ ಮೋತೀಲಾಲರ ಗುಣಗಾನಮಾಡಿ, ಅವರ ವಿಷಯದಲ್ಲಿ

ಭಾರತ ಜನಾಂಗಕ್ಕಿರುವ ಅಗಾಧ ಭಕ್ತಿ ಗೌರವಗಳನ್ನು ವ್ಯಕ್ತಪಡಿಸಿದರು.

ಪಂಡಿತರ ಮರಣವಾರ್ತೆಯನ್ನು ಕೇಳಿ, ವೈಸರಾಯಿಯವರೂ, ರಾಷ್ಟ್ರ ಮಹಾಸಭಾಧಿಪತಿಗಳಾದ ಶ್ರೀ. ವಲ್ಲಭಭಾಯಿಪಟೇಲರೂ, ದೇಶದಲ್ಲಿ ಸುಪ್ರಸಿದ್ಧರೆನ್ನಿಸಿದ ಇತರ ಅನೇಕಾನೇಕಮಂದಿ ಧುರೀಣರೂ ತಮ್ಮ ವ್ಯಸನೋದ್ಗಾರಗಳನ್ನು ಅವರ ಸುಪುತ್ರರಾದ ಪಂ. ಜವಾಹಿರಲಾಲರಿಗೆ ಕಳಹಿಸಿದರು. ಅನೇಕಾನೇಕ ಪ್ರಮುಖ ನಗರಗಳಲ್ಲಿ ಮಹಾಸಭೆಗಳು ನಡೆದು ಅವರ ಮೃತಿಗಾಗಿ ಶೋಕವನ್ನು ಪ್ರಕಟಪಡಿಸಿದುವು.

ಎಷ್ಟು ವ್ಯಸನಪಟ್ಟರೇನು! ಪಂಡಿತರೇನೋ ಹೊರಟೇಹೋದರು. ಭಾರತದೇಶದ ಸದ್ಯಃ ಸ್ಥಿತಿಯಲ್ಲಿ, ರಾಜನೀತಿಯಲ್ಲಿ ಅನುಪಮ ಪಾಂಡಿತ್ಯವನ್ನು ಸಂಪಾದಿಸಿದ್ದ ಮೋತೀಲಾಲರಂತಹ ಧೀಮಣಿಯನ್ನು ಕಳೆದುಕೊಂಡು, ಭಾರತೀಯರು ದುರ್ದೈವಿಗಳೆಂಬ ತಮ್ಮ ಹೆಸರನ್ನು ಸಾರ್ಥಕಪಡಿಸಿಕೊಂಡರು.

ದಯಾಮಯನಾದ ಭಗವಂತನು, ಪಂಡಿತ ಮೋತೀಲಾಲರನ್ನು ನಮ್ಮ ದೃಷ್ಟಿಪಥದಿಂದ ಮರೆಗೊಳಿಸಿದರೇನು! ಅವರ ಸ್ಥಾನದಲ್ಲಿ ಅವರ ಪುತ್ರರತ್ನ ಪಂ. ಜವಾಹಿರಲಾಲರನ್ನು ದಯಪಾಲಿಸಿರುವನಲ್ಲವೆ? ಪಂಡಿತ ಜವಾಹಿರಲಾಲರು, ತಮ್ಮ ಪಿತೃಗಳ ಅಲೌಕಿಕ ಪ್ರಜ್ಞೆಯನ್ನು ಗಳಿಸಿ, ತಮಗೆ ಸ್ವಾಭಾವಿಕವಾಗಿರುವ ಧೈರ್ಯಸ್ಥೈರ್ಯಗಳಿಂದ ಭಾರತದೇಶ ಸೇವೆಯಲ್ಲಿ ತನುಮನ ಧನಗಳನ್ನು ಸಮರ್ಪಿಸಿ ಹೆಣಗುವಂತೆ ಕೃತನಿಶ್ಚಿತರಾಗಲಿ! ಅಷ್ಟಾದರೆ ಮೋತೀಲಾಲರ ನಷ್ಟದಿಂದ ಭಾರತಮಾತೆಗಾದ ದುಃಖಕ್ಕೆ ಉಪಶಮನವು ಲಭಿಸಿದಂತಾಗುವುದಲ್ಲವೆ?—ಮಾತ್ರವಲ್ಲ, ಪಂಡಿತ ಮೋತೀಲಾಲರ ತ್ಯಾಗರೂಪೀ ಅಮೌಲ್ಯಜೀವಿತವೂ ದೇಶೀಯರ ಕಣ್ಣೆದುರಿನಲ್ಲಿದ್ದು, ದೇಶಮಾತೆಯ ಪಾದಸೇವೆಗಾಗಿ ಸರ್ವಸ್ವವನ್ನೂ ತ್ಯಾಗಮಾಡಿ ಧನ್ಯತೆಯನ್ನು ಹೊಂದುವಂತೆ ಅವರ ಮನಸ್ಸಿನಲ್ಲಿ ಪ್ರೇರಣೆಯನ್ನು ಉಂಟುಮಾಡಲಿ. ಇಂತಹ ಧನ್ಯಜೀವಿಗಳ ಸೇವೆಯಿಂದ ಭಾರತಮಾತೆಯು ಶೀಘ್ರದಲ್ಲೇ ಬಂಧನದಿಂದ ಬಿಡುಗಡೆಹೊಂದಿ, ಸ್ವಾತಂತ್ರ್ಯ ಸೌಭಾಗ್ಯವನ್ನು ಅನುಭವಿಸುವಂತಾಗಲಿ. ಅಷ್ಟಾಗುವಂತೆ ಭಗವಾನನ ಕೃಪಾಕಟಾಕ್ಷವುಂಟಾಗಲಿ. ತಥಾಸ್ತು.

|| ಶ್ರೀರಾಮಸಹಾಯಂ ||

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

ಲೋಕದಲ್ಲಿ ವಿಶೇಷವಾಗಿ ಮುಂದುವರಿದಿರುವ ಜನಾಂಗಗಳಲ್ಲಿ ಅಮೆರಿಕಾದೇಶಿಯರು ಅಗ್ರಗಣ್ಯರೆಂದು ಪ್ರಖ್ಯಾತರಾಗಿದ್ದಾರೆಯಷ್ಟೆ! ಯಾವನೊಬ್ಬ ವ್ಯಕ್ತಿಯಾಗಲೀ ಅಥವ ಜನಾಂಗವಾಗಲೀ ಪ್ರಗತಿಮಾರ್ಗದಲ್ಲಿ ಒಂದು ಹೆಜ್ಜೆಯನ್ನು ಎತ್ತಿಡಬೇಕೆಂದರೆ ಅವನಲ್ಲಿ ಅಥವ ಆ ಜನಾಂಗಕ್ಕೆ ಸೇರಿದ ವ್ಯಕ್ತಿಗಳಲ್ಲಿ ಸ್ವತಂತ್ರತಾಭಾವವು ಉದಯಿಸುವುದೇ ಪ್ರಥಮ ಚಿನ್ಹೆಯಾಗಿ ಪರಿಣಮಿಸುತ್ತದೆ. ಇಂದು ಇಂಗ್ಲೆಂಡು ದೇಶೀಯರು ಪೃಥ್ವಿಯ ಹಲವು ಪ್ರಾಂತಗಳನ್ನು ಜಯಿಸಿ ಸ್ವಾಧೀನಗೊಳಿಸಿಕೊಂಡು ಐಶ್ವರ್ಯ ಅಧಿಕಾರ ಪ್ರತಿಷ್ಠೆಗಳನ್ನು ಗಳಿಸಿಕೊಂಡಿರುವುದಕ್ಕೆ ಈ ಸ್ವತಂತ್ರತಾಭಾವವು ಅವರಲ್ಲಿ ನೆಲೆಸಿದ್ದುದಲ್ಲದೆ ಬೇರೊಂದು ಕಾರಣವಿಲ್ಲ. ಹಾಗೆಯೇ ಅಮೆರಿಕಾದೇಶೀಯರ ಸಕಲವಿಧ ಶಕ್ತಿ ಸಾಹಸಗಳೂ, ಶುಭೇಚ್ಛೆ ಉತ್ಸಾಹಾದಿಗಳೂ, ವ್ಯಾಪಾರೋದ್ಯೋಗಗಳ ಅಭಿವೃದ್ಧಿಸ್ಥಿತಿಯೂ, ಐಶ್ವರ್ಯ ರಾಜಕೀಯ ಸ್ವಾತಂತ್ರ್ಯಾದಿಗಳೂ ಅವರಲ್ಲಿ ಪ್ರಾರಂಭದಲ್ಲಿ ಉದಯಿಸಿದ ಈ ಭಾವನಾ ಸ್ವಾತಂತ್ರ್ಯದಿಂದಲೇ ಲಭಿಸಿದುವೆಂದರೆ ಅದರಲ್ಲಿ ಅತ್ಯುಕ್ತಿಯಿಲ್ಲ. ಲೋಕದ ಯಾವ ಜನಾಂಗವು ಉನ್ನತಸ್ಥಿತಿಗೆ ಏರಬೇಕೆಂದು ಅಪೇಕ್ಷಿಸಿದರೂ ಈ ಭಾವನಾಸ್ವಾತಂತ್ರ್ಯವೆಂಬೊಂದು ಅಪೌಲ್ಯ ನಿಧಿಯನ್ನು ಪ್ರಾರಂಭದಲ್ಲಿ ಗಳಿಸಿಕೊಳ್ಳಲು ಯತ್ನಿಸತಕ್ಕುದೇ ಅತ್ಯಾವಶ್ಯಕ ಕಾರ್ಯವಾಗಿದೆ.

ಅಮೆರಿಕಾ ದೇಶೀಯರಲ್ಲಿ ಹೀಗೆ ಜನಾಂಗದ ಉನ್ನತಿಗೆ ಕಾರಣಭೂತವಾದ ಈ ಭಾವನಾ ಸ್ವಾತಂತ್ರ್ಯವನ್ನು ಗಳಿಸಿಕೊಂಡಿದ್ದ ಸುಪ್ರಸಿದ್ಧ ವ್ಯಕ್ತಿಗಳಲ್ಲಿ ನಮ್ಮ ಕಥಾನಾಯಕನಾದ ಬೆಂಜಮಿನ್ ಫ್ರಾಂಕ್‌ಲಿನ್ ಎಂಬ ಮಹನೀಯನೂ ಒಬ್ಬನು. ಈತನು ಹದಿನೆಂಟನೆಯ ಶತಮಾನದ ಆದಿಭಾಗದಲ್ಲಿ

ಅಮೆರಿಕದ ಸಂಯುಕ್ತ ಸಂಸ್ಥಾನಗಳಿಗೆ ಸೇರಿದ ಬೋಸ್ಟನ್ ಎಂಬೊಂದು ಪಟ್ಟಣದಲ್ಲಿ ಜನ್ಮವೆತ್ತಿದನು. ಈತನ ತಂದೆ ತಾಯಿಗಳು ವಿಶೇಷ ಐಶ್ವರ್ಯಸಂಪನ್ನರೂ ಅಧಿಕಾರಸಂಪನ್ನರೂ ಅಲ್ಲದೆ ಸಾಮಾನ್ಯ ಸ್ಥಿತಿಯಲ್ಲಿದ್ದವರೇ ಆದುದರಿಂದ, ಬೆಂಜಮಿನ್ನನು ಚಿಕ್ಕಂದಿನಲ್ಲಿ ವಿಶೇಷ ವಿದ್ಯಾಭ್ಯಾಸ ಮಾಡಲು ಸಾಧ್ಯವಾಗಲಿಲ್ಲ. ಆದರೂ ಈ ಮಹನೀಯನು, ತನ್ನ ಶ್ರದ್ಧೆ ಕಾರ್ಯತತ್ಪರತೆ ಋಜುಸ್ವಭಾವ ಮುಂತಾದ ಗುಣಗಣಗಳ ಪ್ರಭಾವದಿಂದ ತನ್ನ ದೇಶೀಯರಲ್ಲಿ ಮಾತ್ರವಲ್ಲದೆ ಜಗತ್ತಿನಲ್ಲೇ ಅಜರಾಮರವಾದ ಕೀರ್ತಿಯನ್ನು ಸಂಪಾದಿಸಿಕೊಂಡನು. ಅನಾಮಧೇಯನಾಗಿ ಜನ್ಮಿಸಿದ ಫ್ರಾಂಕ್ಲಿನ್ನನು ದೇಶೋದ್ಧಾರಕನೆಂಬ ಎಂದಿಗೂ ಅಳಿಯದ ಧವಳ ಯಶಸ್ಸಿಗೆ ಪಾತ್ರನಾಗಬೇಕಾದರೆ, ಆತನು ತನ್ನಲ್ಲಿ ಕಂಡುಬಂದ ಅಸುರೀ ಸ್ವಭಾವಗಳನ್ನು ಬದಿಗೊತ್ತಿ ಸತ್ಯ ಶಾಂತತೆ ವಿನಯ ಪರೋಪಕಾರ ಋಜುಸ್ವಭಾವ ಮುಂತಾದ ದೈವೀಗುಣಗಳನ್ನು ಅಭಿವೃದ್ಧಿಪಡಿಸಿಕೊಂಡುದೇ ಕಾರಣವಾಗಿದೆ. ತನ್ನಲ್ಲಿ ಕಂಡು ಬಂದ ದುರ್ಗುಣಗಳನ್ನು ಹೋಗಲಾಡಿಸಿಕೊಂಡು ಸದ್ಗುಣಗಳನ್ನು ಅಭ್ಯಾಸಿಸಲು ಈತನು ಅವಲಂಬಿಸಿದ ಮಾರ್ಗವು ನೂತನವೂ ಸರ್ವಸುಲಭವೂ ಆದುದು. ಅದನ್ನು ಆತನು ಹೇಗೆ ಅನುಸರಿಸಿ ಜಯಶಾಲಿಯಾದನೆಂಬುದು ಗ್ರಂಥಾನುಸರಣೆಯಿಂದ ವ್ಯಕ್ತವಾಗುವುದು.

ಬೆಂಜಮಿನ್ನನ ಕೀರ್ತಿಯು ದೇಶದೇಶಗಳಲ್ಲಿ ಹರಡಲು, ಆತನ ಈ ಗುಣಗಳು ಮಾತ್ರವೇ ಅಲ್ಲ; ಆತನಿಗಿದ್ದ ಭೌತಿಕ ವಿಜ್ಞಾನಶಾಸ್ತ್ರದ ಪರಿಚಯವೂ, ಆ ವಿಷಯದಲ್ಲಿ ಆತನು ಪಟ್ಟ ಪರಿಶ್ರಮವೂ ಕೂಡ ಕಾರಣಗಳಾಗಿವೆ. ಯಾವ ಕಲಾಶಾಲೆ ವಿಶ್ವವಿದ್ಯಾನಿಲಯಗಳ ಹೊಸ್ತಿಲನ್ನು ತುಳಿದು ಶಾಸ್ತ್ರಾಭ್ಯಾಸಮಾಡಿದವನಲ್ಲವಾದರೂ, ಈ ಮಹನೀಯನು ತನ್ನ ಪ್ರತಿಭಾಸಂಪನ್ನವಾದ ತೀಕ್ಷ್ಣಮತಿಯಿಂದ ಇಂದಿನ ನಾಗರಿಕತೆಗೆ ಅತಿಮುಖ್ಯ ಸಾಧನವೆಂದೆನ್ನಿಸಿರುವ ವಿದ್ಯುಚ್ಛಕ್ತಿಯ ವಿಚಾರದಲ್ಲಿ ವಿಶೇಷ ಶೋಧಗಳನ್ನು ನಡೆಯಿಸಿ, ಯೂರೋಪಿನ ಪ್ರಖ್ಯಾತ ವಿಶ್ವವಿದ್ಯಾನಿಲಯಗಳಿಂದ ಪಂಡಿತೋತ್ತಮನೆಂದು ಸನ್ಮಾನಿತನಾದನು. ತನ್ನ ಜೀವಿತಕಾಲದಲ್ಲಿ ಸರ್ವಶ್ರೇಷ್ಠ ರಾಜನೀತಿಜ್ಞನೆಂದೂ, ಈತನು ದೇಶದೇಶಗಳ ಸುಪ್ರಸಿದ್ಧ ರಾಜನೀತಿಜ್ಞರಿಂದಲೂ, ರಾಜಾಧಿರಾಜರುಗಳಿಂದಲೂ ಸನ್ಮಾನಿತನಾದನು.

ಫ್ರಾಂಕ್‌ಲಿನ್ನನ ಜೀವಿತವು ಅವನ ದೇಶೀಯರಿಗೆ ಮಾತ್ರವಲ್ಲದೆ, ದೇಶದೇಶಾಂತರಗಳವರಿಗೂ ಉಪಯುಕ್ತವಾದ ಉದಾಹರಣೆಯೂ ಮಾರ್ಗದರ್ಶಕವೂ ಆಗಿ ಪರಿಣಮಿಸುವಂತಾಗಲು ಆತನು ಮನುಷ್ಯ ಸಾಮಾನ್ಯವಾದ ಅಶಕ್ತತೆಗಳನ್ನು ನೀಗಿಸಿಕೊಂಡು, ತನ್ನಲ್ಲಿ ಸದ್ಗುಣಗಳು ಆವಿರ್ಭವಿಸುವಂತೆ ಮಾಡಿಕೊಳ್ಳಲು ಪಟ್ಟ ನಿರಂತರ ಪರಿಶ್ರಮವೂ ಒಂದು ಕಾರಣವಾಗಿದೆ. ತನ್ನ ಮಾತೃದೇಶವನ್ನು ಗುಲಾಮಗಿರಿಯಲ್ಲೇ ಇರಿಸಿರಲು ಯತ್ನಿಸುತ್ತಿದ್ದ ಬ್ರಿಟಿಷ್ ರಾಜ್ಯಾಧಿಕಾರಿಗಳೊಂದಿಗೆ ಸಂಧಾನ ನಡೆಸಿ, ಚತುರ್ವಿಧ ರಾಜನೀತಿಗಳನ್ನೂ ಉಪಯೋಗಿಸಿ ತನ್ನ ಜನ್ಮಭೂಮಿಗೆ ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಿಕೊಟ್ಟ ಈತನು ಆ ದೇಶೀಯರಿಂದ ಗೌರವಿಸಲ್ಪಡುತ್ತಿರುವುದು ಮಾತ್ರವಲ್ಲ; ಸಕಲ ದೇಶೀಯರ ಗೌರವ ಪ್ರಶಂಸೆಗಳಿಗೂ ಪಾತ್ರನಾಗಿದ್ದಾನೆ.

ಬೆಂಜಮಿನ್ ಫ್ರಾಂಕ್‌ಲಿನ್ನನು ತನ್ನ ಜೀವಿತ ಚರಿತ್ರೆಯನ್ನು ತಾನೇ ಬರೆದುಕೊಂಡಿದ್ದಾನೆ. ಆ ಜೀವಿತವನ್ನು ಓದಿದವರಿಗೆ ಆತನ ಋಜುಸ್ವಭಾವವು ಚೆನ್ನಾಗಿ ವ್ಯಕ್ತವಾಗುವಂತಿದೆ ಲೋಕದಲ್ಲಿ ಸಾಮಾನ್ಯವಾಗಿ ಆತ್ಮಶ್ಲಾಘನೆ ಪರನಿಂದೆಗಳಲ್ಲಿ ಮಗ್ನರಾಗಿರುವವರೇ ಹೆಚ್ಚಲ್ಲವೆ ? ಆದರೆ ಈತನು ಹಾಗಲ್ಲದೆ, ತನ್ನಲ್ಲಿ ಕಂಡುಬಂದ ಲೋಪಗಳನ್ನೂ, ತಾನು ಆ ದುರ್ಗುಣಗಳನ್ನು ಹೋಗಲಾಡಿಸಲು ಮಾಡಿದ ಪ್ರಯತ್ನಗಳನ್ನೂ ನಿಷ್ಕಪಟಭಾವದಿಂದ ವರ್ಣಿಸಿದ್ದಾನೆ. ತನ್ನಲ್ಲಿ ಕಂಡು ಬಂದ ದುರ್ಗುಣ ದುರಾಚರಣೆಗಳ ನಿವಾರಣೆಗಾಗಿ ಯಾವ ಮಹನೀಯನು ಮೂವತ್ತು ವರ್ಷಗಳವರೆಗೆ ಅವುಗಳೊಂದಿಗೆ ಹೋರಾಡಿ ಕಷ್ಟಪಟ್ಟನೋ, ಆತನು ಇತರರಲ್ಲಿ ಕಂಡುಬರುವ ದುರ್ಗುಣಗಳನ್ನು ಖಂಡಿಸಲಿಕ್ಕಾಗಿಯೂ, ಸತ್ಯಾನ್ವೇಷಣೆ ಸತ್ಯಸ್ಥಾಪನೆಗಳಿಗಾಗಿಯೂ, ತನ್ನ ಜೀವಿತವನ್ನೇ ಧಾರೆಯೆರೆದು ಶ್ರಮಿಸಲು ಹಿಂದೆಗೆಯದಿದ್ದನೆಂದು ಹೇಳಬೇಕಾದುದೇನು ? ಪ್ರಕೃತ ಚರಿತ್ರೆಯು, ಫ್ರಾಂಕ್‌ಲಿನ್ನನು ತಾನೇ ಬರೆದ ಆ ಆತ್ಮಕಥೆಯನ್ನನುಸರಿಸಿ ಬರೆದುದಾಗಿದೆ.

ಸಜ್ಜನರೂ, ಜ್ಞಾನಿಗಳೂ, ಭಗವದ್ಭಕ್ತರೂ, ಸತ್ಯನಿಷ್ಠರೂ, ತತ್ವಾನ್ವೇಷಿಗಳೂ ಒಂದು ಜನಾಂಗಕ್ಕೆ ಅಥವ ಒಂದು ದೇಶಕ್ಕೆ ಮಾತ್ರ ಸೇರಿದವರಲ್ಲ. ಅವರು ಅಖಿಲ ಜಗತ್ತಿನ ಸ್ವತ್ತು, ಆಸ್ತಿ, ನಿಧಿ.—ವಿಶ್ವಕುಟುಂ

ಬಿಗಳಾದ ಅವರು ಜಾತಿಕುಲಗಳೆಂಬ ಕ್ಷುದ್ರ ಸರಹದ್ದುಗಳನ್ನು ಮೀರಿ, ತಮ್ಮ ಸದ್ಗುಣ ಸನ್ನಡತೆಗಳ ಪ್ರಭಾವದಿಂದ ಅಖಿಲ ಜಗತ್ತಿನ ಆದರ್ಶ ಮೂರ್ತಿಗಳಾಗುವರು. 'ಗುಣಾಃ ಪೂಜಾಸ್ಥಾನಂಗುಣಿಷು ನ ಚ ಲಿಂಗಂ ನ ಚ ವಯಃ |' ಎಂಬೀ ಕವಿವಾಕ್ಯವು ಜಗನ್ಮಾನ್ಯವಾದುದು ಅದರಲ್ಲಿ ನ ಚ ಕುಲಃ, ನ ಚ ದೇಶಃ ಎಂಬದಾಗಿ ಹೇಳದಿದ್ದರೂ ಲೋಕವ್ಯಾಪ್ತವಾದ ಗುಣಗಳಿಗೆ ಪೂಜಾಸ್ಥಾನವನ್ನೀಯಬೇಕೆಂದು ಹೇಳಿದುದರಿಂದಲೇ ಪೂಜಾಸ್ಥಾನವು ಕಾಲಾಬಾಧಿತವಾದುದು, ದೇಶಾಬಾಧಿತವಾದುದು ಎಂಬುದು ಸಿದ್ಧವಾಗುತ್ತದೆ. ಇಂತಹ ದೇಶೋದ್ಧಾರಕರ, ಸತ್ಯನಿಷ್ಠರ, ಪರೋಪಕಾರಿಗಳ, ಪಂಡಿತೋತ್ತಮರ ಚರಿತ್ರೆಗಳನ್ನು ಉದಾರಭಾವದಿಂದ ಸಂಗ್ರಹಿಸಿ ಪಠಿಸಬೇಕಲ್ಲದೆ, ಅವರು ಪರದೇಶೀಯರು ಪರಮತೀಯರು ಎಂಬ ಸಂಕುಚಿತ ಮನಸ್ಕತೆಯಿಂದ ಮಾನಸಿಕ ಮಾಡಲಾಗದು.

ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯು ನಮ್ಮ ಬಾಲಕ-ಬಾಲಿಕೆಯರಲ್ಲೂ, ಯುವಕ-ಯುವತಿಯರಲ್ಲೂ, ಜನಸಾಮಾನ್ಯರಲ್ಲೂ ಇಂತಹ ಗುಣಗ್ರಹಣ ಶೀಲತೆಯೂ, ಉದಾರಭಾವವೂ ಉಂಟಾಗಬೇಕೆಂಬ ಭಾವನೆಯಿಂದಲೇ ಭಾರತೀಯ ಮಹನೀಯರ ಜೀವಿತಗಳೊಂದಿಗೆ ಪರದೇಶೀಯ ಮಹನೀಯರ ಜೀವಿತಗಳನ್ನೂ ಪ್ರಕಟಿಸಲು ಸಂಕಲ್ಪಿಸಿ ಯೋಗ್ಯತಾನುಸಾರ ಹೆಣಗುತ್ತಿರುವುದು. ಲೋಕವನ್ನೇ ವ್ಯಾಪಿಸಿರುವ ಆರ್ಥಿಕ ಮುಗ್ಗಟ್ಟನಿಂದ ಈಚೆಗೆ ಪುಸ್ತಕ ಪ್ರಕಟಣೆಯಲ್ಲಿ ಅನಿವಾರ್ಯವಾಗಿ ಉಂಟಾಗುತ್ತಿರುವ ಆಲಸ್ಯಭಾವವನ್ನು ದಯವಿಟ್ಟು ಕೆಲದಿನಗಳು ಮಾನಸಿಕವಮಾಡಿ, ಉದಾರ ಚರಿತರಾದ ವಾಚಕಮಹಾಶಯರು, ಎಂದಿನಂತೆಯೇ ಗ್ರಂಥಮಾಲಾ ವಿಷಯದಲ್ಲಿ ಅಭಿಮಾನವಿಟ್ಟು ಪ್ರೋತ್ಸಾಹಿಸುತ್ತಾ ಬರಬೇಕೆಂದು ಪ್ರಾರ್ಥಿಸುತ್ತೇವೆ.

ಬೆಳಗಾಂವಿ
ತಾ. ೯—೫—೧೯೩೨

ಇತಿ ಸುಜನ ವಿಧೇಯ
ಯಂ. ರಾಮರಾವ್

|| ಶ್ರೀ ರಾಮಸಹಾಯಂ ||

## ಅಮೆರಿಕಾ ದೇಶೋದ್ಧಾರಕನಾದ

# ಬೆಂಜಮಿನ್ ಫ್ರಾಂಕ್‌ಲಿನ್

## ಅಧ್ಯಾಯ ೧ "ಜನನ, ಬಾಲ್ಯ, ವಿದ್ಯಾಭ್ಯಾಸ"

ನಮ್ಮ ಮಾತೃಭೂಮಿಯಾದ ಭರತಖಂಡದಲ್ಲಿ ಜನಿಸಿ, ಜಗದುದ್ಧಾರಕ್ಕೆ ಸಹಾಯಕರಾದ ಮಹನೀಯರನೇಕರಂತೆಯೇ, ಲೋಕದ ಬೇರೆ ಬೇರೆ ದೇಶಗಳಲ್ಲಿ-ವಿವಿಧ ಕಾಲಗಳಲ್ಲಿ ಜನ್ಮವೆತ್ತಿದ ಮಹನೀಯರನೇಕರೂ ತಮ್ಮ ತಮ್ಮ ದೇಶಾಭಿವೃದ್ಧಿಗಾಗಿ ಪ್ರಯತ್ನಿಸಿ ಶ್ರಮಪಟ್ಟಿದ್ದಾರೆ. ನಮ್ಮ ದೇಶದ ಪೌರಾಣಿಕ, ಐತಿಹಾಸಿಕ, ಆಧುನಿಕ ಕಾಲಗಳಲ್ಲಿ ಜನಿಸಿದ ಅಸಂಖ್ಯ ಮಹಾ ಪುರುಷರ ಆದರ್ಶಗಳಿಂದ ಅನುಭವಕ್ಕೆ ಬಾರದ ಯಾವ ನೂತನ ಆದರ್ಶವನ್ನು ಇತರ ದೇಶಗಳ ಯಾವನೊಬ್ಬ ಮಹಾ ಪುರುಷನ ಜೀವಿತವು ವ್ಯಕ್ತಪಡಿಸಲು ಸಾಧ್ಯ, ನಮ್ಮ ದೇಶದ ಸ್ಥಿತಿಗತಿಗಳಿಗೂ ಗುಣ ನಡತೆ ಆಚಾರಗಳಿಗೂ ಆವಶ್ಯಕವಾದ ಆದರ್ಶವನ್ನು ಪರದೇಶೀಯನೊಬ್ಬನ ಆದರ್ಶದಿಂದ ನಾವು ಹೇಗೆ ಪಡೆಯಲಾದೀತು, ಎಂಬ ಮುಂತಾದ ಸಂದೇಹಗಳು ಯಾರ ಮನಸ್ಸಿನಲ್ಲಾದರೂ ಬಂದರೆ, ಬೇರೆಯವರ ಜೀವಿತಗಳನ್ನು ನಾವು ಆದರಿಸಬೇಕಾದ ಪ್ರಕೃತವೇನೆಂದು ಉಪೇಕ್ಷೆಯುಂಟಾಗದಿರಲಾರದು. ಆದರೆ, ಹಲ ಕೆಲವು ಆಚಾರವ್ಯವಹಾರಗಳೂ ವೇಷಭಾಷೆಗಳೂ, ಆಯಾ ದೇಶಕಾಲ, ಹವಾ ಮಾನಗಳು, ಪ್ರಾಕೃತಿಕ ಅನುಕೂಲತೆ ಅನಾನುಕೂಲತೆಗಳು ಮುಂತಾದುವನ್ನು ಅನುಸರಿಸಿ ಏರ್ಪಟ್ಟಿದ್ದರೂ, ಸತ್ಯ ಶಾಂತತೆ ವಿನಯ ಪರೋಪಕಾರ ಭೂತದಯೆ ಇಂದ್ರಿಯನಿಗ್ರಹ ಮುಂತಾದ-ದೇಶಕಾಲಗಳ ಗಡಿ ಪರಿಮಿತಿಗಳಿಂದ ಬದಲಾಗದಿರುವ ಸಾರ್ವದೇಶಿಕ ಸಾರ್ವಕಾಲಿಕ ಗುಣಗಳನ್ನು ಎಲ್ಲಿದ್ದರೂ ಪರಿಗ್ರಹಿಸಲು ಅಭ್ಯಂತರವೇ

ಸಿದೆ? ಕೆಸರಿನಲ್ಲಿರುತ್ತದೆಂದು ಕಮಲಪುಷ್ಪವನ್ನು ಯಾರಾದರೂ ಪರಿಗ್ರಹಿ ಸದಿರುವರೇ, ಅಥವ ವಿಶೇಷ ಮುಳ್ಳುಗಳಿಂದ ಆವೃತವಾಗಿವೆಯೆಂಬ ಕಾರ ಣದಿಂದ ಕೇದಗೆ ಮತ್ತು ಗುಲಾಬೀ ಹೂವುಗಳು ತ್ಯಾಜ್ಯಗಳಾಗುವುವೆ? ಈ ಕಾರಣದಿಂದ ಗುಣಪೂರ್ಣ ವಸ್ತುಗಳನ್ನು ಎಲ್ಲಿದ್ದರೂ ತಪ್ಪದೆ ಗ್ರಹಿಸಿ ಸೇವಿಸಬೇಕು ಎಂದು ತಿಳಿದು ಪ್ರಾಜ್ಞರು ಉದಾರಮತಿಗಳಾಗಬೇಕು

ಅಮೆರಿಕಾ ಖಂಡವು ಉತ್ತರ ಅಮೆರಿಕಾ ದಕ್ಷಿಣ ಅಮೆರಿಕಾ ಎಂದು ಎರಡು ದೊಡ್ಡ ವಿಭಾಗಗಳಾಗಿದೆ ಅವುಗಳಲ್ಲಿ ಉತ್ತರ ಅಮೆರಿಕಾ ಖಂಡ ದಲ್ಲಿ ಈಗ ನೆಲೆಸಿರುವ ಬಿಳಿಯ ಜನಗಳ ಪೂರ್ವಿಕರು, ಹದಿನೇಳನೆಯ ಶತ ಮಾನದಲ್ಲಿ ಇಂಗ್ಲೆಂಡಿನಿಂದ ಹೋಗಿ ನೆಲೆಸಿದವರು. ಹಾಗೆ ಹೋಗತಕ್ಕವ ರಿಗೆ ಆಗ ಈಗಿನಂತೆ ಅಲ್ಲಿ ದೇಶಕೋಶಗಳನ್ನು ಗಳಿಸಿ, ಪರದೇಶೀಯರನ್ನು ತಮ್ಮ ಗುಲಾಮಗಿರಿಗೆ ಒಳಪಡಿಸಿಕೊಳ್ಳಬೇಕೆಂಬ ಧ್ಯೇಯವಿರಲಿಲ್ಲ ತಮ್ಮ ಸ್ವಸ್ಥಳವಾದ ಇಂಗ್ಲೆಂಡಿನಲ್ಲಿ ಜೀವನಕ್ಕೆ ತೊಂದರೆಯುಂಟಾದುದರಿಂದ ಎಲ್ಲಾದರೂ ಸುಖವಾಗಿ ಜೀವನ ನಡೆದರೆ ಸಾಕೆಂದು ಸ್ಥಳ ಬಿಟ್ಟವರು ಕೆಲ ವರು. ಪರಕೀಯರ ಪ್ರತಿಬಂಧಕವಿಲ್ಲದೆ ತಮ್ಮ ಮನಬಂದಂತೆ ದೇವತಾ ರಾಧನೆ ಮಾಡಲು ಸ್ವಾತಂತ್ರ್ಯವಿರುವ ಸ್ಥಳ ದೊರೆತರೆ ಸಾಕೆಂದು ಜನ್ಮಭೂ ಮಿಯನ್ನು ಬಿಟ್ಟವರು ಕೆಲವರು. ಸ್ವಾರ್ಥಿಗಳಾದ ರಾಜ್ಯಾಧಿಕಾರಿಗಳ ಪ್ರಾಬಲ್ಯದಿಂದುಂಟಾದ ರಾಜಕೀಯ ಕಿರುಕುಳವನ್ನು ಅನುಭವಿಸಲಾರದೆ ಆ ದುಃಖದಿಂದ ಪಾರಾದರೆ ಸಾಕೆಂದು ಸ್ವಸ್ಥಳವನ್ನು ತ್ಯಜಿಸಿದವರು ಕೆಲ ವರು. ದ್ರವ್ಯಸಂಪಾದನೋದ್ದೇಶದಿಂದ ಆ ದೂರ ದೇಶ ಪ್ರಯಾಣವನ್ನು ಕೈಕೊಂಡು ನಡೆದವರು ಕೆಲವರು. ಹೀಗೆ ದೇಶಾಂತರ - ಖಂಡಾಂತರ ಪ್ರಯಾಣ ಮಾಡಿದವರಲ್ಲಿ ಜೋಸೈಯ ಫ್ರಾಂಕ್‌ಲಿನ್ ಎಂಬಾತನೊಬ್ಬನು. ಜೋಸೈಯನಂತೆ ನಾನಾ ಕಾರಣಗಳಿಂದ ಇಂಗ್ಲೆಂಡನ್ನು ಬಿಟ್ಟು ಹೊರಟ ಅನೇಕ ಕುಟುಂಬಗಳವರು, ೧೬೮೫ನೆಯ ಸಂವತ್ಸರದಲ್ಲಿ ಮೆಸಚಸೆಟ್ಸ್ ಎಂಬಲ್ಲಿಯ ನ್ಯೂ ಇಂಗ್ಲೆಂಡ್ ಎಂಬ ಸ್ಥಳದಲ್ಲಿ ತಂಗಿದರು.

ಬೆಂಜಮಿನ್ ಫ್ರಾಂಕ್‌ಲಿನ್‌ನ ತಂದೆಯೇ ಈ ಜೊಸೈಯ ಫ್ರಾಂಕ್‌ಲಿನ್ ಎಂಬಾತನು. ಇಂಗ್ಲಂಡನ್ನು ಬಿಟ್ಟು ಹೊರಡುವಾಗಲೇ ಈತನಿಗೆ ಮೂವರು ಮಕ್ಕಳಿದ್ದರು. ನ್ಯೂ ಇಂಗ್ಲೆಂಡಿನಲ್ಲಿ ಬಣ್ಣದ ಕೈಗಾರಿಕೆಯನ್ನು ಅವ

ಲಂಬಿಸಿ, ಹೆಂಡತಿಮಕ್ಕಳೊಂದಿಗೆ ಜೀವನ ಮಾಡಿಕೊಂಡಿದ್ದ ಫ್ರ್ಯಾಂಕ್‌ಲಿನ್ನನಿಗೆ, ಆ ಪತ್ನಿಯಲ್ಲಿ ಇನ್ನೂ ನಾಲ್ಕುಮಂದಿ ಮಕ್ಕಳಾಗಿ ತರುವಾಯ ಆಕೆಯು ಕಾಲವಾದಳು. ಮಕ್ಕಳೊಂದಿಗನಾದ ಜೊಸೈಯನು, ಪೂರ್ವ ವಯಸ್ಕನಾದುದರಿಂದ ತನ್ನ ಮಕ್ಕಳ ಸಂರಕ್ಷಣೆಗಾಗಿಯೂ, ತನ್ನ ಸಹವಾಸಕ್ಕಾಗಿಯೂ ಮತ್ತೊಬ್ಬ ಯುವತಿಯನ್ನು ಪಾಣಿಗ್ರಹಣ ಮಾಡಿಕೊಂಡನು.

ಈ ಎರಡನೆಯ ಹೆಂಡತಿಯ ಹೆಸರು ಅಬ್ಬೈಯಫ್ಲೋಲ್ಜರ್ ಎಂದು. ಈಕೆಯ ತಂದೆಯು ಆ ಪ್ರಾಂತದಲ್ಲೆಲ್ಲ ಸುಪ್ರಸಿದ್ಧನೆನ್ನಿಸಿದ್ದನು. ಈಕೆಯ ಗರ್ಭದಲ್ಲಿ ಫ್ರ್ಯಾಂಕ್‌ಲಿನ್ನನಿಗೆ ಹತ್ತು ಮಂದಿ ಮಕ್ಕಳಾದರು. ಅವನ ಎಲ್ಲಾ ಗಂಡು ಮಕ್ಕಳಲ್ಲಿ ಬೆಂಜಮಿನ್ನನೇ ಕಿರಿಯವನು. ಇವನ ತರುವಾಯ ಮತ್ತಿಬ್ಬರು ಹೆಣ್ಣುಮಕ್ಕಳಾದರು. ಈ ಹದಿನೇಳು ಮಂದಿಯಲ್ಲಿ ಹದಿಮೂರು ಮಂದಿ ಸೋದರ ಸೋದರಿಯರು ಒಟ್ಟಿಗೇ ಕುಳಿತು ಊಟಮಾಡಿದ್ದುದು ತನಗೆ ಜ್ಞಾಪಕವುಂಟೆಂದು ಬೆಂಜಮಿನ್ನನು ತನ್ನ ಆತ್ಮ ಚರಿತ್ರೆಯಲ್ಲಿ ಬರೆದಿದ್ದಾನೆ.

ಚಿಕ್ಕವಯಸ್ಸಿನಲ್ಲಿ ಬೆಂಜಮಿನ್ನನು ಅತಿಶಯ ಸೂಕ್ಷ್ಮಮತಿಯೂ, ಜ್ಞಾಪಕಶಕ್ತಿಯುಳ್ಳವನೂ ಎಂಬದಾಗಿ ಕಂಡುಬಂದುದರಿಂದ ಅವನನ್ನು ಧರ್ಮೋಪದೇಶಕನ ಉದ್ಯೋಗಕ್ಕೆ ಯೋಗ್ಯನನ್ನಾಗಿ ಮಾಡಬೇಕೆಂದು ಅವನ ತಂದೆಯ ಯೋಚನೆಯಿತ್ತು. ಆದುದರಿಂದ ಮಿಕ್ಕ ಎಲ್ಲಾ ಮಕ್ಕಳನ್ನೂ ವಿವಿಧ ಉದ್ಯೋಗಗಳನ್ನು ಕಲಿಯಲು ಉಮೇದುವಾರರಾಗಿರಲು ಕಳುಹಿಸಿದಂತೆ ಅವನನ್ನೂ ಕಳುಹಿಸದೆ, ತಂದೆಯು ಬೆಂಜಮಿನ್ನನನ್ನು ವಿದ್ಯಾಭ್ಯಾಸಕ್ಕಾಗಿ ಶಾಲೆಗೆ ಕಳುಹಿಸಿದನು. ಓದುಬರೆಹಗಳಲ್ಲಿ ಅವನಿಗಿದ್ದ ಉತ್ಸಾಹಾದಿಗಳನ್ನು ಕಂಡವರೆಲ್ಲರೂ ಅವನು ಮುಂದೆ ಘನಪಂಡಿತನಾಗುವುದರಲ್ಲಿ ಸಂಶಯವಿಲ್ಲವೆಂದು ಹೇಳುತ್ತಿದ್ದರು. ಪಾಠಶಾಲೆಗೆ ಸೇರಿದಾಗ ಬೆಂಜಮಿನ್ನನಿಗೆ ಎಂಟು ವರ್ಷ ವಯಸ್ಸು ಆ ಬಾಲಕನು ಉಪಾಧ್ಯಾಯರಲ್ಲಿ ಭಯಭಕ್ತಿಗಳನ್ನಿಟ್ಟು, ಅವರಿಗೆ ವಿಧೇಯನಾಗಿ, ಅವರ ಆಜ್ಞೆಗಳನ್ನು ಗಮನಿಸಿ, ಕೊಟ್ಟ ಪಾಠಗಳನ್ನು ತಪ್ಪದೆ ಅಭ್ಯಸಿಸಿ, ಶಾಲೆಗೆ ಸೇರಿದ ಕೆಲವು ದಿನಗಳೊಳಗಾಗಿ, ತನ್ನ ತರಗತಿಯಲ್ಲಿ ಮೊದಲನೆಯವನಾದನು. ಉಪಾಧ್ಯಾಯರಿಗೆ ಆ ಚಿಕ್ಕವನ ಚಟುವಟಿಕೆಯನ್ನು ಕಂಡು ಅತ್ಯಾನಂದವಾಗಿ

ಒಡನೆ ಅವನನ್ನು ಎರಡನೆಯ ತರಗತಿಗೆ ಹಾಕಿದರು. ಬೆಂಜಮಿನನು ಆ ತರಗತಿಯಲ್ಲೂ ಮೊದಲನೆಯವನಾದನು. ಆ ವರ್ಷದ ಕೊನೆಯಲ್ಲಿ ಅವನನ್ನು ಮೂರನೆಯ ವರ್ಗಕ್ಕೆ ಕಳುಹಿಸಿದರು ತಮ್ಮ ಚಿಕ್ಕ ಮಗನು ಪಾಠಶಾಲೆಯಲ್ಲಿ ಪಡೆಯುತ್ತಿದ್ದ ಈ ಬಗೆಯ ಉತ್ತೇಜನಕ್ಕಾಗಿ ಅವನ ತಾಯಿ ತಂದೆಗಳು ಅತಿಶಯ ಸಂತೋಷ ಹೊಂದಿದರೆಂದು ಹೇಳಬೇಕಾದುದೇನು? ವಿದ್ಯಾಭ್ಯಾಸದಲ್ಲಿ ಅಷ್ಟು ಉತ್ಸಾಹಶಾಲಿಯಾಗಿ ಮುಂದರಿಯುತ್ತಿದ್ದರೂ, ಜೊಸ್ಸೈಯನ ಬಡತನವು ಆ ಬಾಲಕನನ್ನು ವಿದ್ಯಾಭ್ಯಾಸಕ್ಕಾಗಿಯೇ ಬಿಟ್ಟಿರಲು ಅವಕಾಶ ಕೊಡಲಿಲ್ಲ. ಬರುಬರುತ್ತ ಕುಟುಂಬ ಭರಣವು ಕಠಿಣವೆನ್ನಿಸುತ್ತ ಬರಲು, ಜೊಸ್ಸೈಯನು ಅಕ್ಷರ ವಿದ್ಯಾಭ್ಯಾಸವಾಗಲೀ ಅಥವ ಧರ್ಮೋಪದೇಶಕನ ಉದ್ಯೋಗವಾಗಲೀ ದ್ರವ್ಯಸಂಪಾದನೆಗೆ ಅಷ್ಟು ಯೋಗ್ಯವಾದುವಲ್ಲವೆಂದು ತಿಳಿದು, ಮಗನನ್ನು ಪಾಠಶಾಲೆಯಿಂದ ಬಿಡಿಸಿಬಿಟ್ಟನು. ಅಷ್ಟು ಚಿಕ್ಕವಯಸ್ಸಿನಲ್ಲೇ ಮಗನನ್ನು ನಿರುದ್ಯೋಗಿಯನ್ನಾಗಿರಿಸಲಿಕ್ಕಾದರೂ ಮನಸ್ಸು ಒಡಂಬಡಲಿಲ್ಲ. ಆಗ ವ್ಯವಹಾರವನ್ನು ಸಾಗಿಸುವ ಮಟ್ಟಿಗಾದರೂ ಓದುಬರೆಹಗಳನ್ನು ಕಲಿತಿರಲೆಂದು ಬೇರೊಂದು ಪಾಠಶಾಲೆಗೆ ಕಳುಹಿಸಿದನು. ಅಲ್ಲಿ ಕೇವಲ ಓದುಬರೆಹ ಲೆಕ್ಕಗಳನ್ನು ಮಾತ್ರವೇ ಕಲಿಸುತ್ತಿದ್ದರು. ಅಲ್ಲಾದರೂ ತಕ್ಕಷ್ಟು ಕಾಲವಿದ್ದು ಕಲಿಯಲು ಆ ಬಾಲಕನಿಗೆ ಅನುವಾಗಲಿಲ್ಲ. ಒಂದೇ ಒಂದು ವರ್ಷಕಾಲ ಅಲ್ಲಿ ಕಲಿಯುವಷ್ಟರಲ್ಲಿ ಜೊಸ್ಸೈಯನು ಅವನನ್ನು ಅಲ್ಲಿಂದಲೂ ಬಿಡಿಸಿಬಿಟ್ಟನು. ಆ ಬಾಲಕನಿಗೆ ಚಿಕ್ಕಂದಿನಿಂದಲೂ ಗಣಿತದಲ್ಲಿ ಅಪೇಕ್ಷೆಯಿರಲಿಲ್ಲವಾಗಿ, ಈ ಪಾಠಶಾಲೆಯಲ್ಲಿ ಅವನು ಓದುವಿಕೆ ಮತ್ತು ಬರೆಯುವಿಕೆಗಳನ್ನು ಮಾತ್ರ ಸ್ವಲ್ಪಮಟ್ಟಿಗೆ ಕಲಿತನು. ಅವನ ಕ್ರಮ ವಿದ್ಯಾಭ್ಯಾಸವೆಂಬುದು ಇಷ್ಟಕ್ಕೇ ಕೊನೆಯಾಯಿತು. ಇಷ್ಟು ಚಿಕ್ಕವಯಸ್ಸಿನಲ್ಲೇ ವಿದ್ಯಾಭ್ಯಾಸಕ್ಕೆ ಹೀಗೆ ತೊಂದರೆಗಳೊದಗಿ ಮನೆಯಲ್ಲಿ ಕುಳಿತ ಬಾಲಕನು, ಪಂಡಿತೋತ್ತಮನೆಂದು ವಿಶ್ವವಿದ್ಯಾನಿಲಯಗಳಿಂದ ಸನ್ಮಾನಿತನಾದನೆಂದರೆ, ಆತನ ಸ್ವಯಂ ಪರಿಶ್ರಮವೂ ಪ್ರತಿಭೆಯೂ ಎಷ್ಟುಮಟ್ಟಿನವೆಂಬುದನ್ನು ಊಹಿಸಲಾದೀತೆ?



*

## ಅಧ್ಯಾಯ ೨ "ಮುದ್ರಣಾಲಯ ಪ್ರವೇಶ"

ಪಾಠಶಾಲೆಯನ್ನು ಬಿಟ್ಟಾಗ ಬೆಂಜಮಿನ್ನನಿಗೆ ಹತ್ತು ವರ್ಷ ವಯಸ್ಸು. ಓದು ಬಿಟ್ಟ ಆ ಬಾಲಕನು ಮನೆಯಲ್ಲಿ ತಂದೆಯ ಕೆಲಸಕ್ಕೆ ಸಹಾಯಕನಾಗಿ ಕೆಲಸಮಾಡತೊಡಗಿದನು. ಜೊಸೈಯನು ಆಗ ಹಿಂದೆ ಮಾಡುತ್ತಿದ್ದ ಬಣ್ಣದ ಕೈಗಾರಿಕೆಯಿಂದ ಜೀವನ ನಡೆಯುವುದಿಲ್ಲವೆಂದು ಅದನ್ನು ಬಿಟ್ಟು, ಮೇಣದ ಬತ್ತಿಗಳನ್ನು ತಯಾರಿಸುವ ಉದ್ಯೋಗಮಾಡುತ್ತಿದ್ದುದರಿಂದ ಬಾಲಕನೂ, ಆ ಉದ್ಯೋಗಕ್ಕೆ ಸಂಬಂಧಿಸಿದ ಮೇಣದ ಬತ್ತಿಯ ಅಳತೆಗೆ ನೂಲನ್ನು ಕತ್ತರಿಸುವುದು, ಕರಗಿದ ಮೇಣವನ್ನು ಅಚ್ಚಿಗೆ ತುಂಬುವುದು ಮುಂತಾದ ಚಿಕ್ಕಪುಟ್ಟ ಕೆಲಸಗಳನ್ನೇ ಮಾಡುತ್ತಿದ್ದನು ಆದರೆ ಚತುರಮತಿಯ ಆ ಬಾಲಕನಿಗೆ ಒಂದೇ ಕಡೆಯಲ್ಲಿ ಕುಳಿತು ಮಾಡಬೇಕಾಗಿದ್ದ ಆ ಕೆಲಸಗಳು ರುಚಿಸುತ್ತಿರಲಿಲ್ಲ ಸಾಲದುದಕ್ಕೆ ಸಮೀಪದಲ್ಲೇ ಸಮುದ್ರವಿದ್ದುದರಿಂದ ದಿನದಿನಕ್ಕೆ ಈಜುವಿಕೆ ದೋಣಿ ನಡೆಯಿಸುವಿಕೆ ಮುಂತಾದ ಆಟಗಳಲ್ಲಿ ಆಸಕ್ತಿ ಹೆಚ್ಚತೊಡಗಿತು. ಅವನ ಸಂಗಡಿಗರಲ್ಲಿ, ಆ ಆಟಪಾಟಗಳಲ್ಲಿ ಅವನನ್ನು ಮೀರಿಸಿದವರೇ ಇರಲಿಲ್ಲ. ಆದುದರಿಂದ ಅವರು ಯಾವಾಗಲೂ ಇವನನ್ನೇ ತಮ್ಮ ನಾಯಕನನ್ನಾಗಿ ಆರಿಸಿಕೊಳ್ಳುತ್ತಿದ್ದರು.

ಚಟುವಟಿಕೆಯುಳ್ಳ ಹುಡುಗರು ತುಂಟರಾಗಿರುವುದು ಸ್ವಾಭಾವಿಕವಷ್ಟೆ! ಬೆಂಜಮಿನ್ನನೂ ಅನೇಕವೇಳೆ ಆಟಕ್ಕಾಗಿ ತನ್ನ ಸ್ನೇಹಿತರನ್ನು ಇಕ್ಕಟ್ಟಿನಲ್ಲಿ ಸಿಕ್ಕಿಸಿ ಕಿರುಗುಟ್ಟಿಸುತ್ತಿದ್ದನು ಒಂದಾನೊಂದು ಸಂದರ್ಭದಲ್ಲಿ ತಾವು ಮೀನು ಹಿಡಿಯುತ್ತಿದ್ದ ಉಪ್ಪಿನ ನೋಳೆಯಲ್ಲಿ ಕೆಸರಾಗುತ್ತಿದ್ದುದನ್ನು ತಪ್ಪಿಸಲಿಕ್ಕಾಗಿ ಸಮೀಪದಲ್ಲಿದ್ದ ಮನೆಯ ಯಜಮಾನನೊಬ್ಬನು ಹಾಕಿಸಿದ್ದ ಕಲ್ಲುಗಳನ್ನೆಲ್ಲಾ ತೆಗೆದುಕೊಂಡು ಬೆಂಜಮಿನ್ನನು ತನ್ನ ಗೆಳೆಯರ ಸಹಾಯದಿಂದ ಕಟ್ಟೆಯನ್ನು ಹಾಕಿಬಿಟ್ಟನು. ಮಾರನೆಯ ದಿನ ಆ ಕಲ್ಲುಗಳ ಮಾಲೀಕನು, ಹುಡುಗರ ಈ ಚೇಷ್ಟೆಯನ್ನು ಕುರಿತು ಅವರ ತಂದೆತಾಯಿಗಳಿಗೆ ತಿಳಿಸಿ ಶಿಕ್ಷೆ ಮಾಡಿಸಿದನು. ಬೆಂಜಮಿನ್ನನು ಆಗಲೂ ಸಹ ತಾವು ಮಾಡಿದ ಕೆಲಸವು, ಉಪಯುಕ್ತವಾದುದೆಂದೇ ವಾದಿಸಿದನು.

ಆದರೆ ಅದು ಉಪಯುಕ್ತವಾದುದಾದರೂ ನ್ಯಾಯ ಸಮ್ಮತವಾದುದಲ್ಲ ವೆಂದು ತರುವಾಯ ತಿಳಿಯಿತೆಂದು ತನ್ನ ಸ್ವೀಯ ಚರಿತ್ರೆಯಲ್ಲಿ ಹೇಳಿದ್ದಾನೆ

ಒಂದೆರಡು ವರ್ಷಗಳಕಾಲ ತಂದೆಯ ಬಳಿ ಆತನ ಕೆಲಸದಲ್ಲಿ ಸಹಾಯಕನಾಗಿರುವವೇಳೆಗೇ ಬೆಂಜಮಿನ್ನನು ಬೇಸತ್ತುಹೋದನು. ತನ್ನ ಮಗನಿಗೆ ಆ ಕೆಲಸವು ಪ್ರಿಯವಾಗಲಿಲ್ಲವೆಂದರಿತು ಜೊಸೈಯನು, ಮರಗೆಲಸ, ಇಟ್ಟಿಗೆ ಕೊಯ್ಯುವಿಕೆ, ಹಿತ್ತಾಳೆ ತಾಮ್ರಗಳಲ್ಲಿ ಪಾತ್ರೆ ಮುಂತಾದುವುಗಳನ್ನು ಮಾಡುವಿಕೆ ಮುಂತಾದ ಹಲವು ಬಗೆಯ ಕೆಲಸಗಾರರ ಬಳಿಗೆ ಅವನನ್ನು ಕರೆದೊಯ್ದು ಅವರ ಪರಿಚಯಮಾಡಿಸಿದನು ಆದರೆ ಆ ಯಾವ ಉದ್ಯೋಗವನ್ನೂ ಅವನು ದೃಢವಾಗಿ ಅವಲಂಬಿಸಿ ಪೂರ್ತಿಯಾಗಿ ಕಲಿಯಲಿಲ್ಲ. ಮತ್ತೆ ಕೆಲವು ದಿನಗಳು ಕಳೆದುವು ಚಾಕು ಕತ್ತರಿಗಳನ್ನು ಮಾಡುವ ಲಾಭಕರವಾದ ಉದ್ಯೋಗವನ್ನಾದರೂ ಕಲಿಯಲೆಂದು, ಜೊಸೈಯನು ತನ್ನ ಮಗನನ್ನು ಆ ಕೆಲಸಗಾರರ ಬಳಿಗೆ ಕರೆದೊಯ್ದುಬಿಟ್ಟನು. ಆದರೆ ಆ ಉದ್ಯೋಗಶಿಕ್ಷಣಕ್ಕೇ ವಿಶೇಷ ಹಣಕೊಡಬೇಕಾದ ಆವಶ್ಯಕತೆ ತೋರಿದುದರಿಂದ ತತ್ಕಾಲಕ್ಕೆ ಆ ಯೋಚನೆಯನ್ನೂ ಬಿಡಬೇಕಾಯಿತು. ಮುಂದೆ ಏನು ಮಾಡಬೇಕೆಂಬುದು ತೋರಲಿಲ್ಲ.

ಹೀಗೆ ಯಾವ ಉದ್ಯೋಗವೂ ಸರಿಬೀಳದೆ, ಬೆಂಜಮಿನ್ನನು ಮುಂದೆ ಅನುಸರಿಸಬೇಕಾದ ಮಾರ್ಗವೇ ಇಂಥದೆಂದು ಗೊತ್ತಾಗದೆ ಇದ್ದುದೇ, ಅವನ ಜೀವನ ಪಥವಿಂಥದೆಂದು ನಿರ್ಣಯವಾಗಲು ಒಂದು ಅವಕಾಶವನ್ನು ಕಲ್ಪಿಸಿಕೊಟ್ಟಿತೆಂದು ತೋರುತ್ತದೆ ಕೈಗೊಂದು ಕೆಲಸವಿಲ್ಲದೆ, ಮಾಡುವ ಕಾರ್ಯವೇನೆಂದು ತೋರದೆ ಮನೆಯಲ್ಲಿ ಕುಳಿತ ಬೆಂಜಮಿನ್ನನು, ಏನು ಮಾಡಿ ಹೊತ್ತು ಕಳೆಯುತ್ತಿದ್ದನೆಂದು ಗಮನಿಸುವುದು ಆವಶ್ಯಕ. ಚಿಕ್ಕಂದಿನಿಂದಲೂ, ಪುಸ್ತಕ ಪಠನೆಯಲ್ಲಿ ಅವನಿಗಿದ್ದ ಅತ್ಯುತ್ಕಟವಾದ ಅಪೇಕ್ಷೆಯನ್ನು ಪೂರ್ಣಮಾಡಿಕೊಳ್ಳಲು, ಈ ಕಾಲವು ಅತ್ಯುತ್ತಮವಾದುದೆಂದು ಅವನಿಗೆ ವಿಶೇಷ ಸಂತೋಷಪ್ರದವಾಯಿತು. ಆಗಲಾಬಾಲಕನು ಒಂದು ನಿಮಿಷವನ್ನೂ ವ್ಯರ್ಥವಾಗಿ ಕಳೆಯದೆ, ತನ್ನ ಕೈಗೆ ಸಿಕ್ಕಿದ ಪುಸ್ತಕಗಳನ್ನೆಲ್ಲ ಓದುತ್ತ. ತನಗೆ ದೊರೆತ ದುಡ್ಡಿನಲ್ಲಿ ಒಂದು ಕಾಸನ್ನೂ

ಪೋಲು ಮಾಡದೆ ಪುಸ್ತಕಗಳನ್ನು ಕೊಂಡು ಓದಿ ತನ್ನ ಜ್ಞಾನಭಂಡಾರವನ್ನು ಬೆಳೆಸಿಕೊಳ್ಳುತ್ತಿದ್ದನು. ಹೀಗೆ ಗ್ರೀಸ್ ರೋಂ ಮುಂತಾದ ದೇಶಗಳ ಸುಪ್ರಸಿದ್ಧ ಪುರುಷರ ಜೀವಿತಗಳನ್ನೂ ಶೂರರಾದ ನಾಯಕರ ಸಾಹಸವೃತ್ತಾಂತಗಳನ್ನೂ ಓದಿ, ತಾನೂ ಅವರಂತೆಯೇ ಸುಪ್ರಸಿದ್ಧನಾಗಬೇಕೆಂಬ ಮಹತ್ವಾಕಾಂಕ್ಷೆಯಿಂದ ಹಂಬಲಿಸುತ್ತಿದ್ದನು. ಓದು ಬರೆಹಗಳಲ್ಲಿ ಅವನಿಗಿದ್ದ ಈ ಆಸಕ್ತಿಯನ್ನು ಕಂಡು ಅವನ ತಂದೆಯು, ಮುದ್ರಣಕಾರ್ಯವು ಒಂದು ವೇಳೆ ಅವನಿಗೆ ಯೋಗ್ಯವೆನ್ನಿಸಬಹುದೇ ಎಂದು ಶಂಕಿಸಿದ್ದನು; ಮತ್ತು ಆ ವೇಳೆಗೆ ಸರಿಯಾಗಿ ಅವನ ಅಣ್ಣನಾದ ಜೇಮ್ಸ್ ಎಂಬುವನು ಇಂಗ್ಲೆಂಡಿನಿಂದ ಮುದ್ರಣಕಾರ್ಯಕ್ಕೆ ಅವಶ್ಯಕವಾದ ಸಾಮಗ್ರಿಗಳನ್ನೆಲ್ಲ ತೆಗೆದುಕೊಂಡು ಬಂದಿದ್ದುದರಿಂದ ಜೊಸೈಯನು ಅವನನ್ನು ಆ ಕೆಲಸವನ್ನು ಕಲಿಯಲು ಬಿಡುವುದೇ ಕ್ಷೇಮಕರವೆಂದೆಣಿಸಿದನು ಬೆಂಜಮಿನ್ನನು ತಂದೆಯ ಆಜ್ಞಾನುಸಾರ ತನ್ನ ಅಣ್ಣನೊಂದಿಗೆ ಯುಕ್ತವಾದ ಕರಾರು ಮಾಡಿಕೊಂಡು, ತನ್ನ ಹನ್ನೆರಡನೆಯ ವಯಸ್ಸಿನಲ್ಲಿ ಕೆಲಸಕ್ಕೆ ಸೇರಿದನು. ಈ ಕರಾರಿನಿಂದ ಅವನು ತನ್ನ ಇಪ್ಪತ್ತೊಂದನೆಯ ವಯಸ್ಸಿನವರೆಗೆ ತನ್ನ ಅಣ್ಣನ ಅಧೀನವನ್ನು ಬಿಟ್ಟು ಮತ್ತೆಲ್ಲಿಗೂ ಹೋಗುವಂತಿರಲಿಲ್ಲ. ಕೊನೆಯ ವರ್ಷದಲ್ಲಿ ಮಾತ್ರವೇ ಅವನಿಗೆ ಕೂಲಿಯು ದೊರೆಯಬೇಕೆಂದೂ, ಅವರೆಗೆ ಅವನು ಉಮೇದುವಾರನಾಗಿ ಕೆಲಸಮಾಡಿಕೊಂಡಿರಬೇಕೆಂದೂ ಏರ್ಪಾಡಾಗಿದ್ದಿತು. ಬೆಂಜಮಿನ್ನನು ಈ ಕರಾರುಪತ್ರದಂತೆ ತನ್ನ ಅಣ್ಣನಲ್ಲಿ ಸೇರಿ ಕೆಲಸಮಾಡತೊಡಗಿದನು.

ಹೀಗೆ ಮುದ್ರಣಾಲಯದ ಕೆಲಸಕ್ಕೆ ಸೇರಿದ ಬೆಂಜಮಿನನು, ದಿನವೂ ಕೆಲಸದ ವೇಳೆಯಲ್ಲಿ ಶ್ರದ್ಧೆಯಿಂದ ಆ ಉದ್ಯೋಗಕ್ಕೆ ಸಂಬಂಧಿಸಿದ ಕೆಲಸಗಳಲ್ಲೆಲ್ಲಾ ಅನುಭವ ಪಡೆದು, ಮಿಕ್ಕ ವೇಳೆಯನ್ನೆಲ್ಲ ತನಗೆ ಅತಿಶಯ ಪ್ರೀತಿಕರವೆನ್ನಿಸಿದ್ದ ಗ್ರಂಥವ್ಯಾಸಂಗದಲ್ಲಿ ಕಳೆಯತೊಡಗಿದನು. ಪರರಿಂದ ಎರವಲಾಗಿ ತಂದ ಪುಸ್ತಕಗಳನ್ನು ಅನೇಕವೇಳೆ ಮಾರನೆಯ ಪ್ರಾತಃಕಾಲವೇ ವಾಪಸು ಕೊಡಬೇಕಾಗುತ್ತಿದ್ದುದರಿಂದ ರಾತ್ರಿಯೆಲ್ಲಾ ನಿದ್ರೆಗೆಟ್ಟು ಓದಿ ಮುಗಿಸಿಬಿಡುತ್ತಿದ್ದನು. ಪ್ರಾರಂಭಕ್ಕೆ ವಿಶೇಷವಾಗಿ ಅವನ ಗಮನವನ್ನೆಳೆದುವು ಪದ್ಯ ಗ್ರಂಥಗಳು. ಅವುಗಳ ಪಠನೆಯಿಂದ

ಕೆಲವು ದಿನಗಳಮೇಲೆ ಅವನಿಗೆ ತಾನೂ ಪದ್ಯರಚನೆಮಾಡಬೇಕೆಂದು ಇಚ್ಛೆಯಾಯಿತು. ತನ್ನ ತಮ್ಮನಲ್ಲಿದ್ದ ಈ ಕವಿತಾ ಚಾತುರ್ಯವನ್ನು ಕಂಡ ಜೇಮ್ಸನು, ಅವುಗಳನ್ನು ಛಾಪಿಸಿ ಪ್ರಕಟಿಸಿದರೆ ಲಾಭದಾಯಕವಾಗಬಹುದೆಂದೆಣಿಸಿ, ಲಾವಣಿಪದಗಳಂತಹ ಚಿಕ್ಕಚಿಕ್ಕ ಕವಿತೆಗಳನ್ನು ರಚಿಸಲು ಅವನನ್ನು ಪ್ರೋತ್ಸಾಹಗೊಳಿಸಿದನು. ಆ ಪ್ರೋತ್ಸಾಹದಿಂದ ಉಬ್ಬಿದ ಬೆಂಜಮಿನ್ನನು ಆಗತಾನೇ ಜನಗಳಲ್ಲಿ ಬಹು ಉದ್ವೇಗವನ್ನುಂಟುಮಾಡಿದ್ದ ಒಂದಾನೊಂದು ಹಡಗು ಮುಣುಗಿದ ಅನಾಹುತದ ಕಥಾನಕವನ್ನೂ ಮತ್ತೊಂದು ವಿನೋದಕರ ವಿಚಾರವನ್ನೂ ಲಾವಣಿಗಳಾಗಿ ರಚಿಸಿಕೊಟ್ಟನು. ಅವುಗಳನ್ನು ತನ್ನ ಮುದ್ರಣಾಲಯದಲ್ಲಿ ಛಾಪಿಸಿದ ಜೇಮ್ಸನು ಆ ಪುಸ್ತಕಗಳನ್ನು ಆ ಪಟ್ಟಣದ ಬೀದಿಗಳಲ್ಲಿ ಮಾರಲು ಬೆಂಜಮಿನನ್ನೇ ಕಳುಹಿಸಿದನು. ನವೀನ ಮಾದರಿಯ ಆ ಕವಿತೆಗಳು ಒಂದು ಬಗೆಯಿಂದ ಓದುಗರನ್ನು ಆಕರ್ಷಿಸಿದುವಾದರೂ ಆ ಕಾರ್ಯವು ಅವನ ತಂದೆಗೆ ತೃಪ್ತಿಕರವಾಗಲಿಲ್ಲ. ಲೋಕದಲ್ಲಿ ಕವಿತಾಲೇಖಕರೆಲ್ಲರಿಗೂ ದಾರಿದ್ರ್ಯವು ತೌರುಮನೆಯಾಗಿರುವುದೆಂಬುದು ಆತನ ಅಭಿಪ್ರಾಯವಾಗಿದ್ದುದರಿಂದ ಆ ವೃದ್ಧನು ಬೆಂಜಮಿನ್ನನ ಕವಿತಾ ಲೇಖನವನ್ನೂ ಆ ಬಗೆಯ ಪುಸ್ತಕಗಳ ಮಾರುವಿಕೆಯನ್ನೂ ಆಕ್ಷೇಪಿಸಿದನು. ಬೆಂಜಮಿನನಿಗೂ ಅದು ಯುಕ್ತವಾಗಿ ತೋರಲಿಲ್ಲ. ಆದರೆ ಗದ್ಯಲೇಖನದ ವಿಷಯದಲ್ಲಿ ಅವನಿಗಿದ್ದ ಉತ್ಸಾಹವು ಕುಂದಿರಲಿಲ್ಲ. ಮುಂದೆ ಅದನ್ನೇ ಉತ್ಕೃಷ್ಟರೀತಿಯಿಂದ ತಿದ್ದಿ-ಹೆಚ್ಚಿಸಿಕೊಂಡನು.

ಗದ್ಯಲೇಖನಗಳನ್ನು ಬರೆವ ಅಭ್ಯಾಸಕ್ಕೆ ಒಂದು ಬಗೆಯ ಅನುಕೂಲವು ಅವನಿಗೆ ಈ ಕಾಲದಲ್ಲೇ ದೊರೆಯಿತು. ಆ ಊರಿನಲ್ಲೇ ಜ್ಯಾನ್ ಕಾಲಿನ್ಸ್ ಎಂಬೊಬ್ಬ ಹುಡುಗನಿದ್ದನು. ಅವನೂ ಬೆಂಜಮಿನನಂತೆಯೇ ಪುಸ್ತಕ ವಾಚನದಲ್ಲಿ ವಿಶೇಷ ಉತ್ಸಾಹಿಯಾಗಿದ್ದನು. ಈ ಇಬ್ಬರಿಗೂ ಸ್ನೇಹವಾಗಲು, ಅವರು ತಾವು ಓದಿದ ಗ್ರಂಥಗಳ ವಿಷಯ ವಿಷಯಾಂತರಗಳನ್ನು ತೆಗೆದುಕೊಂಡು ಅನೇಕವೇಳೆ ಚರ್ಚಿಸಲಾರಂಭಿಸಿದರು. ಬೆಂಜಮಿನನಲ್ಲಿದ್ದ ವಾದಮಾಡುವ ಶಕ್ತಿಯು ಈ ಮೂಲಕ ಬೆಳೆಯಲು ಅವಕಾಶವಾಯಿತು. ಕಾಲಿನ್ಸನ ವಾಗ್ವಿಜೃಂಭಣೆಯೂ ಶಬ್ದಸಂಪತ್ತಿಯೂ ಪ್ರಶಂ

ಸಾರ್ಹವಾಗಿದ್ದುವು. ಒಂದಾನೊಂದುವೇಳೆ ಸ್ತ್ರೀಯರು ವಿದ್ಯಾಭ್ಯಾಸಕ್ಕೆ ಅರ್ಹರೇ ಎಂಬ ವಿಚಾರವು ಅವರಿಬ್ಬರಲ್ಲಿ ಚರ್ಚೆಗೆ ವಿಷಯವಾಯಿತು. ಕಾಲಿನ್ಸನು ಸ್ತ್ರೀಯರು ವಿದ್ಯಾಭ್ಯಾಸ ಮಾಡಲು ಅನರ್ಹರು, ಅಪಾತ್ರರು, ಅವರ ವಿದ್ಯಾಭ್ಯಾಸವು ಅನುಪಯೋಗಕಾರಿ ಎಂದು ಮುಂತಾಗಿ ವಾದಿಸಿದನು. ಬೆಂಜಮಿನನದು ಅದಕ್ಕೆ ವಿರುದ್ಧ ಪಕ್ಷವಾಯಿತು ಸ್ತ್ರೀಯರಿಗೆ ವಿದ್ಯಾಭ್ಯಾಸಮಾಡಿಸುವುದು ಯುಕ್ತ, ನ್ಯಾಯವಾದುದು ಮಾತ್ರವಲ್ಲ, ಉಪಯೋಗಕಾರಿ, ವಿದ್ಯಾಭ್ಯಾಸಕ್ಕೆ ಅವರೂ ಪಾತ್ರರು ಎಂದು ಮುಂತಾಗಿ ವಾದಿಸಿದನು. ವಾದವು ತೀಕ್ಷ್ಣವಾಗಿ ಮುಂದೆ ಕಾಲಿನ್ಸನು ನಾಲ್ಕಾರು ದಿನಗಳು ಬೆಂಜಮಿನನನ್ನು ಕಾಣಲಿಲ್ಲ. ಆಗ ಅವನು ತಮ್ಮ ಆವರೆಗಿನ ಚರ್ಚೆಗಳನ್ನೆಲ್ಲ ಏಕತ್ರ ಸಂಗ್ರಹಿಸಿ ಅದನ್ನು ಲೇಖನಕ್ಕೆ ಇಳಿಸಿದನು. ಹೀಗೆ ಬರೆದು ಕಳುಹಿಸಿದ ಲೇಖನಕ್ಕೆ ಕಾಲಿನ್ಸನಿಂದ ಪ್ರತಿ ಲೇಖನವೂ ಬಂದಿತು. ಹೀಗೆ ಉಭಯರಿಗೂ ನಾಲ್ಕಾರು ಸಾರಿ ಉತ್ತರ ಪ್ರತ್ಯುತ್ತರಗಳು ನಡೆದ ತರುವಾಯ, ಒಂದು ದಿನ ಈ ಕಾಗದ ಪತ್ರಗಳು ಬೆಂಜಮಿನನ ತಂದೆಯ ದೃಷ್ಟಿಗೆ ಬಿದ್ದುವು. ಆತನು ತನ್ನ ಮಗನ ವಿಷಯ ಪ್ರತಿಪಾದನಾ ರೀತಿಯನ್ನು ಮೆಚ್ಚಿಕೊಂಡನಾದರೂ, ಅವನ ಲೇಖನಗಳಲ್ಲಿ ಶಬ್ದ ಸೌಷ್ಟವವೂ ವಾಕ್ಯರಚನಾ ಸಾಮರ್ಥ್ಯವೂ ಸಾಲದೆಂದು ಆಕ್ಷೇಪಿಸಿದನು. ಬೆಂಜಮಿನನಿಗೂ ತನ್ನ ತಪ್ಪುಗಳು ಇಂಥವೆಂದು ಸ್ಪಷ್ಟವಾಗಲು, ಒಡನೆ ತನ್ನ ಶೈಲಿಯನ್ನು ಸರಿಪಡಿಸಿಕೊಳ್ಳುವುದರಲ್ಲೂ, ಶಬ್ದ ಸಂಪತ್ತಿಯನ್ನು ಹೆಚ್ಚಿಸಿಕೊಳ್ಳುವುದರಲ್ಲೂ ಶ್ರಮಿಸಲಾರಂಭಿಸಿದನು. ಈ ಕಾರ್ಯದಲ್ಲಿ ಅವನಿಗೆ ಹೆಚ್ಚು ಸಹಾಯಕವಾದುದೆಂದರೆ, ಅಡಿಸನ್ ಎಂಬ ಸುಪ್ರಸಿದ್ಧ ಲೇಖಕನ ಸ್ಪೆಕ್ಟೇಟರ್ ಎಂಬೊಂದು ಗ್ರಂಥ ಈ ಪ್ರೌಢಗ್ರಂಥದಲ್ಲಿದ್ದ ಹಲವು ಪ್ರಬಂಧಗಳನ್ನು ಬೆಂಜಮಿನನು ಅತ್ಯುತ್ಸಾಹ, ಆತುರಗಳಿಂದ ಓದಿದನು. ಓದಿದುದನ್ನು ಒಮ್ಮೆ ತನ್ನ ಸ್ವಂತಮಾತುಗಳಿಂದ ಬರೆದು ತನ್ನ ಆ ಬರವಣಿಗೆಯನ್ನು ಮೂಲಪ್ರಬಂಧದೊಂದಿಗೆ ಹೋಲಿಸಿದನು ಅದರಲ್ಲಿ ಕಂಡುಬಂದ ಹೆಚ್ಚು ಕಡಮೆಗಳನ್ನೂ ಹೊಸ ಶಬ್ದಗಳನ್ನೂ ಗುರುತುಮಾಡಿಕೊಂಡು, ಮತ್ತೊಮ್ಮೆ ಬರೆದು ತನ್ನಾ ಲೇಖನದಲ್ಲಿ ರಸಪುಷ್ಟಿ, ಭಾವ ಸೌಂದರ್ಯಗಳು ಉಂಟಾಗುವಂತೆ ಅಭ್ಯಾಸಮಾಡಿದನು ಈ ತನ್ನ

ಅಭ್ಯಾಸವನ್ನು ಒಂದೆರಡು ದಿನಗಳಲ್ಲ - ಹಲವು ವರ್ಷಗಳವರೆಗೆ ರಾತ್ರಿ ಪ್ರಾತಃಕಾಲಗಳಲ್ಲೂ ಆದಿತ್ಯವಾರ ರಜಾದಿನಗಳಲ್ಲೂ ತಪ್ಪದೆ ಮಾಡುತ್ತಿದ್ದನು.

ಈ ಕಾಲದಲ್ಲಿ ಅವನ ಜೀವಮಾನದಲ್ಲೇ ಅತಿ ಮುಖ್ಯ ವ್ಯತ್ಯಾಸವನ್ನುಂಟುಮಾಡಿದ ಒಂದು ವಿಚಾರವನ್ನು ಇಲ್ಲಿ ಹೇಳುವುದು ಆವಶ್ಯಕವಾಗಿದೆ. ಓದಬೇಕು, ಓದಬೇಕು, ಸದಾ ಓದುತ್ತಿರಬೇಕು ಎಂಬ ಉತ್ಸಾಹದಿಂದ ಇದ್ದ ಆತನ ಕೈಗೆ ಸಸ್ಯಾಹಾರ ವಿಚಾರವನ್ನು ಕುರಿತು ಪ್ರಸ್ತಾಪಿಸಿದ್ದ ಒಂದು ಪುಸ್ತಕವು ಸಿಕ್ಕಿತು. ಆಗ ಬೆಂಜಮಿನನಿಗೆ ಹದಿನಾರು ವರ್ಷ ವಯಸ್ಸು ಆ ಪುಸ್ತಕದಲ್ಲಿ ವಿವರಿಸಿದ್ದ ವಿಚಾರಗಳು ಅವನ ಮನಸ್ಸಿನ ಮೇಲೆ ವಿಶೇಷವಾದ ಪರಿಣಾಮವನ್ನುಂಟುಮಾಡಿದುವು ಒಡನೆ ಅವನು ತನ್ನ ಆಹಾರ ಪದ್ಧತಿಯನ್ನು ಬದಲಾಯಿಸಿ, ಮುಂದೆ ಸಸ್ಯಾಹಾರಿಯಾಗಿರಬೇಕೆಂದು ನಿಶ್ಚೈಸಿದನು. ಆದರೆ ಇದು ಕಷ್ಟ ಸಾಧ್ಯವಾದ ಕಾರ್ಯವಾಗಿತ್ತು. ಅವನಿಗೆ ಬೇಕಾದ ಸಸ್ಯಾಹಾರದ ಅಡಿಗೆಯನ್ನು ಮಾಡಿಕೊಡುವವರಾರೂ ಇರಲಿಲ್ಲ. ಅವನ ಅಣ್ಣ ಜೇಮ್ಸನು ಇನ್ನೂ ಅವಿವಾಹಿತನಾಗಿದ್ದುದರಿಂದ ಅವನೂ ಮುದ್ರಣಾಲಯದ ಕೆಲಸಗಾರರೂ ಬೇರೊಂದು ಮನೆಯಲ್ಲಿ ಊಟಮಾಡಲು ಏರ್ಪಡಿಸಿಕೊಂಡಿದ್ದರು. ಆದರೆ ಬೆಂಜಮಿನ್ನು ಅವರ ಆಹಾರವನ್ನು ಒಪ್ಪದೆ ತನ್ನ ಆಹಾರವನ್ನು ಬದಲಾಯಿಸಿಕೊಂಡಿದ್ದುದರಿಂದ ಪ್ರಾರಂಭದಲ್ಲಿ ಸ್ವಲ್ಪ ಕಷ್ಟವಾಯಿತು ಆದರೂ ಅವನು ಹಿಂಜರಿಯದೆ, ಆ ಸಸ್ಯಾಹಾರಗ್ರಂಥ ಸಹಾಯದಿಂದಲೇ ತನ್ನ ಆಹಾರಕ್ಕೆ ಬೇಕಾದ ಅಲ್ಪ ಸ್ವಲ್ಪ ಪದಾರ್ಥಗಳನ್ನು ಬೇಯಿಸಿಕೊಳ್ಳುವ ವಿಧಾನವನ್ನು ಕಲಿತುಕೊಂಡನು. ಮತ್ತು ತನ್ನ ಅಣ್ಣನನ್ನು ಕುರಿತು,-'ನೀನು ಒಂದು ವಾರಕ್ಕೆ ನನ್ನ ಆಹಾರಕ್ಕೆಂದು ಈಗ ಕೊಡುತ್ತಿರುವ ಹಣದಲ್ಲಿ ಅರ್ಧವನ್ನು ನಗದಾಗಿ ನನಗೆ ಕೊಟ್ಟರೆ, ಅಷ್ಟರಲ್ಲೇ ನನ್ನ ಆಹಾರದ ವೆಚ್ಚವನ್ನು ಸಾಗಿಸಿಕೊಳ್ಳುವೆನು' ಎಂದು ಹೇಳಿಕೊಂಡನು ಆ ಸಲಹೆಯು ಆತನಿಗೆ ಲಾಭಕರವಾದುದರಿಂದ ಜೇಮ್ಸನು ಒಡನೆ ಒಪ್ಪಿಕೊಂಡು ಮುಂದೆ ಹಾಗೆಯೇ ಮಾಡಲಾರಂಭಿಸಿದನು ಆದರೆ ಬೆಂಜಮಿನಿಗೆ ಹಾಗೆ ಕೊಟ್ಟ ದ್ರವ್ಯದಲ್ಲೂ ಅವನ ಆಹಾರಕ್ಕೆ ಅರ್ಧದಷ್ಟು ಮಾತ್ರವೇ ಖರ್ಚಾಗುತ್ತಿದ್ದುದರಿಂದ

ಅವನು ಮಿಕ್ಕರ್ಥವನ್ನು ಪುಸ್ತಕಗಳನ್ನು ಕೊಳ್ಳಲು ಉಪಯೋಗಿಸಿಕೊಳ್ಳುತ್ತಿದ್ದನು. ಅಷ್ಟು ಮಾತ್ರವಲ್ಲ-ಇದರಿಂದ ಅವನಿಗೆ ಮತ್ತೊಂದು ಪ್ರಯೋಜನವೂ ಉಂಟಾಯಿತು. ಮುದ್ರಣಾಲಯದಲ್ಲಿದ್ದ ಅವನ ಅಣ್ಣನೂ ಇತರ ಕೆಲಸಗಾರರೂ ಊಟಕ್ಕೆಂದು ಹೋಗಿಬರುವ ವೇಳೆಯೊಳಗೆ ಅವನು ಬಹು ಸ್ವಲ್ಪ ಕಾಲದಲ್ಲೇ ತನ್ನ ಊಟ ತಿಂಡಿಯ ಕಲಾಪವನ್ನು ಮುಗಿಸಿಕೊಂಡು ಮಿಕ್ಕ ಕಾಲವನ್ನೆಲ್ಲ ಗ್ರಂಥವ್ಯಾಸಂಗಕ್ಕಾಗಿ ಉಪಯೋಗಿಸಿಕೊಳ್ಳುತ್ತಿದ್ದನು. ಈ ಸಾತ್ವಿಕವಾದ ಮಿತಾಹಾರದ ಪದ್ಧತಿಯಿಂದ ಪೂರ್ವಕ್ಕಿಂತಲೂ ಅವನ ಬುದ್ಧಿಯು ತಿಳಿವಾದಂತೆ ತೋರಿತು. ಇದರಿಂದ ಚಿಕ್ಕಂದಿನಲ್ಲಿ ಅವನಿಗೆ ಅತಿಶಯ ಬೇಸರವನ್ನುಂಟುಮಾಡುತ್ತಿದ್ದ ಗಣಿತ ವಿಷಯವೂ ಈಗ ರುಚಿಕರವಾಗಿ ತೋರಿತು. ಸ್ವಲ್ಪ ದಿನಗಳಲ್ಲೇ ಅದರಲ್ಲೂ ತಕ್ಕಷ್ಟು ಪರಿಶ್ರಮ ಮಾಡಲು ಅವಕಾಶವಾಯಿತು ಮತ್ತು ವ್ಯವಹಾರಕ್ಕೆ ಉಪಯೋಗವಾಗುವ ಮಟ್ಟಿಗೆ ನೌಕಾಶಾಸ್ತ್ರವನ್ನೂ ಕಲಿತನು. ಈ ಕಾಲದಲ್ಲಿ ಅವನು ಓದಿದ ಮತ್ತೆರಡು ಮುಖ್ಯ ಗ್ರಂಥಗಳೆಂದರೆ On Human Understanding ಎಂಬ 'ಮಾನವ ಜ್ಞಾನವಿಚಾರ' ಮತ್ತು, The Art of Thinking ಎಂಬ 'ವಿಚಾರಕಲಾ' ಎಂಬಿವು. ಈ ಬಗೆಯ ಉತ್ತಮ ಗ್ರಂಥಗಳ ಪಠನೆಯಿಂದ ಅವನ ಬುದ್ಧಿಶಕ್ತಿಯೂ ನಯನೀತಿ ನಡತೆಗಳೂ ಬೆಳೆಯಲು ಅತಿಶಯ ಸಹಾಯವೊದಗಿತು.

ಕಾಲವನ್ನು ವ್ಯರ್ಥಮಾಡದೆ ಓದುವುದರಲ್ಲಿ ಕಳೆವ ಈ ಸದಭ್ಯಾಸದಿಂದ ಅವನು ಮುಂದೆ ಕೆಲವು ದಿನಗಳಲ್ಲೇ ವ್ಯಾಕರಣ ಅಲಂಕಾರಶಾಸ್ತ್ರ, ತರ್ಕಶಾಸ್ತ್ರ ಮುಂತಾದುವುಗಳಲ್ಲೂ ತಕ್ಕಷ್ಟು ಜ್ಞಾನ ಸಂಪಾದನೆ ಮಾಡಿದನು. ಸಾಕ್ರೆಟೀಸನೆಂಬ ಗ್ರೀಕ್ ತತ್ವಜ್ಞಾನಿಯ ವಾದಪದ್ಧತಿಯನ್ನು ಅಭ್ಯಾಸಮಾಡಿ ಇತರರ ಮನಸ್ಸಿಗೆ ನೋವನ್ನುಂಟುಮಾಡದಂತೆ ಸಯುಕ್ತಿಕವಾಗಿಯೂ, ಉದ್ವೇಗಗೊಳ್ಳದೆಯೂ ವಾದಿಸುವ ರೀತಿಯನ್ನು ಕಲಿತನು. ಪರರ ಅಭಿಪ್ರಾಯಕ್ಕೆ ವಿರುದ್ಧವಾದ ಅಭಿಪ್ರಾಯಗಳನ್ನು ಹೊರಪಡಿಸಬೇಕಾದ ಸಂದರ್ಭವಿದ್ದಾಗಲೂ ಸಹ ಅದನ್ನು ಬಿರುನುಡಿಗಳಿಂದ ಹೇಳದೆ, ವಿನಯ ವಿಧೇಯತೆಗಳು ಮೆರೆಯುವಂತೆ,—'ಈ ವಿಷಯದಲ್ಲಿ ಇದು ಸರಿಯೆಂದು ನನಗೆ ತೋರುತ್ತದೆ, ಇದು ಹೀಗಿರಬಹುದು'-ಮುಂತಾಗಿ ಹೇಳು

ತ್ತಿದ್ದನಲ್ಲದೆ, 'ಇದು ಖಂಡಿತವಾಗಿ ಹೀಗೇ ಸರಿ' ಎಂದು ನಿಷ್ಠುರತೆಯಿಂದ ತನ್ನ ಮತವನ್ನು ಸ್ಥಾಪಿಸಲು ಯತ್ನಿಸುತ್ತಿರಲಿಲ್ಲ.

ಅವನ ಬರೆವಣಿಗೆಯು ದಿನದಿನಕ್ಕೆ ರಸವತ್ತಾಗತೊಡಗಿತು ಆದರೆ ಆದನ್ನು ಹತ್ತು ಜನಗಳ ದೃಷ್ಟಿಗೆ ತರಲು ಅವಕಾಶವಿರಲಿಲ್ಲ. ೧೭೨೦ನೆಯ ವರ್ಷದಲ್ಲಿ ಅವನ ಅಣ್ಣ ಜೇಮ್ಸನು ಒಂದು ವರ್ತಮಾನ ಪತ್ರವನ್ನು ಪ್ರಕಟಿಸಲಾರಂಭಿಸಿದನು. ಅದರಲ್ಲಿ ತನ್ನ ಲೇಖನಗಳನ್ನು ಪ್ರಕಟಿಸಬೇಕೆಂದು ಬೆಂಜಮಿನನು ಇಚ್ಛಿಸಿದ್ದನು. ಆದರೆ ಅವನ ಇಚ್ಛೆಯನ್ನು ಮನ್ನಿಸುವ ರಾರು ? ಕೊನೆಗೆ ಅವನು ಒಂದು ಉಪಾಯಮಾಡಿದನು ತನ್ನ ಕೈಬರೆಹವು ತಿಳಿಯದಂತೆ ಬದಲಾಯಿಸಿ ಹೆಸರು ಹಾಕದೆ ಒಂದು ಲೇಖನವನ್ನು ಬರೆದು, ಅದು ಮುದ್ರಣಾಲಯದ ಒಳಬಾಗಿಲಲ್ಲಿ ಸಿಕ್ಕುವಂತೆ ಹಾಕಿದನು. ಅದನ್ನು ಕಂಡು ಎತ್ತಿಕೊಂಡ ಅವನ ಅಣ್ಣನು, ಓದಿನೋಡಿ, ಹೆಸರು ದೆಸೆಗಳಿಲ್ಲದಿದ್ದರೂ ರಸಭರಿತವಾಗಿದ್ದ ಆ ಲೇಖನವನ್ನು ಪ್ರಕಟಿಸಲಿಚ್ಛಿಸಿದನು ಮೊಳೆಗಳನ್ನು ಜೋಡಿಸುವುದು, ಛಾಪಿಸುವುದು ಮುಂತಾದ ಮುದ್ರಣಾಲಯದೊಳಗಿನ ಕೆಲಸಗಳಂತೆಯೇ ಪತ್ರಿಕೆಗಳನ್ನು ಮಾರುವ ಮತ್ತು ಸಂಚಿಕೆಗಳನ್ನು ಚಂದಾದಾರರಿಗೆ ತಲಪಿಸುವ ಕೆಲಸಗಳನ್ನೂ ಬೆಂಜಮಿನ್ನನೇ ಮಾಡಬೇಕಾಗಿದ್ದಿತು. ಅಂದು, ತನ್ನ ಗುಪ್ತಲೇಖನವನ್ನೋದಿದ ಅನೇಕ ಮಂದಿ ಓದುಗರು ಅದನ್ನು ಶ್ಲಾಘಿಸಿದುದನ್ನು ಕಿವಿಯಾರೆ ಕೇಳಿ, ಅವನು ಮನಸ್ಸಿನಲ್ಲಿಯೇ ಉಬ್ಬಿಹೋದನು. ಮತ್ತು ತನಗೆ ಬರೆಯಬೇಕೆಂದು ತೋರಿದಾಗಲೆಲ್ಲ, ಮೇಲ್ಕಂಡ ಉಪಾಯದಿಂದಲೇ ಅದು ತನ್ನ ಅಣ್ಣನ ಕೈಗೆ ಸಿಕ್ಕುವಂತೆ ಮಾಡುತ್ತಿದ್ದನು. ಮುಂದೆ ಕೆಲವು ದಿನಗಳಮೇಲೆ, ಹಾಗೆ ಹೆಸರಿಲ್ಲದ ಲೇಖನಗಳನ್ನು ಬರೆಯುತ್ತಿದ್ದವನು ತನ್ನ ತಮ್ಮನೆಂಬ ವಿಚಾರವು ಜೇಮ್ಸಿಗೆ ತಿಳಿಯಿತು ತರುವಾಯ ಅವನ ಲೇಖನಗಳು ಪ್ರಕಟವಾಗಲು ತಡೆಯುಂಟಾದುದು ಮಾತ್ರವಲ್ಲ, ಮುಂದೆ ಆ ಮೂಲಕ ಅಣ್ಣ ತಮ್ಮಂದಿರಿಗೆ ಮನಸ್ತಾಪವೂ ಉಂಟಾಯಿತು ಬೆಂಜಮಿನ್ನನು ಎಂದಿಗೆ ತನ್ನ ಕರಾರು ಪತ್ರದ ಅವಧಿ ಮುಗಿದು, ಆ ಪರಾಧೀನತೆಯಿಂದ ಬಿಡುಗಡೆಯುಂಟಾದೀತೋ ಎಂದು ಹಂಬಲಿಸುತ್ತಿದ್ದನು. ಈ ಮಧ್ಯೆ ಪತ್ರಿಕೆಯಲ್ಲಿ ಪ್ರಕಟವಾದ ಒಂದಾನೊಂದು ಲೇಖನವು ರಾಜಕೀಯ ನ್ಯಾಯನಿಬಂಧನೆಗೆ.

ವಿರೋಧವಾಗಿತ್ತೆಂಬ ಕಾರಣಕ್ಕಾಗಿ ಜೇಮ್ಸ್‌ನಿಗೆ ಕಾರಾಗೃಹವಾಸವು ಪ್ರಾಪ್ತ ವಾಯಿತು. ಆ ಕಾಲದಲ್ಲಿ ಬೆಂಜಮಿನ್ನನೇ ತನ್ನ ಯುಕ್ತಿಯುಕ್ತವೂ ಹಾಸ್ಯ ಮಯವೂ ಆದ ಬರೆವಣಿಗೆಗಳಿಂದ, ಸರ್ಕಾರದವರ ಅನೀತಿ ಪದ್ಧತಿಗಳನ್ನು ಖಂಡಿಸಿ ಲೇಖಗಳನ್ನು ಬರೆದು ಪತ್ರಿಕೆಯನ್ನು ನಡೆಸುತ್ತಿದ್ದನು. ಮುಂದೆ ಕೆಲಕಾಲಾನಂತರ ಜೇಮ್ಸ್‌ನಿಗೆ ಬಿಡುಗಡೆಯಾಗಲು, ಸರ್ಕಾರದವರು ಮುಂದೆ ಪತ್ರಿಕೆಯು ಅವನ ಹೆಸರಿನಲ್ಲಿ ನಡೆಯಕೂಡದೆಂದು ಆಜ್ಞೆಮಾಡಿ ದರು. ಆಗ ಅದನ್ನು ಬೆಂಜಮಿನ್ನನು ತನ್ನ ಹೆಸರಿನಲ್ಲಿ ಪ್ರಕಟಿಸಲೆಂದು ಪ್ರಜಾವರ್ಗದ ಬಹುಮಂದಿಯಿಂದ ಅಭಿಪ್ರಾಯ ಬಂತು. ಆದರೆ ಅದು ಜೇಮ್ಸ್‌ನಿಗೆ ಸಮ್ಮತವಾಗಲಿಲ್ಲ. ಅಲ್ಲದೆ ತನ್ನ ತಮ್ಮನ ವಿಷಯದಲ್ಲಿ ಅವನಲ್ಲಿ ಪ್ರೀತಿವಿಶ್ವಾಸಗಳೂ ಉಳಿದಿರಲಿಲ್ಲ. ದಿನದಿನಕ್ಕೆ ಇಬ್ಬರಿಗೂ ಮನಸ್ತಾಪ ಹೆಚ್ಚಿತು. ತಂದೆಯಲ್ಲಿ ದೂರಿಕೊಳ್ಳಲು, ಆತನು ನ್ಯಾಯಸಮ್ಮತವಾಗಿದ್ದ ಚಿಕ್ಕ ಮಗನ ಪಕ್ಷವನ್ನೇ ವಹಿಸಬೇಕಾಗುತ್ತಿದ್ದಿತು. ಅದೂ ಜೇಮ್ಸ್‌ನಿಗೆ ಸಹನೆಯಾಗಲಿಲ್ಲ. ಕೊನೆಗೆ ಹಿಂದಿನ ಕರಾರು ವಜಾ ಆಗಿ ಮುಂದೆ ಬೆಂಜ ಮಿನನನ್ನು ಇನ್ನೂ ಹೆಚ್ಚು ನಿರ್ಬಂಧಕ್ಕೆ ಒಳಪಡಿಸುವಂತಹ ಮತ್ತೊಂದು ಕರಾರು ಹುಟ್ಟಬೇಕೆಂದು ಏರ್ಪಾಡಾಯಿತು. ಮೇಲ್ಕಂಡ ಕಾರಣಗಳಿಂದ

ಈವರೆಗೇ ನೊಂದು, ಹಲವುವೇಳೆ ತಮ್ಮಣ್ಣನಿಂದ ಬೈಗಳು ಹೊಡೆತಗಳೇ ಮುಂತಾದ ಪೀಡೆಯನ್ನೂ ಅನುಭವಿಸಿದ್ದ ಬೆಂಜಮಿನ್ನನು ಸಾಧ್ಯವಾದಷ್ಟು ಶೀಘ್ರವಾಗಿ ಸ್ವತಂತ್ರನಾಗಬೇಕೆಂದು ತೀರ್ಮಾನಿಸಿಕೊಂಡನು. ಆದರೆ ತಮ್ಮಣ್ಣನ ಮುದ್ರಣಾಲಯವನ್ನು ಬಿಟ್ಟ ತರುವಾಯ, ಜೇಮ್ಸನು ತನ್ನ ತಮ್ಮನ ವಿಷಯದಲ್ಲಿ ಮಾಡಿದ ಪ್ರತಿಕ್ರಿಯೆಯ ಮೂಲಕ, ಆ ಊರಲ್ಲಿ ಮತ್ತೆಲ್ಲೂ ಕೆಲಸ ದೊರೆಯುವುದೂ ಸಾಧ್ಯವಿರಲಿಲ್ಲ. ಆದುದರಿಂದ ಅವನು ಬೇರೆ ಯಾವುದಾದರೊಂದು ಊರಿಗೆಹೋಗಿ, ತನಗೆ ಬಳಕೆಯಿದ್ದ ಆ ಉದ್ಯೋಗವನ್ನೇ ಮುಂದರಿಸಬೇಕೆಂದು ನಿಶ್ಚಯಿಸಿದನು. ತನ್ನ ಸ್ನೇಹಿ ತನಾದ ಕಾಲಿನ್ಸಿನ ಆಲೋಚನೆಯನ್ನೂ ಕೇಳಿ, ನ್ಯೂಯಾರ್ಕೆಂಬ ದೊಡ್ಡ ಪಟ್ಟಣಕ್ಕೆ ಹೋಗಬೇಕೆಂದು ನಿರ್ಧರಮಾಡಿದನು. ಮುಂದೆ ಸಾವಕಾಶ ಮಾಡದೆ, ತನ್ನ ಪುಸ್ತಕಗಳನ್ನು ಮಾರಿಬಂದ ಹಣವನ್ನೇ ಪ್ರಯಾಣದ ವೆಚ್ಚಕ್ಕಾಗಿ ಇಟ್ಟುಕೊಂಡು, ತನ್ನ ತಂದೆ ಮತ್ತು ಅಣ್ಣನಿಗೆ ತಿಳಿಯದಂತೆ

೧೭೨೩ನೆಯ ಅಕ್ಟೋಬರು ತಿಂಗಳಿನಲ್ಲಿ ಒಂದುದಿನ ಮನೆಯಿಂದ ಹೊರ ಬಿದ್ದು, ದೋಣಿಯಲ್ಲಿ ಕುಳಿತು ಪ್ರಯಾಣಮಾಡಿದನು.

ಅವನು ವಾಸವಾಗಿದ್ದ ಊರಿನಿಂದ ನ್ಯೂಯಾರ್ಕಿಗೆ ಮುನ್ನೂರು ಮೈಲು ಆ ದೂರ ಪ್ರಯಾಣವು ಸುಖವಾಗಿ ಸಾಗಿ ಬೆಂಜಮಿನ್ನನು ನ್ಯೂಯಾರ್ಕ್ ಪಟ್ಟಣವನ್ನು ತಲುಪಿದನು. ಆ ದೊಡ್ಡ ಪಟ್ಟಣದಲ್ಲಿ ಅವನನ್ನು ಕೇಳುವರಾರು? ಅವನಿಗಿನ್ನೂ ಹದಿನೇಳು ವರ್ಷ ಅಲ್ಲಿ ಅವನಿಗೆ ತಿಳಿದವರೂ ಯಾರೂ ಇರಲಿಲ್ಲ. ಆದರೂ ಅವನು ಅಂಜದೆ, ಒಂದಾನೊಂದು ಮುದ್ರಣಾಲಯಕ್ಕೆ ಹೋಗಿ, ತನಗೆ ಅಲ್ಲಿ ಕೆಲಸ ಸಿಕ್ಕಿತೇ ಎಂದು ವಿಚಾರಿಸಿದನು. ಆ ಮುದ್ರಣಾಲಯಾಧಿಕಾರಿಯು ತನ್ನಲ್ಲಿ ಕೆಲಸವಿಲ್ಲವೆಂದೂ, ಆದರೆ ಫಿಲಡೆಲ್ಫಿಯಾ ಎಂಬಲ್ಲಿ ತನ್ನ ಮಗನ ಬಳಿ ಇದ್ದ ಕೆಲಸಗಾರನು ಮೃತನಾಗಿದ್ದುದರಿಂದ ಅಲ್ಲಿಗೆ ಹೋದರೆ ಕೆಲಸ ದೊರೆಯಬಹುದೆಂದೂ ಹೇಳಿದನು. ಅಲ್ಲಿಗೆ ಹೋಗಲು ಬೆಂಜಮಿನ್ನನಿಗೆ ಇಚ್ಛೆಯುಂಟಾಯಿತಾದರೂ ಕೈಯಲ್ಲಿ ಸಾಕಷ್ಟು ದುಡ್ಡಿರಲಿಲ್ಲ. ಆದರೂ ಅವನು ಧೈರ್ಯಗೆಡದೆ, ಹಡಗು ಹತ್ತಿ ಪ್ರಯಾಣಮಾಡಿದನು. ಈ ಸಾರಿಯ ಪ್ರಯಾಣ ಮಾತ್ರ ಸುಖವಾಗಿ ಸಾಗಲಿಲ್ಲ. ಹಡಗು ಬಿರುಗಾಳಿಗೆ ಸಿಕ್ಕಿ, ಪರ್ವತಾಕಾರವಾಗಿ ಏಳುತ್ತಿದ್ದ ಅಲೆಗಳ ಮಧ್ಯದಲ್ಲಿ ಉಳಿದೀತೇ ಎನ್ನಿಸುವಂತಾಗಿ, ಪ್ರಯಾಣಿಕರೆಲ್ಲರೂ ಪ್ರಾಣಭಯದಿಂದ ತಲ್ಲಣಿಸುವಂತಾಯಿತು ದಡಕ್ಕೆ ಹೋದರೆಲ್ಲಿ ಹಡಗು ಅಲೆಗಳ ಹೊಡೆತದಿಂದ ಬಂಡೆಗೆ ಅಪ್ಪಳಿಸಲ್ಪಟ್ಟು ಒಡೆದೀತೋ ಎಂಬ ಭಯದಿಂದ ಅವರು ನಡುನೀರಿನಲ್ಲೇ ರಾತ್ರಿಯೆಲ್ಲಾ ನಿಂತು ಬಹು ಕಷ್ಟಪಡಬೇಕಾಯಿತು. ಬಟ್ಟೆಯೆಲ್ಲಾ ನೆನೆದು, ನಿದ್ರೆಯಿಲ್ಲದೆ ಜ್ವರಬಾಧೆಗೀಡಾಗಿ, ಒದ್ದೆಬಟ್ಟೆಯಲ್ಲಿ ರಾತ್ರಿಯೆಲ್ಲಾ ನಿಂತಿದ್ದ ಬೆಂಜಮಿನ್ನನ ಸ್ಥಿತಿಯು ಆಗ ತುಂಬಾ ಶೋಚನೀಯವಾಗಿದ್ದಿತು ಹೀಗೆ ಕಷ್ಟಪಟ್ಟು ಅಂಬಾಯಿ ಎಂಬಲ್ಲಿ ಹಡಗು ಇಳಿಯಲು, ಅಲ್ಲಿಂದ ಫಿಲಡೆಲ್ಫಿಯಾಕ್ಕೆ ಹೊರಡತಕ್ಕ ದೋಣಿಯು ಸ್ವಲ್ಪಹೊತ್ತಿಗೆ ಮುಂದೆಯೇ ಹೊರಟುಹೋಯಿತೆಂದು ತಿಳಿಯಿತು. ಮುಂದೇನು ಗತಿಯೆಂದು ಅಲ್ಲಲ್ಲಿ ಅಲೆದಾಡುತ್ತಿರಲು, ಅಕಸ್ಮಾತ್ತಾಗಿ ಆ ದಿನ ಸಾಯಂಕಾಲ ಒಂದು ದೋಣಿಯು ಫಿಲಡೆಲ್ಫಿಯಾಕ್ಕೆ ಹೊರಡತಕ್ಕದ್ದಿದೆಯೆಂಬ ಸಂಗತಿ ಗೊತ್ತಾಯಿತು. ಒಡನೆ ದೋಣಿಯ

ಬಳಿಗೆ ಓಡಿ, ತನ್ನನ್ನೂ ಕರೆದೊಯ್ಯಿರೆಂದು ಅಲ್ಲಿದ್ದವರನ್ನು ಕೇಳಿಕೊಂಡನು. ಪರದೇಶಿಯಂತಿದ್ದ ಅವನಮೇಲೆ ಕನಿಕರ ಹುಟ್ಟಿ, ಅವರು ಅವನನ್ನೂ ದೋಣಿಯೊಳಕ್ಕೆ ಕರೆದುಕೊಂಡರು. ಆದರೆ ಈ ಪ್ರಯಾಣವೂ ಸುಖವಾಗಲಿಲ್ಲ. ದಾರಿಯುದ್ದಕ್ಕೂ ಪ್ರಯಾಣಿಕರಾಗಿದ್ದ ಇವರೇ ದೋಣಿ ನಡೆಯಿಸಬೇಕಾಯಿತು. ಚಳಿ. ರಾತ್ರಿ ಕತ್ತಲು. ಊರು ಎಲ್ಲಿದೆಯೆಂದು ತಿಳಿಯದೆ, ಸರ್ವರೂ ದಣಿದು, ನೆಲ ಸಿಕ್ಕಿದರೆ ಸಾಕು ಎಂಬಂತಾಗಿ, ಬೇಸತ್ತಿದ್ದರು. ಕೊನೆಗೆ ಎಂತೂ ಭೂಮಿ ಸಿಕ್ಕಿತು. ದೋಣಿಯನ್ನು ದಡಕ್ಕೆ ತಳ್ಳಿ, ಎಲ್ಲರೂ ಕೆಳಕ್ಕಿಳಿದು ಬೆಂಕಿ ಕಾಯಿಸಿಕೊಂಡರು. ಬೆಂಜಮಿನ್ನನ ಸ್ಥಿತಿಯಂತೂ ಬಹು ಶೋಚನೀಯವಾಗಿದ್ದಿತು. ಅವನ ಬಟ್ಟೆಗಳೆಲ್ಲಾ ಒದ್ದೆಯಾಗಿ, ವಾಸಿ ಅಸಹ್ಯವೆನ್ನಿಸುವಂತಿದ್ದುವು. ಅವನ ಕೈಯಲ್ಲಿ ತಕ್ಕಷ್ಟು ದುಡ್ಡೂ ಇರಲಿಲ್ಲ. ಆ ಊರಲ್ಲಿ ಎಲ್ಲಿಗೆ ಹೋಗಬೇಕು, ಏನು ಮಾಡಬೇಕು ಎಂಬುದು ತಿಳಿಯದೆ, ಭಿಕ್ಷುಕನಂತಿದ್ದ ತನ್ನ ಆ ಸ್ಥಿತಿಯಲ್ಲೇ ಅವನು ಯಾವುದೋ ಒಂದು ರಸ್ತೆಯನ್ನು ಹಿಡಿದು ನಡೆದುಹೋದನು. ಹಸಿವೆಯಿಂದ ಕಂಗೆಟ್ಟಿದ್ದುದರಿಂದ ಅಲ್ಲೇ ಒಂದು ರೊಟ್ಟಿಯ ಅಂಗಡಿಯಲ್ಲಿ ಮೂರುಕಾಲಾಣೆಗಳಿಗೆ ರೊಟ್ಟಿ ಕೊಡೆಂದನು. ಅಂಗಡಿಯವನು ಅಷ್ಟು ಸ್ವಲ್ಪ ದುಡ್ಡಿಗೆ ದೊಡ್ಡ ದೊಡ್ಡ ಮೂರು ರೊಟ್ಟಿಗಳನ್ನು ಕೊಟ್ಟುದನ್ನು ಕಂಡು ಅವನಿಗೆ ಪರಮಾಶ್ಚರ್ಯವಾಯಿತು. ಅವುಗಳನ್ನು ಇಟ್ಟುಕೊಳ್ಳಲಿಕ್ಕೆ ಸಹ ಅವನಿಗೆ ಸ್ಥಳವಿರಲಿಲ್ಲ ಆಗಲವನು, ಎರಡು ಕಂಕ್ಳುಳಲ್ಲೂ ಎರಡು ರೊಟ್ಟಿಗಳನ್ನಿಟ್ಟುಕೊಂಡು, ಕೈಯಲ್ಲಿದ್ದ ಮತ್ತೊಂದನ್ನು ಕಚ್ಚಿ ತಿಂದುಕೊಳ್ಳುತ್ತಾ ಬೀದಿಯಲ್ಲಿ ಹೊರಟನು. ಆಗಿನ ಅವನ ವೇಷವನ್ನು ನೋಡಿ ಅಲ್ಲೇ ಒಂದು ಮನೆಯ ಬಾಗಿಲಲ್ಲಿ ನಿಂತಿದ್ದ ಹುಡುಗಿಯೊಬ್ಬಳು ನಸುನಕ್ಕಳು. ಅದನ್ನು ಕಂಡು ನಾಚಿದ ಬೆಂಜಮಿನ್ನನು, ಬೇರೆ ದಾರಿಯನ್ನು ಹಿಡಿದು, ನದಿಗೆ ಹೋಗಿ ನೀರು ಕುಡಿದು ಹೊಟ್ಟೆತುಂಬಿಕೊಂಡು, ತರುವಾಯ ಎಲ್ಲಿಗೆ ಹೋಗಬೇಕೆಂದು ತೋರದಿರಲು, ಒಂದಾನೊಂದು ರಾಜಮಾರ್ಗವನ್ನು ಹಿಡಿದು ಸಾಗಿದನು. ಆ ದಿನ ಭಾನುವಾರವಾದುದರಿಂದ ಜನರೆಲ್ಲರೂ ಒಳ್ಳೆಯ ಬಟ್ಟೆಗಳನ್ನುಟ್ಟು ಶುಭ್ರರಾಗಿ ಆ ರಸ್ತೆಯಲ್ಲಿದ್ದ ಒಂದು ಪ್ರಾರ್ಥನಾ ಮಂದಿರಕ್ಕೆ ಹೋಗುತ್ತಿದ್ದರು. ಬೆಂಜಮಿ

ನ್ನನೂ ಅವರ ಹಿಂದೆಯೇ ಹೋಗಿ, ಅವರೆಲ್ಲರೂ ಹೊಕ್ಕಿದ್ದ ಮಂದಿರವನ್ನೇ ತಾನೂ ಹೊಕ್ಕನು. ಅವರೆಲ್ಲರೂ ಪ್ರಾರ್ಥನೆಗೆ ತೊಡಗಿರಲು, ಆವರೆಗೇ ಬಹುಮಟ್ಟಿಗೆ ದಣಿದುಹೋಗಿದ್ದ ಬೆಂಜಮಿನ್ನಿಗೆ ಹಸಿವೆ ಬಾಯಾರಿಕೆಗಳು ಅಡಗಿದ್ದುದರಿಂದ ಒಡನೆ ಗಾಢನಿದ್ರೆ ಬಂದಿತು ಅಲ್ಲೇ ಒಂದೆಡೆಯಲ್ಲಿ ಮಲಗಿಬಿಟ್ಟನು

ತರುವಾಯ ಬಹು ಹೊತ್ತಿನಮೇಲೆ, ಎಲ್ಲರೂ ಹೊರಟುಹೋಗುವಾಗ್ಗೆ, ಮಗ್ಗುಲಲ್ಲಿದ್ದವನೊಬ್ಬನು, ಅವನನ್ನು ಎಬ್ಬಿಸಿದನು ಅಲ್ಲಿಂದ ಹೊರಟವನು, ಭೋಜನಶಾಲೆಯೊಂದನ್ನು ಕೇಳಿಕೊಂಡುಹೋಗಿ ಊಟಮಾಡಿ, ಆ ದಿನ ಸಂಜೆಯವರೆಗೂ ನಿದ್ರಿಸಿದನು. ರಾತ್ರಿಯೂ ಸರಿಯಾಗಿಊಟಮಾಡದೆ, ನಿದ್ರೆಗಣ್ಣಿನಲ್ಲೇ ಒಂದೆರಡು ತುತ್ತುತಿಂದು ಪುನಃ ಮಲಗಿ ಮಾರನೆಯ ಬೆಳಿಗ್ಗೆ ಎಚ್ಚತ್ತನು. ಅಷ್ಟುಮಟ್ಟಿಗೆ ನಿದ್ರೆಮಾಡಿದುದರಿಂದ ಅವನ ಆಯಾಸವೆಲ್ಲಾ ಪರಿಹಾರವಾಗಿ, ಮೈಯಲ್ಲಿ ಲವಲವಿಕೆಯುಂಟಾಯಿತು. ಒಡನೆ ಅವನು ಚೆನ್ನಾಗಿ ಸ್ನಾನಮಾಡಿ. ತನ್ನಲ್ಲಿದ್ದ ಬಟ್ಟೆಬರೆಗಳನ್ನೇ ತಕ್ಕಮಟ್ಟಿಗೆ ಕಾಣುವಂತೆ ಧರಿಸಿಕೊಂಡು, ನ್ಯೂಯಾರ್ಕಿನಲ್ಲಿ ತನಗೆ ಗುರುತು ಕೊಟ್ಟಿದ್ದ ಬ್ರಾಡ್‌ಫರ್ಡ್‌ನ ಮುದ್ರಣಾಲಯವೆಲ್ಲೆಂದು ಹುಡುಕಿಕೊಂಡು ಹೊರಟನು ಅವನು ಅಲ್ಲಿಗೆ ಹೋಗುವವೇಳೆಗೆ, ನ್ಯೂಯಾರ್ಕಿನಲ್ಲಿ ತನಗೆ ಪರಿಚಯ ಹೇಳಿದ್ದ ಬ್ರಾಡ್‌ಫರ್ಡ್ ಎಂಬ ವೃದ್ಧನೇ ಅಲ್ಲಿಗೆ ಬಂದು ತನ್ನ ಮಗನ ಬಳಿ ಮಾತನಾಡುತ್ತಾ ಕುಳಿತಿದ್ದನು. ಬೆಂಜಮಿನನ್ನು ಕಂಡೊಡನೆಯೇ ಅವನು ಉಪಚರಿಸಿ ಕುಳ್ಳಿರಿಸಿಕೊಂಡು, ತನ್ನ ಮಗನಿಗೆ ಅವನ ಗುರುತುಮಾಡಿಸಿ, ಅವನಿಗೆ ಕೆಲಸವೇನಾದರೂ ಇದ್ದರೆ ಕೊಡೆಂದು ಹೇಳಿದನು. ಆದರೆ ಅವನಿಗೆ ಬೇಕಾಗಿದ್ದ ಕೆಲಸಗಾರನು ಆಗ್ಗೆ ಕೆಲವು ದಿವಸಗಳ ಮುಂಚೆಯೇ ಬಂದುಬಿಟ್ಟಿದ್ದುದರಿಂದ, ಅವನು ಕೈಮರ್ ಎಂಬ ಮತ್ತೊಬ್ಬ ಮುದ್ರಣಾಲಯಕಾರನಿಗೆ ಕೆಲಸಗಾರನು ಬೇಕಾಗಿದ್ದ ಸಂಗತಿಯನ್ನು ಅವನಿಗೆ ತಿಳಿಸಿದನು. ನ್ಯೂಯಾರ್ಕಿನ ಬ್ರಾಡ್‌ಫರ್ಡನು ಅವನೊಂದಿಗೆ ಕೈಮರನ ಮುದ್ರಣಾಲಕ್ಕೆ ಹೋಗಿ ವಿಚಾರಿಸಿ, ಆ ಹುಡುಗನಿಗೆ ಸಹಾಯಮಾಡೆಂದು ಶಿಫಾರಸುಮಾಡಿದನು. ಬೆಂಜಮಿನ್ನನಿಗೆ ಕೆಲಸದಲ್ಲಿ ತಕ್ಕಷ್ಟು ಅನುಭವ ವಿದೆಯೇ ಎಂಬುದನ್ನು ತಿಳಿಯತಕ್ಕ ಬಗ್ಗೆ ಯೋಗ್ಯಪರೀಕ್ಷೆ ನಡೆದ ತರು

ವಾಯು. ಕೈಮರನು ಅವನಿಗಿದ್ದ ಜಾಣ್ಮೆಗಾಗಿ ಸಂತೋಷಪಟ್ಟು, ತನ್ನ ಬಳಿಯಲ್ಲೇ ಅವನಿಗೆ ಕೆಲಸಕೊಡುವಂತೆ ವಾಗ್ದಾನಮಾಡಿದನು. ಮುಂದೆ ಸ್ವಲ್ಪ ದಿನಗಳೊಳಗಾಗಿಯೇ ಅವನಿಗೆ ಆ ಕೈಮರನ ಮುದ್ರಣಾಲಯ ದಲ್ಲೇ ಕೆಲಸದೊರೆಯಿತು. ಆದರೂ ಕೆಲವು ದಿನಗಳವುಟ್ಟಿಗೆ ಅವನು ಊಟಉಪಚಾರಗಳಿಗಾಗಿ ಬ್ರಾಡ್‌ಫರ್ಡನ ಮನೆಯಲ್ಲೇ ಇದ್ದನು. ಏಕಾಂಗಿಯಾಗಿದ್ದರೂ ಧೈರ್ಯದಿಂದಲೂ ಏಕನಿಷ್ಠೆಯಿಂದಲೂ, ತಂದೆ ತಾಯಿಗಳನ್ನು ಬಿಟ್ಟು ಮನೆಯಿಂದ ಹೊರಬಿದ್ದ ಬೆಂಜಮಿನ್ನನು ತನ್ನ ಇಚ್ಛೆಯಂತೆಯೇ ಮುದ್ರಣಾಲಯ ಪ್ರವೇಶಮಾಡಿ, ಒಂದು ಸ್ವತಂತ್ರೋದ್ಯೋಗವನ್ನು ಸಂಪಾದಿಸಿಕೊಂಡನು ಲೋಕದಲ್ಲಿ ಆತ್ಮಾವಲಂಬಿಗಳಿಗೆ ಸಿದ್ಧಿಸದ ಕಾರ್ಯವಾವುದು !



## ಅಧ್ಯಾಯ ೩ 'ಸ್ವಾತಂತ್ರ್ಯೋದ್ಯಮಗಳು'

ಬೆಂಜಮಿನ್ನನು ದಿನಗಳು ಕಳೆದಂತೆ, ಅಲ್ಲಿಯ ಜನಗಳ ಪರಿಚಯ ಮಾಡಿಕೊಂಡು ಅವರ ಗುಣಶೀಲಗಳನ್ನು ಪರಿಶೀಲಿಸುತ್ತ, ಅವರ ಸ್ವಭಾವಕ್ಕೆ ತಕ್ಕಂತೆ ಅವರೊಂದಿಗೆ ಬೆರೆದು ಎಲ್ಲರ ಸ್ನೇಹ ಪ್ರೇಮಗಳಿಗೂ ಪಾತ್ರನಾಗತೊಡಗಿದನು. ಉದ್ಯೋಗಿಯೂ ಬುದ್ಧಿಶಾಲಿಯೂ ಆದ ಅವನಿಗೆ ಸಮವಯಸ್ಕರಾದ ಹಲವುಮಂದಿ ಮಿತ್ರರು ದೊರೆತರು. ಆ ಊರಿನಲ್ಲಿದ್ದವರಲ್ಲೆಲ್ಲ ಅವನೇ ಒಳ್ಳೆಯ ಕೆಲಸಗಾರನಾಗಿದ್ದುದರಿಂದ ಕೈಮರನ ಈ ಮುದ್ರಣಾಲಯಕ್ಕೆ ಬಿಡುವಿಲ್ಲದಂತೆ ಕೆಲಸಗಳು ಬಂದು ಒದಗುತ್ತಿದ್ದವು. ಸೋಮಾರಿತನವಿಲ್ಲದೆ ಸದಾ ಕಾರ್ಯತತ್ಪರನಾಗಿ, ಬೆಂಜಮಿನ್ನನು ತನ್ನ ಜೊತೆಯ ಕೆಲಸಗಾರರಿಗಿಂತಲೂ ಹೆಚ್ಚು ದಡ್ಡುಗಳಿಸಿ, ಮಿತವೆಚ್ಚದಿಂದ ತನ್ನ ಊಟತಿಂಡಿಗಳನ್ನು ಮಾಡಿಕೊಂಡಿದ್ದನು ಬೆಂಜಮಿನ್ನನು ಅಲ್ಲಿ ಕೆಲವು ದಿವಸಗಳು ಕೆಲಸಮಾಡಿಕೊಂಡಿರುವ ವೇಳೆಗೆ, ಅವನು ಅಲ್ಲಿದ್ದ ವಿಚಾರವು ಅವನ ಭಾವನೊಬ್ಬನಿಗೆ ತಿಳಿದುಹೋಯಿತು. ಆಗಲಾತನು

ತಂದೆಯ ಮನೆಯನ್ನು ಬಿಟ್ಟು, ಅಷ್ಟು ಚಿಕ್ಕ ವಯಸ್ಸಿನಲ್ಲೇ ದೂರದೇಶಕ್ಕೆ ಬಂದು ಏಕಾಕಿಯಾಗಿ ವಾಸಿಸುವುದನ್ನು ಆಕ್ಷೇಪಿಸಿ ಅವನಿಗೊಂದು ಕಾಗದವನ್ನು ಬರೆದನು. ಬೆಂಜಮಿನ್ನನು ಅದಕ್ಕೆ ತಕ್ಕಂತೆ ಒಂದು ಪ್ರತ್ಯುತ್ತರವನ್ನು ಬರೆದು ತನ್ನ ಭಾವನಿಗೆ ಕಳುಹಿಸಿದನು. ಆ ಪ್ರತ್ಯುತ್ತರವು, ಆತನು ಆ ಪ್ರಾಂತದ ಗವರ್ನರಾದ ಮಿ|| ಕೀತ್ ಎಂಬವರೊಡನೆ ಮಾತನಾಡುತ್ತಾ ಇದ್ದ ಸಂದರ್ಭದಲ್ಲಿ ತಲುಪಿತು. ಅದರಲ್ಲಿ ಬೆಂಜಮಿನ್ನನು ವ್ಯಕ್ತಪಡಿಸಿದ್ದ ಧೈರ್ಯ, ಸ್ವಾತಂತ್ರ್ಯೇಚ್ಛೆ, ಸ್ವಕಾಯಕಷ್ಟದಿಂದ ಮನುಷ್ಯನು ಜೀವಿಸಬೇಕಾದುದರ ಆವಶ್ಯಕತೆ, ಉದ್ಯೋಗದ ಮಹತ್ವ ಮುಂತಾದುವು ಗವರ್ನರನ ಗಮನಕ್ಕೂ ಬಂದು, ಆತನು ಆ ಪತ್ರ ಬರೆದವನು ಉತ್ತರೋತ್ತರ ಬಹು ಅಭಿವೃದ್ಧಿಗೆ ಬರತಕ್ಕ ಸಾಮರ್ಥ್ಯವಂತನೆಂದು ತರ್ಕಿಸಿದನು. ಮತ್ತು ತರುವಾಯ ಒಂದಾನೊಂದು ದಿನ ತಾನೂ ಮತ್ತು ಕರ್ನಲ್ ಫ್ರೆಂಚ್ ಎಂಬ ಮತ್ತೊಬ್ಬ ಅಧಿಕಾರಿಯೂ ಕೈಮರನ ಮುದ್ರಣಾಲಯದ ಬಳಿಗೇ ಬಂದು, ಬೆಂಜಮಿನನನ್ನು ಕಂಡು, ಆ ಚಿಕ್ಕವನ ಧೈರ್ಯ ಸಾಹಸಾದಿಗುಣಗಳಿಗಾಗಿ ಅವನನ್ನು ಅಭಿನಂದಿಸಿ, ಸ್ವತಂತ್ರವಾಗಿ ಉದ್ಯೋಗಮಾಡೆಂದೂ ಅದಕ್ಕೆ ತಕ್ಕ ಸಹಾಯಗಳನ್ನು ಒದಗಿಸಿಕೊಡುವಂತೆ, ತಾನು ಜೊಸೈಯನಿಗೆ ಒಂದು ಕಾಗದ ಕೊಡುತ್ತೇನೆಂದೂ ಹೇಳಿ, ತನ್ನ ಸರ್ಕಾರಕ್ಕೆ ಬೇಕಾಗುವ ಮುದ್ರಣ ಕೆಲಸಗಳನ್ನೆಲ್ಲ ಅವನಿಗೇ ಕೊಡುವಂತೆ ವಾಗ್ದಾನಮಾಡಿ ಪ್ರೋತ್ಸಾಹಿಸಿದನು.

ಬೆಂಜಮಿನ್ನನು ಮಿ|| ಕೀತ್‌ರವರ ಪರಿಚಯದಿಂದ ಬಹು ಸಂತೋಷಗೊಂಡನು. ಅವರು ಅವನನ್ನು ಆಗಾಗ್ಗೆ ಕರೆಸಿಕೊಂಡು, ತಮ್ಮ ಮನೆಯಲ್ಲೇ ಊಟಉಪಚಾರಾದಿಗಳನ್ನೂ ನಡೆಸಿ ಕಳುಹಿಸುತ್ತಿದ್ದರು. ಕೆಲವು ದಿವಸಗಳ ತರುವಾಯ ಬೆಂಜಮಿನ್ನನು ಅವರಿಂದ ತಮ್ಮ ತಂದೆಗೊಂದು ಪತ್ರವನ್ನು ತೆಗೆದುಕೊಂಡು ಹೊರಟನು. ಅವನು ನೂತನ ವಸ್ತ್ರಗಳನ್ನು ಧರಿಸಿ, ತೇಜಸ್ವಿಯಾಗಿ ಹಿಂದಿರುಗಿದುದನ್ನು ಕಂಡು ಅವನ ಜೊತೆಯ ಕೆಲಸಗಾರರೆಲ್ಲರೂ ಪರಮಾನಂದಗೊಂಡರು. ತನ್ನ ಬಳಿಯಿಂದ ಹೊರಟುಹೋಗಿ ಅಷ್ಟು ಉತ್ತಮ ಸ್ಥಿತಿಯಲ್ಲಿ ಹಿಂದಿರುಗಿದುದು ಅವನ ಅಣ್ಣ ಜೇಮ್ಸ್‌ಗೆ ಮಾತ್ರ ಸಹನೆಯಾಗಲಿಲ್ಲ. ಅವನು ಬೆಂಜಮಿನನನ್ನು ಮಾತ

ನಾಡಿಸಲೂ ಇಚ್ಛಿಸಲಿಲ್ಲ. ಜೋಸೈಯನು ತನ್ನ ಮಗನು ಪರಸ್ಥಳದಲ್ಲಿದ್ದರೂ ಬುದ್ಧಿವಂತನಾಗಿ ದೊಡ್ಡವರ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾದುದನ್ನು ಕಂಡು ಸಂತೋಷಪಟ್ಟನಾದರೂ, ಕೀತ್‌ರವರು ಅಭಿಪ್ರಾಯಪಟ್ಟಂತೆ ಅಷ್ಟು ಚಿಕ್ಕ ವಯಸ್ಸಿನಲ್ಲೇ ಸ್ವಂತ ಮುದ್ರಣಾಲಯವನ್ನಿಟ್ಟು ನಡೆಯಿಸುವುದು ಸಮಂಜಸವಲ್ಲವೆಂದೂ, ಇನ್ನೂ ಕೆಲಕಾಲ ಬೇರೆಯವರ ಬಳಿಯಲ್ಲೇ ನಂಬಿಗಸ್ತನಾಗಿ ಕೆಲಸಮಾಡಿ ಮಿತವೆಚ್ಚದಿಂದ ಹಣವನ್ನು ಶೇಖರಿಸಿಕೊಂಡು ತರುವಾಯ ಸರಿಯಾದ ವಯಸ್ಸು ಪ್ರಾಪ್ತಿಸುವಾಗ ಸ್ವತಂತ್ರವಾಗಿ ಕೆಲಸ ಪ್ರಾರಂಭಮಾಡುವುದು ಉತ್ತಮವೆಂದೂ ಸೂಚಿಸಿ, ಹಾಗೆ ಅವನು ಉದ್ಯೋಗವನ್ನಾರಂಭಿಸುವಾಗ ತಕ್ಕಮಟ್ಟಿಗೆ ಸಹಾಯಮಾಡುವುದಾಗಿಯೂ ಭರವಸೆಕೊಟ್ಟನು

ಬೆಂಜಮಿನ್ ಫ್ರಾಂಕ್ಲಿನ್ನನು ತನ್ನ ತಂದೆಯ ಅನುಮತಿ ಪಡೆದು, ತನ್ನ ಮಿತ್ರನಾದ ಕಾಲಿನ್ಸನೊಂದಿಗೆ ಪ್ರಯಾಣಮಾಡಿ ಫಿಲಡೆಲ್ಫಿಯವನ್ನು ಸೇರಿದನು. ಕಾಲಿನ್ಸನು ಓದುಬರಹ ಮುಂತಾದುವುಗಳಲ್ಲಿ ಬುದ್ಧಿಶಾಲಿಯೇ ಆದರೂ ಅವನಲ್ಲಿ ಕುಡಿತದ ದುರಭ್ಯಾಸವೊಂದು ಮನೆಮಾಡಿದ್ದಿತು. ಅಲ್ಲದೆ, ಅವನಲ್ಲಿ ಪರರನ್ನು ಆಕರ್ಷಿಸುವಂತಹ ಅಂತಹ ಉತ್ತಮ ಗುಣಗಳೂ ಇರಲಿಲ್ಲ. ಆದುದರಿಂದ ಅವನಿಗೆ ಎಲ್ಲೂ ಉದ್ಯೋಗ ದೊರೆಯಲಿಲ್ಲ. ಆದುದರಿಂದ ಅವನಿಗೆ ಬೇಕಾದಾಗಲೆಲ್ಲ ಬೆಂಜಮಿನ್ನನೇ ಹಣ ಕೊಡಬೇಕಾಗಿದ್ದಿತು. ಹೀಗೆ ಪಡೆದ ಹಣವನ್ನು ಅವನು ಕುಡಿತಕ್ಕೆ ಹಾಕಿ ಹಾಳುಮಾಡುತ್ತಿದ್ದುದರಿಂದ ದುರ್ಮಾರ್ಗಿಯಾದ ಅವನಿಗೂ ಬೆಂಜಮಿನ್ನಿಗೂ ಸರಿಬೀಳದೆಹೋಯಿತು. ಮುಂದೆ ಕೆಲವು ದಿನಗಳೊಳಗಾಗಿ ಅವನು ಎಲ್ಲೋ ಕೆಲಸವಿದೆಯೆಂದೂ, ಅಲ್ಲಿ ದುಡಿದು ಸಾಲ ತೀರಿಸುವೆನೆಂದೂ ಹೇಳಿ ಹೊರಟು ಹೋದನು. ದುಸ್ಸಂಗವು ದ್ರವ್ಯನಷ್ಟದೊಂದಿಗೆ ಈ ಬಗೆಯಿಂದ ದೂರವಾಗಲು ಬೆಂಜಮಿನ್ನನು ಮುಂದೆ ಇಂತಹ ಸ್ನೇಹಿತರೊಂದಿಗೆ ಬೆರೆಯದೆ ಏಕಾಂಗಿಯಾಗಿರಬೇಕೆಂದು ನಿರ್ಧರಿಸಿದನು.

ಮಿ|| ಕೀತ್‌ರವರಿಗೆ, ಬೆಂಜಮಿನ್ನನ ತಂದೆಯು ತಮ್ಮ ಪತ್ರದಂತೆ ಅವನಿಗೆ ಸಹಾಯಮಾಡದಿದ್ದುದಕ್ಕಾಗಿ ಅಸಮಾಧಾನವಾಯಿತು ಆತನಿಗೆ ವಯಸ್ಸಾದರೂ ವಿವೇಕವಿಲ್ಲವೆಂದು ಆಕ್ಷೇಪಿಸಿ ಅವರು -' ಚಿಂತೆಯಿಲ್ಲ,

ನಿನಗೆ ಬೇಕಾದ ಪದಾರ್ಥಗಳ ಒಂದು ಪಟ್ಟಿಯನ್ನು ತಯಾರಿಸಿಕೊಡು. ಸಾಮಾನುಗಳನ್ನು ನೀನೇ ಇಂಗ್ಲೆಂಡಿಗೆ ಹೋಗಿ ತಂದುಬಿಡುವೆಯಂತೆ! ಆ ಬಗ್ಗೆ ನಾನೇ ಯೋಗ್ಯ ಸಹಾಯಮಾಡುತ್ತೇನೆ' ಎಂದು ಹೇಳಿಬಿಟ್ಟರು. ಆ ಮಾತನ್ನು ಕೇಳಿ ಆ ಯುವಕನಿಗೆ ಅತ್ಯಾಶ್ಚರ್ಯವಾಯಿತು. ಆ ದೊಡ್ಡ ಮನುಷ್ಯರು ತನ್ನ ವಿಷಯದಲ್ಲಿ ತೋರಿಸುತ್ತಿದ್ದ ಪ್ರೀತಿವಿಶ್ವಾಸಗಳಿಗಾಗಿ, ಬಹು ಸಂತೋಷಪಟ್ಟು ಅವರ ಇಚ್ಛಾನುಸಾರವಾಗಿಯೇ ಒಂದು ಪಟ್ಟಿಯನ್ನು ತಯಾರಿಸಿಕೊಟ್ಟನು. ಆಗ ಅವರು -' ನೀನು ಈ ಪಟ್ಟಿಯನ್ನು ಒಯ್ದು, ಇಂಗ್ಲೆಂಡಿನಲ್ಲಿ ನಾನು ವಿಳಾಸಕೊಡುವವರಿಗೆ ಕೊಡು. ಅವರು ನಿನಗೆ ಬೇಕಾದ ಪದಾರ್ಥಗಳನ್ನೆಲ್ಲ ಕೊಡುತ್ತಾರೆ' ಎಂದು ಹೇಳಿದರು. ಬೆಂಜಮಿನ್ನನು ಹೊರಡಲು ಸಿದ್ಧನಾದನು. ಆದರೆ ಆ ವೇಳೆಗೆ ಅವರು ಹೇಳಿದ್ದಂತೆ ಆ ಪರಿಚಯಸ್ಥನಿಗೆ ಪತ್ರಗಳನ್ನು ಕಳುಹಿಸಲಿಲ್ಲ. ಆದರೂ ಬೆಂಜಮಿನ್ನನು ಅಧೈರ್ಯಗೊಳ್ಳದೆ ಹೊರಟು ಪ್ರಯಾಣಮಾಡಿದನು. ಅವನು ಇಂಗ್ಲೆಂಡಿನ ಬಳಿ ಇರುವ ಇಂಗ್ಲಿಷ್ ಕಾಲುವೆಯಲ್ಲಿದ್ದಾಗ ಮಿ|| ಕೀತ್‌ರವರು ವರ್ತಕರಿಗೆ ಬರೆದಿದ್ದ ನಾಲ್ಕೈದು ಕಾಗದಗಳು ಸಿಕ್ಕಿದುವು. ಬೆಂಜಮಿನ್ನನು ಅವುಗಳನ್ನೊಯ್ದು ಆ ವಿಳಾಸದಾರನಿಗೆ ತಲ್ಪಿಸಿದನಾದರೂ ಅದರಿಂದ ಅಷ್ಟೇನೂ ಹೆಚ್ಚಿನ ಪ್ರಯೋಜನವಾಗಲಿಲ್ಲ. ಆ ವ್ಯಾಪಾರಿಯು ಆ ಪತ್ರಗಳನ್ನು ಬಹು ಅನಾದರಣೆಯಿಂದ ನೋಡಿ, ಮೋಸಗಾರನಾದ ಆತನೊಂದಿಗೆ ಯಾವ ವ್ಯವಹಾರವೂ ಬೇಡವೆಂದು ಹೇಳಿಬಿಟ್ಟು ತನ್ನ ಕೆಲಸದಮೇಲೆ ಹೊರಟುಹೋದನು. ಬಹುದೂರ ಪ್ರಯಾಣಮಾಡಿ ಬಂದು ಸೇರಿದ್ದ ಆ ಪರಸ್ಥಳದಲ್ಲಿ ಪ್ರಾರಂಭಕ್ಕೇ ಈ ಬಗೆಯ ಉತ್ತೇಜನ ದೊರೆತುದನ್ನು ಕಂಡು ಅವನು ಏನೂ ತೋರದೆ ಸ್ವಲ್ಪಹೊತ್ತು ನಿಂತಿದ್ದು ತರುವಾಯ ತನಗೆ ಸಮುದ್ರ ಪ್ರಯಾಣದಲ್ಲಿ ಪರಿಚಿತರಾಗಿದ್ದ ಡೆನ್ಹಾಮ್ ಎಂಬೊಬ್ಬರನ್ನು ಸಂಧಿಸಿ, ಮಿ|| ಕೀತ್‌ರವರ ಪತ್ರಕ್ಕೆ ಆ ವ್ಯಾಪಾರಿಯಿಂದ ಅಂತಹ ತಿರಸ್ಕಾರ ದೊರೆತುದಕ್ಕೆ ಕಾರಣವೇನು ಎಂದು ಪ್ರಶ್ನಿಸಿದನು. ಆಗಲಾತನು,- ' ಕೀತ್‌ನು ತನ್ನ ಕೈಯಲ್ಲಾಗದಿದ್ದರೂ ಎಲ್ಲರನ್ನೂ ಮೆಚ್ಚಿಸಬೇಕು ಎಂಬ ಸ್ವಭಾವದ ಮನುಷ್ಯ. ಅವನಿಗೆ ಎಲ್ಲೂ ಸಾಲ ಹುಟ್ಟುವುದಿಲ್ಲ. ನೀನು, ಇನ್ನು ಮುಂದೆ ಈ ಊರಿನಲ್ಲೇ ಒಂದು ಕೆಲಸ ನೋಡಿ

ಕೊಂಡು, ಸಂಪಾದನೆಮಾಡಿ ಮಿತವೆಚ್ಚದಿಂದ ದ್ರವ್ಯಶೇಖರಮಾಡಿಕೊಂಡು, ಮುಂದೆ ಮುದ್ರಣಾಲಯವನ್ನು ಸ್ವತಃ ಸ್ಥಾಪಿಸಿಕೊಳ್ಳಲು ಪ್ರಯತ್ನಿಸು. ಅವರಿವರಮೇಲೆ ಭರವಸೆಯನ್ನಿಟ್ಟ ಕಾರ್ಯವು ಎಂದಿಗೂ ನಡೆಯಲಾರದು' ಎಂದು ಹೇಳಿದನು. ಬೆಂಜಮಿನ್ನಿಗೂ ಅದೇ ಸೂಕ್ತವೆಂದು ತೋರಿತು ಒಡನೆ ಅವನು ಇಂಗ್ಲೆಂಡಿನಲ್ಲಿ ವಾಟ್ಸ್ ಎಂಬಾತನ ಬಳಿ ಕೆಲಸಕ್ಕೆ ಸೇರಿದನು. ಅವನ ಶ್ರದ್ಧೆ ಚಟುವಟಿಕೆ ಕರ್ತವ್ಯತಾಜ್ಞಾನ ಮುಂತಾದುದನ್ನು ಕಂಡು ವಾಟ್ಸನಿಗೆ ಬಹು ಸಂತೋಷವಾಯಿತು. ಅವನಿಗೆ ಗ್ರಂಥವ್ಯಾಸಂಗ ವಿಷಯದಲ್ಲಿ ಚಿಕ್ಕಂದಿನಿಂದಲೂ ಬೆಳೆದುಬಂದಿದ್ದ ಸ್ವಪ್ರೋಚಾರಣೆ, ಬುದ್ಧಿಕುಶಲತೆ, ಉದ್ಯೋಗಶೀಲತೆ ಮುಂತಾದುವುಗಳೂ, ಗಹನವಾದ ಅನೇಕ ವಿಷಯಗಳಲ್ಲಿ ಅವನಿಗಿದ್ದ ತಿಳಿವಳಿಕೆಯೂ, ಯಜಮಾನನ ಗಮನಕ್ಕೆ ಬಂದು ಅವನು ಅನೇಕ ವಿಷಯಗಳಲ್ಲಿ ತನಗಿಂತಲೂ ಬೆಂಜಮಿನ್‌ನೇ ಉತ್ತಮನೆಂದುಕೊಂಡು, ಅವನನ್ನು ವಿಶೇಷ ಗೌರವಭಾವದಿಂದ ಕಾಣುತ್ತಿದ್ದನು.

ಬೆಂಜಮಿನ್ನನು ಆಹಾರ ಪಾನೀಯಗಳ ವಿಷಯದಲ್ಲಿ ಬಹು ಜಾಗರೂಕನಾಗಿ ಸಸ್ಯಾಹಾರ ನಿಯಮವನ್ನೇ ಇಟ್ಟುಕೊಂಡಿದ್ದನೆಂದು ಈ ಮೊದಲೇ ಹೇಳಿದೆಯಲ್ಲವೆ! ಅಲ್ಲದೆ ಅವನು ತನ್ನ ಜೊತೆಗಾರರಂತೆ ಮದ್ಯಪಾನಮಾಡುತ್ತಲೂ ಇರಲಿಲ್ಲ ನಿಯಮಿತಕಾಲಗಳಲ್ಲಿ ತನ್ನ ಸ್ವಾಭಾವಿಕ ಆಹಾರವಾದ ರೊಟ್ಟಿಯನ್ನು ತಿಂದು ನೀರು ಕುಡಿದು ಕೆಲಸಕ್ಕೆ ಸಿದ್ಧನಾಗುತ್ತಿದ್ದನು. ಆದರೂ ಅವನ ದೇಹದಾರ್ಢ್ಯವು ವಿಶೇಷವಾಗಿತ್ತು. ಇದನ್ನು ಕಂಡು ಮಾಂಸಾಹಾರಿಗಳಾಗಿದ್ದ ಅವನ ಜೊತೆಯ ಕೆಲಸಗಾರರು ಆಶ್ಚರ್ಯಪಡತೊಡಗಿದರು. ಆಗ ಬೆಂಜಮಿನ್ನನು ತನ್ನ ಆಹಾರ ಮತ್ತು ಪಾನೀಯ ಇವುಗಳ ಉತ್ಕೃಷ್ಟತೆಯನ್ನೂ ಮದ್ಯಮಾಂಸಾದಿಗಳ ನಿಕೃಷ್ಟತೆಯನ್ನೂ ಅವರ ಮನಸ್ಸಿಗೆ ಹಿಡಿಯುವಂತೆ ವರ್ಣಿಸಿದನು. ಒಡನೆ ಅವರು ತಮ್ಮ ಆಹಾರದಲ್ಲಿ ಬದಲಾವಣೆ ಮಾಡಿಕೊಳ್ಳದಿದ್ದರೂ, ಅವನು ಹೇಳುವುದರಲ್ಲಿದ್ದುದರ ಸತ್ಯತೆಯನ್ನು ಕಂಡು ಮೆಚ್ಚಿಕೊಂಡರು. ಇದೊಂದು ವಿಷಯದಲ್ಲಿ ಮಾತ್ರವಲ್ಲ - ಇತರ ಹಲವು ವಿಚಾರಗಳಲ್ಲೂ

ಅವನು ಅವರಿಗೆ ಸಮಯಸಿಕ್ಕಾಗಲೆಲ್ಲ ಬೋಧಿಸುತ್ತಾ ಅವರನ್ನು ಉತ್ತಮ ಮಾರ್ಗಕ್ಕೆ ತರಲು ಪ್ರಯತ್ನಿಸುತ್ತಿದ್ದನು.

ಹೀಗೆ ಒಂದೂವರೆ ವರ್ಷಕಾಲ ಇಂಗ್ಲೆಂಡಿನಲ್ಲಿ ವಾಸಮಾಡಿದ ತರುವಾಯ ಅವನಿಗೆ ಸ್ವದೇಶಕ್ಕೆ ಹೋಗಬೇಕೆಂದು ಇಚ್ಛೆಯಾಯಿತು. ಆಗ್ಗೆ ಮೇಲೆ ಹೇಳಿದ ಡನ್ಹ್ಯಾಮ್ ಎಂಬ ಆತನ ಮಿತ್ರನಿಗೆ ಸಹಾಯಕನೂ ಗುಮಾಸ್ತೆಯೂ ಆಗಿ ಕೆಲಕಾಲ ಕೆಲಸಮಾಡಿಕೊಂಡಿರಬೇಕೆಂದೂ, ಮುಂದೆ ಸ್ವತಃಕಾರ್ಯ ನಿರ್ವಾಹಮಾಡುವ ಶಕ್ತಿಯನ್ನು ಬೆಂಜಮಿನನು ತೋರ್ಪಡಿಸಿದಾಗ, ಪ್ರತ್ಯೇಕ ಮುದ್ರಣಾಲಯಕ್ಕೆ ಬೇಕಾದ ಬಂಡವಾಳವನ್ನು ತಾನೇ ಕೊಡುವುದಾಗಿಯೂ ಆತನು ಹೇಳಿದನು. ಬೆಂಜಮಿನನು ಅದಕ್ಕೊಪ್ಪಿ, ಆತನ ವ್ಯಾಪಾರದ ಸರಕುಗಳನ್ನು ಶೇಖರಿಸುವುದು ಮುಂತಾದ ಕೆಲಸಗಳಲ್ಲಿ ತೊಡಗಿದನು. ಹೀಗೆ ಅಲ್ಲಿ ಸಂಗ್ರಹಿಸಬೇಕಾದ ಪದಾರ್ಥಗಳನ್ನೆಲ್ಲ ತೆಗೆದುಕೊಂಡು, ಅವರಿಬ್ಬರೂ ೧೭೨೬ ನೆಯ ಜೂಲೈ ೨೩ ರಲ್ಲಿ ಹಡಗುಹತ್ತಿ ಪ್ರಯಾಣಮಾಡಿ ಫಿಲಡೆಲ್ಫಿಯಾವನ್ನು ಸೇರಿದರು. ಮಾರ್ಗಮಧ್ಯದಲ್ಲಿ ಬೆಂಜಮಿನನು ತನ್ನ ದಿನಚರ್ಯೆಯು ಮುಂದೆ ಹೇಗಿರಬೇಕು ಎಂದು ಮುಂತಾಗಿ ಯೋಚಿಸಿ ನಿರ್ಧರಿಸಿಕೊಂಡನು.

ಮುದ್ರಣಾಲಯದ ಉದ್ಯೋಗದಿಂದ ಸಾಹುಕಾರರ ಬಳಿ ಸರಕು ಅಳೆಯುವ ತೂಗುವ ಮುಂತಾದ ಹೊಸ ಉದ್ಯೋಗಕ್ಕೆ ಬಂದ ಬೆಂಜಮಿನನು ಬಹುಕಾಲ ಅಲ್ಲೂ ನಿಲ್ಲಲು ಅನುವು ದೊರೆಯಲಿಲ್ಲ. ಅವನನ್ನು ತನ್ನ ಮನೆಯಲ್ಲೇ ಇಟ್ಟುಕೊಂಡು ಊಟತಿಂಡಿಗಳನ್ನಿಟ್ಟು ಮಗನಿಗಿಂತಲೂ ಹೆಚ್ಚು ವಾತ್ಸಲ್ಯದಿಂದ ಕಾಪಾಡುತಿದ್ದ ಡನ್ಹ್ಯಾಂ ಎಂಬಾತನು ಮುಂದೆ ಕೆಲವು ದಿನಗಳೊಳಗಾಗಿ ಕಾಹಿಲೆಬಿದ್ದನು ಆತನೊಂದಿಗೇ ಬೆಂಜಮಿನನೂ ಕಾಹಿಲೆಬಿದ್ದನಾದರೂ, ಇವನಿಗೆ ಶೀಘ್ರವಾಗಿ ಗುಣವಾಯಿತು. ವೃದ್ಧನಾದ ಡನ್ಹ್ಯಾಂನು ಅದೇ ರೋಗದಲ್ಲೇ ನರಳಿನರಳಿ ಕೊನೆಗೆ ಅವಕ್ಕೆ ತುತ್ತಾದನು. ಬೆಂಜಮಿನನಿಗೆ ಮುಂದಿನ ಮಾರ್ಗವೇ ತೋರದಂತಾಯಿತು. ಆ ಕಷ್ಟಕಾಲದಲ್ಲಿ ಅವನಿಗೆ ಹಿಂದಿನ ಮುದ್ರಣಾಲಯಾಧಿಪತಿಯಾಗಿದ್ದ ಕೈಮರನೇ ದಿಕ್ಕೆಂದು ತೋರಿತು ಕೈಮರನು, ಬೆಂಜಮಿನನಲ್ಲಿದ್ದ ಮುದ್ರಣಾಲಯದ ಕಾರ್ಯಾನುಭವವನ್ನು ಅವನಿಂದ ತನ್ನ ಕೆಲಸ

ಗಾರರಿಗೆ ಕಲಿಸಿಕೊಟ್ಟು ತರುವಾಯ ಅವನನ್ನು ಓಡಿಸಿಬಿಡಬಹುದೆಂದು ಎಣಿಸಿದ್ದನು. ಈ ಕೃತ್ರಿಮವನ್ನರಿಯದೆ ಬೆಂಜಮಿನನು, ಎಲ್ಲರನ್ನೂ ಎಂದಿನಂತೆಯೇ ತನ್ನ ಸ್ವಾಭಾವಿಕ ಪ್ರೀತಿವಿಶ್ವಾಸಗಳಿಂದಲೇ ಕಾಣುತ್ತ ಇಂಗ್ಲೆಂಡಿನಲ್ಲಿದ್ದಾಗ ತಾನು ಕಲಿತುಬಂದ ಮುದ್ರಣಕಾರ್ಯದ ನವೀನ ಪದ್ಧತಿಗಳನ್ನೆಲ್ಲ ಪ್ರಚಾರಕ್ಕೆ ತಂದನು. ಇದರಿಂದ ಕೈಮರನಿಗೆ ದಿನ ದಿನಕ್ಕೆ ಹೆಚ್ಚು ಲಾಭ ದೊರಕುತ್ತಿದ್ದಿತಾದರೂ, ಬೆಂಜಮಿನನು ತನಗಿಂತಲೂ ಹೆಚ್ಚು ಸಾಮರ್ಥ್ಯವಂತನಾಗಿರುವನಲ್ಲಾ ಎಂಬೊಂದು ಅಸೂಯೆಯು ಅವನ ಮನಸ್ಸಿನಲ್ಲಿ ಮನೆಮಾಡಿಕೊಂಡಿರಲು ತನ್ಮೂಲಕ ಅವನನ್ನು ಎದ್ದರೆ ಕುಳಿತರೆ ಆಕ್ಷೇಪಿಸುತ್ತಾ ಕಿರುಕುಳಪಡಿಸತೊಡಗಿದನು. ಬೆಂಜಮಿನನಿಗೆ ಇದು ಅಸಹನೀಯವಾಗಿ, ತಾವು ಮಾಡಿಕೊಂಡಿದ್ದ ವಾಯಿದೆಯು ತೀರಿದೊಡನೆಯೇ ಅಲ್ಲಿಂದ ಹೊರಡಬೇಕೆಂದುಕೊಂಡನು. ಆದರೆ ಅಷ್ಟರಲ್ಲೇ ಒಂದಾನೊಂದು ಅಲ್ಪ ಕಾರಣಕ್ಕಾಗಿ ಕೈಮರನು ಕೋಪಿಸಿಕೊಂಡು ಅವನನ್ನು ಆಕ್ಷೇಪಿಸಿದನು. ಆತ್ಮಗೌರವವನ್ನೇ ಎಲ್ಲಕ್ಕಿಂತಲೂ ಹೆಚ್ಚಿನ ಸೌಭಾಗ್ಯವನ್ನಾಗಿ ಎಣಿಸಿದ್ದ ಬೆಂಜಮಿನನು, ತನ್ನ ಗೌರವಕ್ಕೆ ಹಾನಿಕರವಾಗಿದ್ದ ಆ ಸ್ಥಳದಲ್ಲಿದ್ದು ಕೆಲಸಮಾಡುವುದಕ್ಕೆ ಒಪ್ಪದೆ ಒಡನೆ ಬಿಟ್ಟು ನಡೆದನು.

ಬೆಂಜಮಿನನು ಕೈಮರನ ಬಳಿ ಕೆಲಸವನ್ನು ಬಿಟ್ಟಾಗ, ಅವನಿಗೆ ಅಪ್ರಾರ್ಥಿತವಾಗಿ ಒಂದು ಸಹಾಯವು ದೊರೆಯಿತು. ಅವನ ಜೊತೆಯ ಕೆಲಸಗಾರನಾಗಿದ್ದ ಮೆರಿಡಿತ್ ಎಂಬಾತನು, ಅವನನ್ನು ಕಂಡು,—'ನೀವು ಒಪ್ಪುವುದಾದರೆ ನಮ್ಮ ತಂದೆಯಿಂದ ಹಣವನ್ನು ಪಡೆದು ಮುದ್ರಣಸಾಮಗ್ರಿಗಳನ್ನು ತರಿಸಿ ನಾವೇ ಒಂದು ಪ್ರತ್ಯೇಕ ಮುದ್ರಣಾಲಯವನ್ನು ಇಡೋಣ. ಅದಕ್ಕೆ ನಿಮ್ಮದೇ ವಿಚಾರಣಾಧಿಕಾರವಿರಲಿ. ಬಂಡವಾಳವು ನನ್ನದಿರಲಿ. ಉತ್ಪತ್ತಿಯಲ್ಲಿ ಇಬ್ಬರೂ ಸಮಭಾಗಗಳಿಗೆ ಬಾಧ್ಯರಾಗಿರೋಣ' ಎಂದನು. ಅದು ಬೆಂಜಮಿನನಿಗೂ ಸಮ್ಮತವಾಯಿತು. ಹೀಗಿರಲು ಆ ಸಮಯದಲ್ಲೇ ಬೆಂಜಮಿನ್ನನ ಕೀರ್ತಿಯನ್ನೂ ಜನಾನುರಾಗವನ್ನೂ ಹೆಚ್ಚಿಸಲು ಸಾಧಕನಾದ ಒಂದು ಅನುಕೂಲ ಸಂದರ್ಭವೂ ಒದಗಿತು ನ್ಯೂಜರ್ಸಿಯಲ್ಲಿ ದ್ರವ್ಯಾಭಾವವುಂಟಾಗಿ ಜನಗಳಲ್ಲಿ ಚಲಾವಣೆಗೆ ತಕ್ಕಷ್ಟು

ನಾಣ್ಯಗಳಲ್ಲದೆ ಹೊಸನೋಟುಗಳನ್ನು ಮುದ್ರಿಸಿ ಚಲಾವಣೆಗೆ ಅನುಕೂಲ ಪಡಿಸಬೇಕಾದುದು ಆವಶ್ಯಕವಾಯಿತು. ಹೊಸ ನೋಟುಗಳ ನಮೂನೆ ಅವುಗಳಮೇಲಿರಬೇಕಾದ ಚಿತ್ರ ಅಕ್ಷರಗಳು ಸಂಕೇತ ಮುಂತಾದುವು ಗಳನ್ನು ತಯಾರಿಸುವ ವಿಧಾನವು ಆ ಕಾಲದಲ್ಲಿ ಅಮೇರಿಕದಲ್ಲಿ ಬೆಂಜಮಿನ್ ಒಬ್ಬನಿಗೆ ಮಾತ್ರವೇ ತಿಳಿದಿದ್ದಿತು. ಕೈಮರನು ಇಂತಹ ಸಂದರ್ಭದಲ್ಲಿ ಆ ಉತ್ತಮ ಕೆಲಸಗಾರನನ್ನು ಕಳೆದುಕೊಂಡೆನಲ್ಲಾ ಎಂದು ಬಹು ವಿಷಾದ ಪಟ್ಟು, ಏನೇನೋ ಸಂಧಾನಗಳನ್ನು ನಡೆಸಿ, ಅವನನ್ನು ಕರೆಸಿಕೊಂಡು ವಿಶೇಷ ಗೌರವದಿಂದ ಉಪಚರಿಸಿ ಪುನಃ ತನ್ನ ಬಳಿ ಕೆಲಸಕ್ಕೆ ಸೇರಿಸಿ ಕೊಂಡನು. ನೋಟುಗಳನ್ನು ಛಾಪಿಸುವ ಕೆಲಸವು ಕೈಮರನಿಗೇ ದೊರೆ ಯಿತು. ಈ ಮೂಲಕವಾಗಿ ಬೆಂಜಮಿನ್‌ನ ಪ್ರಖ್ಯಾತಿಯು ಅಲ್ಲಿಯ ಸರ್ಕಾ ರಿಯ ಅಧಿಕಾರಿಗಳು, ಪ್ರಜಾಪ್ರಮುಖರು ಮುಂತಾದವರಿಗೆಲ್ಲ ತಿಳಿಯಲು ಅವಕಾಶವಾಯಿತು. ಅವರೆಲ್ಲರೂ ಅವನ ಕಲಾಕೌಶಲವನ್ನು ಕಂಡು ಅವ ನಿದ್ದ ಬಳಿಗೇ ಬಂದು ಅವನನ್ನು ಕಂಡು ಶ್ಲಾಘಿಸಿ ಹೋಗುವರು. ಅಮೇರಿಕ ದಲ್ಲೆಲ್ಲ ಬೆಂಜಮಿನ್ನನು ತಯಾರಿಸಿದ ಈ ನೋಟಿನ ಅಚ್ಚೇ ಮೊದಲನೆ ಯದೆನ್ನುವರು. ಪ್ರಜಾಪ್ರಮುಖರಲ್ಲನೇಕರು ಅವನನ್ನು ತಮ್ಮ ಮನೆಗಳಿಗೆ ಕರೆಸಿಕೊಂಡು ಉಪಚರಿಸಿ ಕಳುಹಿಸುವರು. ಹೀಗೆ ದಿನದಿನಕ್ಕೆ ಅವನ ಮೇಲೆ ಪ್ರಜೆಗಳ ಮತ್ತು ಸರ್ಕಾರದವರ ಪ್ರೀತಿವಿಶ್ವಾಸಗಳು ನಿಲ್ಲಲು ಆಸ್ಪ ದವಾಯಿತು.

ಮುಂದೆ ಕೆಲವು ದಿನಗಳೊಳಗಾಗಿಯೇ ಇಂಗ್ಲೆಂಡಿನಿಂದ ಮುದ್ರಣ ಸಾಮಗ್ರಿಗಳು ಬಂದೊಡನೆಯೇ ಬೆಂಜಮಿನ್ನನೂ ಬ್ರಾಡ್‌ಫರ್ಡನೂ ಕೈಮ ರನ ಬಳಿ ಕೆಲಸವನ್ನು ಬಿಟ್ಟು, ಬೇರೆಯೊಂದು ಮನೆಮಾಡಿಕೊಂಡು ಅಲ್ಲಿ ತಮ್ಮ ಮುದ್ರಣಾಲಯವನ್ನು ಸ್ಥಾಪಿಸಿದರು. ಬೆಂಜಮಿನ್ನನ ಶ್ರದ್ಧೆ ಕಾರ್ಯ ತತ್ಪರತೆ, ಕೆಲಸದ ಅಂದ ಚಂದಗಳು ಸಕಾಲಕ್ಕೆ ಉತ್ತಮರೀತಿ ಯಿಂದ ಕೆಲಸಮಾಡಿಕೊಡುವ ಅವನ ನಿಯಮಪಾಲನಾ ಗುಣ, ಆತನ ಋಜುಮಾರ್ಗ ಇವುಗಳ ಫಲವಾಗಿ ಆ ಪ್ರಾಂತದ ಎಲ್ಲಾ ಕೆಲಸಗಳೂ ಅವನ ಬಳಿಗೇ ಬರಲಾರಂಭಿಸಿದುವು. ಅವನು ಮಾಡಿದ ಕೆಲಸಗಳಲ್ಲಿ ಯಾವ ತಪ್ಪೂ ಇಲ್ಲದೆ ಅವು ಅಂದವಾಗಿ ಸ್ಫುಟವಾಗಿ ಛಾಪೆಯಾಗಿರುತ್ತಿ

ದ್ದುವಾದುದರಿಂದ ಎಲ್ಲರೂ ಹುಡುಕಿಕೊಂಡು ಅವನ ಬಳಿಗೇ ಬರತೊಡಗಿದರು ಹೀಗೆ ಕೆಲವು ಕಾಲ ನಡೆಯುವುದರೊಳಗಾಗಿಯೇ ಅವರ ಪಾಲುಗಾರಿಕೆಯ ನಾಯಿದೆಯೂ ಮುಗಿಯುವ ವೇಳೆ ಬಂದಿತು. ಆಗ ಬೆಂಜಮಿನ್ನನ ಹಿತಚಿಂತಕರನೇಕರು, ಅವನಿಗೆ, ಬೇರೆಯಾಗಿ ಸ್ವತಂತ್ರನಾಗೆಂದೂ ಬೇಕಾದರೆ ತಾವು ದ್ರವ್ಯಸಹಾಯ ಮಾಡುವೆವೆಂದೂ ಹೇಳಿದರು. ಅಲ್ಲದೆ ಮೆರಿಡಿತ್ತನೂ ಸಾಲದ ಬಾಧೆಯನ್ನು ತಡೆಯಲಾರದೆ ಮುದ್ರಣಾಲಯವನ್ನು ಬೆಂಜಮಿನ್ನಿಗೇ ವಹಿಸಿ, ತನ್ನ ಭಾಗದ ದ್ರವ್ಯವನ್ನು ಪಡೆದು ಋಣಮುಕ್ತನಾಗಲು ಆತುರಗೊಂಡಿದ್ದನು. ಆ ಅನುಕೂಲ ಸಂದರ್ಭವನ್ನು ಕಳೆದುಕೊಳ್ಳಬಾರದೆಂದೆಣಿಸಿ ಬೆಂಜಮಿನ್ನನು ತನ್ನ ಕೆಲಮಂದಿ ಮಿತ್ರರ ಸಹಾಯದಿಂದ ಮೆರಿಡಿತ್ತನ ಭಾಗದಷ್ಟು ಹಣವನ್ನು ಅವನಿಗೆ ಕೊಟ್ಟು ಮುದ್ರಣಾಲಯವನ್ನು ತನ್ನ ಸ್ವಾಧೀನಕ್ಕೆ ಪಡೆದು ಸ್ವತಂತ್ರನಾದನು

ಆ ಊರಿನಲ್ಲೀ ಮುದ್ರಣಾಲಯಗಳನ್ನಿಟ್ಟು ನಡಿಸುತ್ತಿದ್ದ ಬ್ರಾಡ್ ಫರ್ಡ್ ಮತ್ತು ಕೈಮರ್ ಇವರ ಧ್ಯೇಯಗಳಿಗೂ ಬೆಂಜಮಿನ್ನನ ಧ್ಯೇಯಗಳಿಗೂ ವಿಶೇಷ ವ್ಯತ್ಯಾಸವಿದ್ದಿತು. ಅವರು ದ್ರವ್ಯಸಂಪಾದನೆಗಾಗಿಯೇ ಕೆಲಸಮಾಡುತ್ತಿದ್ದವರು. ಬೆಂಜಮಿನ್ನನು ತನ್ನ ದೇಶದ ಆ ಭಾಗದಲ್ಲಿ ಮುದ್ರಣಕಲೆಯನ್ನು ಅತ್ಯುಚ್ಚ ದೆಸೆಗೆ ತಂದು ಜನಗಳಲ್ಲಿ ಪರಸ್ಪರ ಪ್ರೀತಿ ವಿಶ್ವಾಸ ಭ್ರಾತೃಭಾವಗಳನ್ನು ಹೆಚ್ಚಿಸಬೇಕು ಎಂಬ ಉದ್ದೇಶದಿಂದ ಕೆಲಸಮಾಡುತ್ತಿದ್ದನು. ಹೀಗೆ ಉನ್ನತ ಧ್ಯೇಯದಿಂದ ಉದ್ಯೋಗತತ್ಪರನಾಗಿದ್ದ ಅವನು ಒಂದು ಸಂಘವನ್ನು ಏರ್ಪಡಿಸಿ, ಅದರಲ್ಲಿ ಪ್ರತಿಶುಕ್ರವಾರವೂ ಎಲ್ಲರೂ ಕಲೆತು ಜ್ಞಾನಾಭಿವೃದ್ಧಿಗಾಗಿ, ನೀತಿಶಾಸ್ತ್ರ, ಅರ್ಥಶಾಸ್ತ್ರ, ವಿಜ್ಞಾನಶಾಸ್ತ್ರ, ರಾಜನೀತಿಶಾಸ್ತ್ರ ಮುಂತಾದ ಅನೇಕ ವಿಷಯಗಳಮೇಲೆ ಚರ್ಚೆ ನಡೆಸಲು ಏರ್ಪಡಿಸಿಕೊಂಡರು. ಮುಂದೆ ಕೆಲವು ದಿವಸಗಳಮೇಲೆ (ಎಂದರೆ ೧೭೨೯ನೆಯ ಸೆಪ್ಟಂಬರ್ ೨೫ರಲ್ಲಿ) ಬೆಂಜಮಿನ್ನನು ಪೆನ್‌ಸಿಲ್‌ವೇನಿಯಾ ಗೆಜೆಟ್ ಎಂಬೊಂದು ಪತ್ರಿಕೆಯನ್ನು ತನ್ನ ಹೆಸರಿನಲ್ಲಿ ಹೊರಡಿಸಿದನು. ಆ ಪತ್ರಿಕೆಯು ಆವರೆಗೆ ಹೊರಟಿದ್ದ ಎಲ್ಲಾ ಪತ್ರಿಕೆಗಳಿಗಿಂತಲೂ, ಅಂದವಾಗಿಯೂ, ಸ್ಫುಟವಾಗಿಯೂ ಇದ್ದಿತು, ಮಾತ್ರವಲ್ಲ-ಅದರಲ್ಲಿ ಬೆಂಜಮಿನ್ನನೇ ಬರೆಯುತ್ತಿದ್ದ ಲೇಖನಗಳು ವಿಶೇಷ ಆಕರ್ಷಕವಾಗಿರುತ್ತಿದ್ದವು. ವಿವಿಧ ವಿಷಯ

ಗರ್ಭಿತ ಲೇಖನಗಳನ್ನು ದೀರ್ಘಾಲೋಚನೆಯಿಂದ ಬರೆದು ಪ್ರಕಟಿಸು ತ್ತಿದ್ದ ಅವನ ಪತ್ರಿಕೆಗೆ ಬಹು ಶೀಘ್ರಕಾಲದಲ್ಲೇ ಅನೇಕರು ಚಂದಾದಾರ ರಾದರು. ತಾವು ಮಿತ್ರಮಂಡಲಿಯಲ್ಲಿ ಚರ್ಚಿಸುತ್ತಿದ್ದ ಹಲವು ಮಹ ತ್ವದ ವಿಷಯಗಳನ್ನು ಆ ಪತ್ರಿಕೆಯಲ್ಲಿ ಎಲ್ಲರ ತಿಳಿವಳಿಕೆಗಾಗಿಯೂ ಪ್ರಕಟಿ ಸುತ್ತಿದ್ದನು. ದಿನದಿನಕ್ಕೆ ಮುದ್ರಣಾಲಯದಲ್ಲಿ ನಡೆವ ಕೆಲಸ, ಪತ್ರಿಕೆಯ ಮಾರಾಟ, ಸರ್ಕಾರದವರು ಕೊಡುತ್ತಿದ್ದ ಕೆಲಸ ಮುಂತಾದುವುಗಳಿಂದ ಅವನ ಸಂಪಾದನೆಯು ಹೆಚ್ಚಿ, ಅವನು ತನ್ನ ಕೈಕೆಳಗೆ ಕೆಲಮಂದಿ ಕೆಲಸ ಗಾರರನ್ನಿಟ್ಟು ನಡೆಯಿಸಬೇಕಾಯಿತು. ಸಂಪಾದನೆಯೂ ಜನ ಪ್ರೀತಿಯೂ ತನ್ನಲ್ಲಿ ಹೆಚ್ಚಿತೆಂದು ಅವನು ಸೋಮಾರಿಯಾಗಲಿಲ್ಲ. ಆಗಲೂ ಮೊದಲಿ ನಂತೆಯೇ ಕಷ್ಟಪಟ್ಟು ಕೆಲಸಮಾಡುತ್ತಿದ್ದನು. ಅನೇಕವೇಳೆ ಅಂಗಡಿ ಯಿಂದ ಕೊಂಡ ಕಾಗದವನ್ನು ಕೈಗಾಡಿಗಳಮೇಲೆ ತಾನೇ ತಳ್ಳಿಕೊಂಡು ಬರುತ್ತಿದ್ದನು. ವ್ಯಾಪಾರದಲ್ಲಿ ನಂಬಿಕೆಯನ್ನು ಕಾಪಾಡಿಕೊಳ್ಳಲು ಸರ್ವ ವಿಧದಿಂದಲೂ ಜಾಗರೂಕನಾಗಿರುತ್ತಿದ್ದನು. ಆದುದರಿಂದ ವರ್ತಕರು ಹುಡುಕಿಕೊಂಡುಬಂದು ಅವನಿಗೆ ಸರಕುಗಳನ್ನು ಕೊಟ್ಟು ಹೋಗುತ್ತಿ ದ್ದರು.

ಕೆಲಸದಲ್ಲಿ ಇಷ್ಟು ಶ್ರದ್ಧಾವಂತನಾಗಿದ್ದ ಬೆಂಜಮಿನ್ನನ ಪ್ರಾಬಲ್ಯ ದಿಂದ ಕೈಮರ್ ಮತ್ತು ಬ್ರಾಡ್‌ಫರ್ಡ್ ಈ ಇಬ್ಬರ ಮುದ್ರಣಾಲಯಗಳೂ ನಿಲ್ಲುವ ಸ್ಥಿತಿಗೆ ಬಂದುವು. ಕೈಮರನಂತೂ ತನ್ನ ಮುದ್ರಣಾಲಯವನ್ನು ಮಾರಿಕೊಂಡು ದೇಶಭ್ರಷ್ಟನಾಗಿಹೋದನು. ವೃದ್ಧನಾಗಿದ್ದ ಬ್ರಾಡ್ ಫರ್ಡನು ಬೆಂಜಮಿನ್ನನೊಂದಿಗೆ ಕೆಲಸದಲ್ಲಿ ಸ್ಪರ್ಧಿಸಲಾರದೆಹೋದನು. ಹೀಗಾಗಿ ಬೆಂಜಮಿನ್ನನ ವ್ಯಾಪಾರವು ದಿನದಿನಕ್ಕೆ ಉಚ್ಛ್ರಾಯ ಸ್ಥಿತಿಗೆ ಬರತೊಡಗಿತು. ಇದರೊಂದಿಗೆ ಅವನು ಸ್ವಜನಾನುರಾಗವನ್ನೂ ವಿಶೇಷ ವಾಗಿ ಗಳಿಸಿದ್ದನು. ಅವನು ಏರ್ಪಡಿಸಿದ್ದ ಸಂಘವು ಉತ್ತಮ ರೀತಿಯಿಂದ ನಡೆಯುತ್ತಿದ್ದಿತು. ಅದರ ಅನುಕೂಲತೆಗೆಂದು ಅವನು ನೂತನವಾಗಿ ಪುಸ್ತಕಭಂಡಾರವನ್ನೊಂದನ್ನು ಏರ್ಪಡಿಸಿದನು. ಎಲ್ಲಾ ಗ್ರಂಥಗಳನ್ನೂ ಕೊಂಡು ಓದಲು ಸಾಮರ್ಥ್ಯವಿಲ್ಲದವರನೇಕರು, ಗ್ರಂಥವ್ಯಾಸಂಗಮಾಡಲು ಈಮೂಲಕ ವಿಶೇಷ ಪ್ರಯೋಜನನಾಯಿತು. ಅಮೆರಿಕಾದೇಶದಲ್ಲಿ ಪುಸ್ತಕ

ಭಂಡಾರಗಳು ಪ್ರಕಾಶಕ್ಕೆ ಬರಲು ಬೆಂಜಮಿನ್ನನ ಈ ಪ್ರಯತ್ನವೇ ಮೇಲ್ಪಂಕ್ತಿಯಾಗಿ ಪರಿಣಮಿಸಿತು.

ತಂದೆತಾಯಿಗಳನ್ನು ಬಿಟ್ಟು ಏಕಾಕಿಯಾಗಿ ಪರಸ್ಥಳಕ್ಕೆ ಪ್ರಯಾಣ ಮಾಡಿದರೂ ಅಲ್ಲಿ ಸ್ವಯಂ ಪರಿಶ್ರಮದಿಂದ ಅಭಿವೃದ್ಧಿಗೆ ಬಂದ ಬೆಂಜಮಿನ್‌ನ ಶಕ್ತಿಸಾಮರ್ಥ್ಯಗಳನ್ನೂ ಗಾಂಭೀರ್ಯ ಔದಾರ್ಯಗಳನ್ನೂ ಕಂಡ ವರನೇಕರು ಅವನೊಂದಿಗೆ ವಿವಾಹಸಂಬಂಧವನ್ನು ಬೆಳೆಸಲು ಬಗ ಮುಂದೆ ಬಂದರು. ಆದರೆ, ಹಿಂದೆ ಅವನು ರೀಡ್ ಎಂಬುವನ ಮನೆಯಲ್ಲಿ ಊಟ ಮಾಡುತ್ತಿದ್ದಾಗ, ಅವನ ಮಗಳ ಪ್ರೀತಿವಿಶ್ವಾಸಗಳನ್ನು ಗಳಿಸಿದ್ದನಾದುದರಿಂದ ಅವಳನ್ನೇ ಮದುವೆಯಾಗಲು ಇಚ್ಛಿಸಿದನು. ಅವರ ದಾಂಪತ್ಯವು ಅವನ ಹಿತಚಿಂತಕರೆಲ್ಲರಿಗೂ ಇಷ್ಟವಾಗಿದ್ದಿತು. ಅವನ ಮದುವೆಯು ರೀಡಳೊಂದಿಗೆ ೧೭೩೦ನೆಯ ಸೆಪ್ಟಂಬರು ೧ನೆಯ ತಾರೀಖಿನ ದಿನ ನೆರವೇರಿತು. ಬೆಂಜಮಿನ್ ಮತ್ತು ರೀಡ್ ಇವರ ದಾಂಪತ್ಯಾನುಕೂಲವು ಆದರ್ಶನೀಯವಾಗಿ ಉಭಯರಿಗೂ ವಿಶೇಷ ಸಂತೋಷಾನುಭವಕ್ಕೆ ಕಾರಣವಾಯಿತು. ರೀಡಳೂ ಬೆಂಜಮಿನ್ನನಂತೆಯೇ ಶ್ರದ್ಧಾವಂತಳೂ ಸದಾ ಕಾರ್ಯತತ್ಪರಳೂ ಮಿತವ್ಯಯಿಯೂ ಆಗಿದ್ದು ಅನೇಕ ಸಂದರ್ಭಗಳಲ್ಲಿ ಅವನ ಕಾರ್ಯಗಳಲ್ಲೂ ಸಹಕರಿಸುತ್ತಿದ್ದಳು. ಪರಸ್ಪರರ ಗುಣನಡತೆಗಳು ಹಾಲು ನೀರುಗಳಂತೆ ಬೆರೆತುವು. ಬೆಂಜಮಿನ್ನನು ಅನೇಕ ವೇಳೆ ತನ್ನ ಪತ್ನಿಯ ಸದ್ಗುಣಗಳಿಗಾಗಿ ಆಕೆಯನ್ನು ಹೊಗಳಿದ್ದಾನೆ. ಆಕೆಯಲ್ಲಿ ದಂಪದರ್ಪಗಳಾಗಲಿ ದುಂದುವೆಚ್ಚಗಳಾಗಲಿ ಎಂದೂ ಕಂಡುಬಂದುದಿಲ್ಲ. ತನ್ನ ಪತಿಯ ಮನೋಭೀಷ್ಟವನ್ನನುಸರಿಸಿ ನಡೆದು, ಮಿತವೆಚ್ಚದಿಂದ ಸಂಸಾರವನ್ನು ಸುಖಮಯವನ್ನಾಗಿಸುವ ಇಂತಹ ಪತ್ನಿಯಿಂದ ವಿಭೂಷಿತನಾದ ಪುರುಷನೇ ಸುಖಿಯಲ್ಲವೆ?

- ❧ -

## ಅಧ್ಯಾಯ ೪ 'ಹೃದಯಶೋಧನೆ'

'ಬೆಳೆಯ ಗುಣ ಮೊಳೆಯಲ್ಲೇ ತೋರುವುದು' ಎಂಬಂತೆ ಮುಂದೆ ವಿಶೇಷ ಅಭಿವೃದ್ಧಿಗೆ ಬರಲಿದ್ದ ಬೆಂಜಮಿನ್ನನು ಚಿಕ್ಕಂದಿನಿಂದಲೂ ಅದರ

ಸೂಚನೆಗಳನ್ನು ಪ್ರಕಟಿಸುತ್ತಿದ್ದನು. ಶ್ರದ್ಧೆ, ದೈವಭಕ್ತಿ, ವಿನಯವಿಧೇಯತೆಗಳು, ನಯವಾದ ಮಾತುಕಥೆಗಳು, ಋಜುವರ್ತನೆ ಈ ಮುಂತಾದ ಸದ್ಗುಣಗಳು ಚಿಕ್ಕತನದಿಂದಲೂ ಅವನಲ್ಲಿ ಮನೆಮಾಡಿಕೊಂಡಿದ್ದುವು. ತನ್ನ ತಂದೆಯ ಬಳಿಯಿದ್ದ ಮತಗ್ರಂಥಗಳನ್ನೆಲ್ಲ ಓದಿ, ಅವನು ಆ ವಿಚಾರಗಳಲ್ಲಿ ಪ್ರೌಢರಂತೆ ಪ್ರಸ್ತಾಪಿಸಲು ಶಕ್ತನಾಗಿದ್ದನು. ಅವುಗಳ ವಿಷಯವಾಗಿ ಅವನ ಮನಸ್ಸಿನಲ್ಲಿ ಹಲವು ಸಂದೇಹಗಳು ಉತ್ಪನ್ನವಾಗಿರಲು, ಅವುಗಳನ್ನು ನಿವಾರಿಸಿಕೊಳ್ಳುವುದಕ್ಕಾಗಿ ಮತಗುರುಗಳನ್ನು ಕುರಿತು ಪ್ರಶ್ನಿಸುವನು. ಹಿಂದಿನಿಂದ ಅನುಸರಿಸಿಕೊಂಡು ಬರುತ್ತಿದ್ದ ವ್ರತನಿಯಮಾದಿಗಳನ್ನು ಅರ್ಥವಿಲ್ಲದೆ ಕೇವಲ ಅವರಿವರ ಮೆಚ್ಚಿಕೆಗಾಗಿ ಮಾಡುವುದರಲ್ಲಿ ಅವನಿಗೆ ನಂಬಿಕೆಯಿರಲಿಲ್ಲ. ಇದರಿಂದ ಅವನಿಗೆ ದೈವಭಕ್ತಿಯಿರಲಿಲ್ಲವೆಂದು ತಿಳಿಯಬಾರದು. ಜಗತ್ಕರ್ತನೂ, ನಿಯಾಮಕನೂ, ಪೋಷಕನೂ ಈಶ್ವರನೇ ಎಂಬ ವಿಷಯದಲ್ಲಿ ಅವನಿಗೆ ಸಂಪೂರ್ಣ ಭಕ್ತಿವಿಶ್ವಾಸಗಳಿದ್ದುವು. ಆ ಪರಮೇಶ್ವರನನ್ನು ಸದ್ಗುಣಸದಾಚರಣೆಗಳಿಂದಲೂ, ಪರೋಪಕಾರ ಭೂತದಯೆಗಳಿಂದಲೂ, ನಿಷ್ಕಾಪಟ್ಯನಿರಹಂಕಾರಗಳಿಂದಲೂ ಮೆಚ್ಚಿಸಬಹುದೆಂದು ತಿಳಿದು ಆ ಗುಣಗಳನ್ನು ತನ್ನ ಅನುದಿನದ ಆಚರಣೆಯಲ್ಲಿ ತರಲು ಶ್ರಮಿಸತೊಡಗಿದನು. ಮತ ವಿಚಾರಗಳಲ್ಲಿ ಮಾಡುವ ವಾದವಿವಾದಗಳಿಂದ ಅವನಿಗೆ ಪ್ರಯೋಜನ ತೋರಲಿಲ್ಲ. ಆದುದರಿಂದ ಆ ಗೊಡವೆಯನ್ನು ಬಿಟ್ಟು ತನ್ನ ಅಂತಃಕರಣವನ್ನು ಶುದ್ಧಿಪಡಿಸಿಕೊಳ್ಳುವ ಮಾರ್ಗವನ್ನು ಕುರಿತು ಯೋಚಿಸತೊಡಗಿದನು. ಆತ್ಮಶುದ್ಧಿಯ ಉಪಾಯಗಳಲ್ಲೆಲ್ಲ ಮಿತಾಹಾರವೇ ಅತಿ ಮುಖ್ಯವಾದುದೆಂದೂ ಅದರಿಂದ ಇತರ ಸದ್ಗುಣಗಳನ್ನೆಲ್ಲ ಅಭ್ಯಾಸದಲ್ಲಿ ತರುವುದು ಸಾಧ್ಯವೆಂದೂ ಅವನಿಗೆ ಮನವರಿಕೆಯಾಯಿತು. ಇತರರಿಗೆ ಬೋಧಿಸುವುದಕ್ಕೆ ಮೊದಲು ತಾನೇ ಅದನ್ನು ಅಭ್ಯಾಸದಲ್ಲಿ ತಂದು ಅನುಭವಪಡೆವುದು ಆವಶ್ಯಕವೆಂದು, ಮಿತಾಹಾರ, ಮೌನ, ಕ್ರಮ, ಚಿತ್ತಸ್ಥೈರ್ಯ, ಮಿತವ್ಯಯ, ಉದ್ಯೋಗಶೀಲತೆ, ನಿಷ್ಕಾಪಟ್ಯ, ಋಜುತ್ವ, ಸಮಚಿತ್ತತೆ, ನೈರ್ಮಲ್ಯ, ಮನಶ್ಶಾಂತಿ, ಸೌಶೀಲ್ಯ, ನಿರ್ದಂಭತ್ವ ಈ ಗುಣಗಳನ್ನು ನಿತ್ಯವೂ ಅಭ್ಯಾಸಮಾಡಲು ಪ್ರಾರಂಭಿಸಿದನು. ಈ ಎಲ್ಲಾ ಗುಣಗಳ ಅಭ್ಯಾಸವನ್ನೂ ಒಮ್ಮೆಗೇ ಆರಂಭಿಸಿ, ಮಧ್ಯೆ

ಬಿಡುವುದಕ್ಕಿಂತಲೂ, ಒಂದೊಂದನ್ನಾಗಿ ಆರಂಭಿಸಿ ಅಭ್ಯಸಿಸುತ್ತಾ, ಒಂದಿಗೇ ದುರ್ಗುಣಗಳನ್ನೂ ಬಿಡುತ್ತಾ ಬರುವುದು ಆವಶ್ಯಕವೆಂದು ತಿಳಿದು, ಹಾಗೆಯೇ ಏರ್ಪಡಿಸಿಕೊಂಡನು. ಎಲ್ಲಾ ಗುಣಗಳ ಸುಧಾರಣೆಯನ್ನೂ ಒಟ್ಟಿಗೇ ಪ್ರಾರಂಭಿಸಿದರೆ ಅದು ಸಾಧ್ಯವಾಗಲಾರದೆಂದೆಣಿಸಿ ಒಂದೊಂದು ಗುಣದ ಅಭ್ಯಾಸಕ್ಕೆ ಒಂದೊಂದು ವಾರವನ್ನಿಟ್ಟುಕೊಂಡನು. ಈ ಎಲ್ಲಾ ಗುಣಗಳನ್ನೂ ಒಂದು ವಾರದಲ್ಲಿನ ಏಳು ದಿನಗಳಲ್ಲೂ ಬರುವಂತೆ ಗುರುತು ಮಾಡಿದ ಒಂದು ತಃಖ್ತೆಯನ್ನು ಏರ್ಪಡಿಸಿಕೊಂಡು, ಅದರಲ್ಲಿ ಒಂದೊಂದು ದಿನವೂ ಒಂದೊಂದು ಗುಣದ ಆಚರಣೆಯಲ್ಲೂ ತನ್ನಲ್ಲಿ ಕಂಡುಬಂದ ಲೋಪಗಳನ್ನು ಗುರುತುಮಾಡಿಕೊಳ್ಳತೊಡಗಿದನು. ಹೀಗೆ ಹೃದಯ ಶೋಧನೆಗೆ ತೊಡಗಿ ತನ್ನಲ್ಲಿದ್ದ ತಪ್ಪುಗಳನ್ನು ಒಂದೊಂದನ್ನಾಗಿ ಹುಡುಕಹತ್ತಲು, ಅವೂ ಒಂದೊಂದಾಗಿ ಹೊರಡತೊಡಗಿದುವು ಈ ಎಲ್ಲಾ ಗುಣಗಳನ್ನೂ ಪರೀಕ್ಷೆಗಿಟ್ಟು ಶೋಧನೆ ಮಾಡಲು ಒಟ್ಟು ಹದಿಮೂರು ವಾರಗಳಾಗುತ್ತಿದ್ದುವು. ಹೀಗೆ ಒಂದು ವರ್ಷಕ್ಕೆ ನಾಲ್ಕುಬಾರಿ, ಈ ಎಲ್ಲಾ ಗುಣಗಳ ಪರೀಕ್ಷೆಯನ್ನೂ ತನ್ನಮೇಲೆ ನಡೆಯಿಸಿಕೊಳ್ಳಲು ಅವಕಾಶವುಂಟಾಯಿತು. ಪ್ರಾರಂಭದಲ್ಲಿ ಹಲಕೆಲವು ಲೋಪಗಳು ಕಂಡುಬರುತ್ತಿದ್ದುವಾದರೂ ಕೊನೆಕೊನೆಗೆ ಆ ಪಟ್ಟಿಯಲ್ಲಿ ಗುರುತುಮಾಡಲು ಅವನಲ್ಲಿ ಲೋಪಗಳೇ ದೊರೆಯದಂತಾದುವು. ಮಿತವ್ಯಯವೆಂಬಂಶದಲ್ಲಿ ಬೆಂಜಮಿನನು ದ್ರವ್ಯದ ಮಿತವ್ಯಯವನ್ನು ಮಾತ್ರವಲ್ಲ; ಅದಕ್ಕಿಂತಲೂ ಹೆಚ್ಚಾಗಿ ಕಾಲದ ಮಿತವ್ಯಯವನ್ನು ಗಮನಿಸುತ್ತಿದ್ದನು. ಪ್ರತಿನಿತ್ಯದಲ್ಲೂ ತಾನು ಪ್ರಾತಃಕಾಲ ಎದ್ದಾಗಿನಿಂದ ರಾತ್ರೆ ಮಲಗುವವರೆಗೆ ಮಾಡುವ ಗೊತ್ತಾದ ಕೆಲಸಗಳೆಂತಹವು ಎಂಬುದನ್ನು ತೋರಿಸುವ ಒಂದು ವೇಳಾ ಪತ್ರಿಕೆಯನ್ನು ಮಾಡಿಟ್ಟುಕೊಂಡು ಅದನ್ನು ಕ್ರಮತಪ್ಪದೆ ಅನುಸರಿಸುತ್ತಿದ್ದನು. ಇದರಿಂದ ಒಂದು ನಿಮಿಷವೂ ವ್ಯರ್ಥ ಕಾಲಕ್ಷೇಪವಾಗದೆ ಸ್ವಲ್ಪ ಕಾಲದಲ್ಲೇ ಇತರರಿಗಿಂತಲೂ ಎರಡರಷ್ಟು ಕೆಲಸವನ್ನು ಮಾಡಲು ಅವನಿಗೆ ಸಾಧ್ಯವಾಗುತ್ತಿದ್ದಿತು. ಹೀಗೆ ಮನುಷ್ಯನಿಗೆ ಎಂದು ತನ್ನಲ್ಲಿರುವ ಲೋಪಗಳನ್ನು ನೀಗಿಸಿಕೊಂಡು, ಅಂತಃಕರಣಶುದ್ಧಿಯನ್ನುಂಟುಮಾಡಿಕೊಳ್ಳಬೇಕೆಂದು ಅಂತರ್ಯದಿಂದಲೇ ಅಪೇಕ್ಷೆಯುದಯಿಸುವುದೋ ಅಂದೇ ಅವನ ಜನ್ಮಸಾರ್ಥಕ್ಯದ ಮಾರ್ಗಕ್ಕೆ

ತಳಹದಿಯು ಹಾಕಲ್ಪಟ್ಟಿತೆನ್ನಬೇಕು. ಬೆಂಜಮಿರ್ನನು ಹಾಗೆ ಹಟಹಿಡಿದು, ತನ್ನಲ್ಲಿ ಉದಯಿಸಿದ ಒಂದೊಂದು ದುರ್ಗುಣವನ್ನೂ ಹುಡುಕಿ ಹುಡುಕಿ ತೆಗೆದು ಪರೀಕ್ಷೆಗಿಟ್ಟು, ನಾಶಗೊಳಿಸಿದುದರಿಂದಲೇ ತನ್ನ ತೋಟದಲ್ಲಿ ಬೆಳೆವ ಕಳೆಗಳನ್ನು ಹುಡುಕಿ ತೆಗೆದು ನಾಶಗೊಳಿಸುವ ಬುದ್ಧಿವಂತನಾದ ತೋಟಗಾರನಂತೆ-ಅವನೂ ಜಗದ್ವಂದ್ಯನಾಗಿ, ತನ್ನ ದೇಶೀಯರಿಂದ ದೇವತೆಯಂತೆ ಪೂಜೆಗೊಳ್ಳಲು ಅರ್ಹನಾದನು.

ಲೋಕದಲ್ಲಿ ಅಭಿವೃದ್ಧಿಗೆ ಬರಬೇಕೆಂಬ ಇಚ್ಛೆಯುಳ್ಳವನು ಮನಸ್ಸಿನ ಚಾಪಲ್ಯವನ್ನು ಖಂಡಿಸಿ, ಪಂಚೇಂದ್ರಿಯಗಳ ಆಜ್ಞೆಗೆ ಒಳಪಡದೆ, ಅವುಗಳನ್ನು ತನ್ನ ಆಜ್ಞೆಗೆ ಒಳಪಡಿಸಿಕೊಂಡು ನಡೆಯತಕ್ಕುದು ಅವಶ್ಯಕವಾಗಿರುವುದು. ಈ ಸಂಗತಿಗಳು ನಮ್ಮ ದೇಶದ ವೇದಶಾಸ್ತ್ರಗಳು ರಾಮಾಯಣ ಮಹಾಭಾರತಾದಿ ಪುರಾಣಗಳು ಇವುಗಳಲ್ಲಿ ವಿಶೇಷವಾಗಿ ಬೋಧಿಸಲ್ಪಟ್ಟಿರುವ ವಿಚಾರಗಳೇ ಅಲ್ಲದೆ ಬೇರೇನೂ ಅಲ್ಲ. ಇವು ಯಾವುದೊಂದು ದೇಶಕ್ಕೆ ಅಥವ ಕಾಲಕ್ಕೆ ಮಾತ್ರ ಗೊತ್ತಾದ ಧರ್ಮಗಳೆಂತಲ್ಲ. ಯಾವದೇಶದಲ್ಲಿ ಯಾವ ಕಾಲದಲ್ಲಿ ಎಲ್ಲಿದ್ದ ಮನುಷ್ಯನಾದರೂ, ಈ ಗುಣಗಳನ್ನು ಅನುಸರಿಸಿ ನಡೆವನಾದರೆ ಅವನು ತಪ್ಪದೆ ಊರ್ಜಿತಾವಸ್ಥೆಗೆ ಬಂದೇ ಬರುವನು. ನಮ್ಮ ಕಥಾನಾಯಕನು, ಸ್ವಯಂಸ್ಫೂರ್ತಿಯಿಂದ ಕಂಡುಹಿಡಿದು, ಏಕನಿಷ್ಠೆಯಿಂದ ಅನುಸರಿಸಿಕೊಂಡು ಬಂದ ಮೇಲ್ಕಂಡ ಸದ್ಗುಣಗಳ ಹೆಚ್ಚು ವಿವರಣೆಯು ಅನೇಕ ವಿದ್ಯಾರ್ಥಿಗಳಿಗೆ ಮಾರ್ಗದರ್ಶಕವಾಗಬಹುದಾದ್ದರಿಂದ ಪುನರುಕ್ತಿ ದೋಷವನ್ನೂ ಎಣಿಸದೆ ಅದನ್ನಿಲ್ಲಿ ಕೊಡುತ್ತೇವೆ.

ಆತನು ಸ್ವಯಂಶಿಕ್ಷೆಗಾಗಿ ಏರ್ಪಡಿಸಿಕೊಂಡ ಮೇಲ್ಕಂಡ ಹದಿಮೂರು ಗುಣಗಳ ವಿವರಣೆ:—

೧ ಮಿತಾಹಾರ (Temperance):—ಮತ್ತೇರುವ ಮಟ್ಟಿಗೆ ತಿನ್ನಬೇಡ; ಜ್ಞಾನತಪ್ಪುವ ಮಟ್ಟಿಗೆ ಕುಡಿಯಬೇಡ.

೨ ಮಿತಭಾಷಣ ( Silence ):—ನಿನಗಾಗಲೀ ಪರರಿಗಾಗಲೀ ಉಪಯೋಗವಾಗದಿದ್ದಲ್ಲಿ ಅಂತಹ ಮಾತನ್ನಾಡಬೇಡ. ವ್ಯರ್ಥಾಲಾಪವನ್ನು ವಿಸರ್ಜಿಸು

೩ ಕ್ರಮ (Order):—ನಿನ್ನ ಪದಾರ್ಥಗಳೆಲ್ಲಾ ಗೊತ್ತಾದ ಸ್ಥಳಗಳಲ್ಲಿರಲಿ; ನಿನ್ನ ಕೆಲಸದ ಪ್ರತಿಯೊಂದು ಭಾಗವನ್ನೂ ಅದರ ಗೊತ್ತಾದ ಕಾಲದಲ್ಲಿ ಮಾಡು

೪ ದೃಢಸಂಕಲ್ಪ (Resolutien):—ನೀನಾವ ಕರ್ತವ್ಯವನ್ನು ಮಾಡಬೇಕೋ ಅದನ್ನು ನೆರವೇರಿಸುವಲ್ಲಿ ದೃಢವಾದ ಸಂಕಲ್ಪಮಾಡು; ಹಾಗೆ ಸಂಕಲ್ಪಮಾಡಿದುದನ್ನು ತಪ್ಪದೆ ನೆರವೇರಿಸು.

೫ ಮಿತವ್ಯಯ (Frugality):—ನಿನಗಾಗಲೀ ಪರರಿಗಾಗಲೀ ಪ್ರಯೋಜನವಿಲ್ಲದಿದ್ದಲ್ಲಿ, ಅಂತಹ ಖರ್ಚನ್ನು ಮಾಡಬೇಡ - ಎಂದರೆ ಏನನ್ನೂ ವ್ಯರ್ಥಮಾಡಬೇಡ.

೬ ಉದ್ಯೋಗತತ್ಪರತೆ:—ವ್ಯರ್ಥ ಕಾಲಕಳೆಯಬೇಡ; ಸದಾ ಯಾವುದಾದರೊಂದು ಲಾಭಕರವಾದ ಉದ್ಯೋಗದಲ್ಲಿ ತೊಡಗಿರು ನಿರರ್ಥಕವಾದ ಕೆಲಸಗಳನ್ನೆಲ್ಲಾ ಬಿಟ್ಟುಬಿಡು.

೭ ನಿಷ್ಕಾಪಟ್ಯ (Sincerity):—ಪರರರಿಗೆ ಕೆಡುಕನ್ನುಂಟುಮಾಡುವ ವಂಚಕತನವನ್ನು ತ್ಯಜಿಸು, ನಿನ್ನ ಯೋಚನೆಯು ನಿಷ್ಕಾಪಟ್ಯವುಳ್ಳುದೂ ನ್ಯಾಯವಾದುದೂ ಆಗಿರಲಿ ಮಾತನಾಡುವುದಾದರೆ, ಅದೂ ನಿಷ್ಕಪಟವಾದುದೇ ಆಗಿರಲಿ.

೮ ನ್ಯಾಯ ( Justice ):—ಪರರಿಗೆ ಕೇಡನ್ನುಂಟುಮಾಡಿಯಾಗಲಿ, ಅಥವ ನಿನ್ನ ಕರ್ತವ್ಯವನ್ನು ನೀನು ಮಾಡದಿರುವುದರಿಂದಲಾಗಲೀ ಉಪದ್ರವಕಾರಿಯಾಗಬೇಡ.

೯ ಸಮಭಾವ (Moderation):—ಸುಖಬಂದರೆ ಹಿಗ್ಗದೆ, ಕಷ್ಟಬಂದರೆ ಕುಗ್ಗದೆ ಸಮಭಾವದಿಂದ ಇರು. ಪರರು ನಿನಗೆ ಕೆಡುಕುಮಾಡಿದಾಗ, ಅದಕ್ಕೆ ಪ್ರತೀಕಾರ ಮಾಡದಂತೆ ಸಹನೆಯಿರಲಿ.

೧೦ ನೈರ್ಮಲ್ಯ (Cleanliness):—ನಿನ್ನ ದೇಹ, ಉಡುಪು ಮತ್ತು ವಾಸಸ್ಥಳ ಇವುಗಳಲ್ಲಿ ಯಾವ ಬಗೆಯ ಕೊಳೆಯೂ ಸೇರದಂತೆ ನೋಡಿಕೋ.

೧೧ ಮನಶ್ಶಾಂತಿ (Tranquility):—ಅಲ್ಪಕಾರಣಗಳಿಗಾಗಿ ಉದ್ವೇಗಗೊಳ್ಳಬೇಡ. ಸರ್ವಸಾಮಾನ್ಯ ವಿಚಾರಗಳೂ, ತಡೆಯಲು ಸಾಧ್ಯ

ವಿಲ್ಲದ ಕಾರ್ಯಗಳೂ ನಿನ್ನ ಮನಶ್ಶಾಂತಿಗೆ ಭಂಗವನ್ನುಂಟುಮಾಡ ದಿರಲಿ.

೧೨ ಸೌಶೀಲ್ಯ (Chastity)........................

೧೩ ನಿರಹಂಕಾರ (Humility):—ಮಹಾತ್ಮ ಏಸುಕ್ರಿಸ್ತ ಮತ್ತು ಸಾಕ್ರೊಟೀಸ್ ಮುಂತಾದ ಸಾಧುಶಿರೋಮಣಿಗಳನ್ನು ಮೇಲ್ಪಂಕ್ತಿ ಯಾಗಿಟ್ಟುಕೊಂಡು ನಡೆ.

ಈ ಸೂಕ್ತಿಮಾಲೆಯನ್ನು ಆಚರಣೆಯಲ್ಲಿ ತರುವುದು ಇದನ್ನು ಓದು ವಷ್ಟು ಅಥವ ಕೇಳುವಷ್ಟು ಸುಲಭವೆನ್ನಿಸಲಾರದು. ಬೆಂಜಮಿನನು ಇವು ಗಳನ್ನು ಏರ್ಪಡಿಸಿಕೊಂಡದ್ದು ಸ್ವಯಂ ಶಿಕ್ಷೆಗಲ್ಲದೆ, ಪರೋಪದೇಶಕ್ಕಲ್ಲ ವಾದುದರಿಂದ, ಅವುಗಳಲ್ಲಿ ಒಂದೊಂದನ್ನೂ ಕಷ್ಟಪಟ್ಟು ಕ್ರಮವಾಗಿ ಅಭ್ಯ ಸಿಸಿ ಅನುಭವಗೊಂಡನು. ಈ ಮೊದಲೇ ಹೇಳಿದಂತೆ ಯಾವ ವಿಧವಾದ ಸದ್ಗುಣವು ನೆಲಗೊಳ್ಳಬೇಕಾದರೂ, ಆಹಾರನಿಯಮವಿರಬೇಕಾದುದೊಂದು ಅತ್ಯಗತ್ಯವಾಗಿ ಅಭ್ಯಾಸವಾಗಬೇಕು. ಮಿತಾಹಾರದಿಂದ ದೇಹವು ಸ್ವಾಧೀ ನದಲ್ಲಿದ್ದು, ಆಲಸ್ಯವೂ, ಬುದ್ಧಿಮಾಂದ್ಯವೂ ದೂರವಾಗುವುವು. ಮಿತಾ ಹಾರದಿಂದ ಬುದ್ಧಿಯು ಚುರುಕಾಗಿ ಕರ್ತವ್ಯಜ್ಞಾನ ಹುಟ್ಟಲು ಅವಕಾಶ ವುಂಟಾಗುವುದು ಒಡನೆ ಮಾಡಬೇಕಾದ ಕಾರ್ಯವಾವುದು, ಮಾಡಕೂ ಡದುದಾವುದು, ಆಡಬೇಕಾದ ಮಾತಾವುದು, ಆಡಕೂಡದುದಾವುದು ಎಂಬ ಪರಿಜ್ಞಾನವುಂಟಾಗುವುದು. ಇದರಿಂದ, ವ್ಯರ್ಥಾಲಾಪ, ವ್ಯರ್ಥಕಾಲಕ್ಷೇಪ ಮುಂತಾದುವುಗಳೆಲ್ಲ ನೀಗಿ ನಡೆವಳಿಕೆಯಲ್ಲಿ ಒಂದು ಕ್ರಮ, ಒಂದು ಶಿಸ್ತು ಏರ್ಪಡಲು ಅವಕಾಶವಾಗುವುದು. ಆ ಸಂದರ್ಭದಲ್ಲಿ ಯುಕ್ತಾಯುಕ್ತ ಸಾರಾಸಾರ ನಿತ್ಯಾನಿತ್ಯ ವಿಚಾರದಿಂದ ಜನ್ಮೋದ್ದೇಶವೇನೆಂಬುದನ್ನು ಯೋಚಿಸಿಕೊಂಡು, ಆ ಮಾರ್ಗವನ್ನು ಅನುಸರಿಸುವಂತೆ ದೃಢಪ್ರತಿಜ್ಞೆ ಮಾಡಬೇಕು. ಇಷ್ಟು ವಿಚಾರಗಳು ಅಭ್ಯಾಸಕ್ಕೆ ಬಂದುವೆಂದರೆ, ಮುಂದೆ ಹೆಚ್ಚು ಕಷ್ಟವಿಲ್ಲದೆ ಇತರ ಗುಣಗಳನ್ನೆಲ್ಲ ಅನುಸರಿಸಬಹುದು. ಈ ಒಂ ದೊಂದು ಗುಣಾನುಸರಣೆಯಿಂದಲೂ ಅಮಿತ ಪ್ರಯೋಜನವಾಗುವುದು. ಮಿತಾಹಾರದಿಂದ ದೇಹಲಾಘವವೂ ಬುದ್ಧಿಯಲ್ಲಿ ಚುರುಕುತನವೂ ಉಂಟಾ ಗುವಂತೆಯೇ, ಮಿತಭಾಷಣದಿಂದ ಪರದೂಷಣೆ, ವ್ಯರ್ಥಾಲಾಪ ಮುಂತಾ

ದುವುಗಳು ತಪ್ಪುವುವು. ಒಂದಿಗೇ ಅವುಗಳಿಂದುಂಟಾಗುವ ಕೆಡಕೂ ತಪ್ಪುವುದು. ಆ ಕಾಲವನ್ನು ಸದುಪಯೋಗವಮಾಡಿಕೊಳ್ಳಲು ಬೇಕಾದಷ್ಟು ಅವಕಾಶದೊರೆಯುವುದು. ಲೋಕದಲ್ಲಿನ ಸಮಸ್ತ ವ್ಯಾಜ್ಯವ್ಯವಹಾರಗಳಿಗೂ ಮಾತೇ ಕಾರಣವಾದುದರಿಂದ ಆ ನಾಲಿಗೆಯನ್ನೊಂದನ್ನು ಸ್ವಾಧೀನದಲ್ಲಿಟ್ಟುಕೊಂಡ ಮನುಷ್ಯನಿಗೆ, ಇತರ ಅನೇಕಾನೇಕ ದುರ್ವ್ಯಸನಗಳೂ ಕಷ್ಟಸಂಕಟಗಳೂ ತಪ್ಪುವುವು. ದುಷ್ಟ ಸಾಂಗತ್ಯವು ದೂರವಾಗಿ, ಸಾಧುಸಮಾಗಮವೂ ತನ್ಮೂಲಕ ಸಕಲ ಶ್ರೇಯಸ್ಸುಗಳೂ ಉಂಟಾಗಲು ಅವಕಾಶವುಂಟಾಗುವುದು ಕ್ರಮಾನುಸರಣೆಯಿಂದ ಆಗಬೇಕಾದ ಕೆಲಸಗಳೂ ಆಯಾ ಕಾಲಗಳಲ್ಲ ನಡೆದು ಮನಸ್ಸಿಗೆ ನೆಮ್ಮದಿಯುಂಟಾಗುವುವಲ್ಲದೆ, ಹೆಚ್ಚು ಕೆಲಸವನ್ನೂ ಮಾಡಲಾಗುವುದು. ಮಾತ್ರವಲ್ಲ.--ಮಾಡಬೇಕಾದ ಕೆಲಸಗಳನ್ನು ಆಯಾ ಕಾಲಗಳಲ್ಲಿ ಮಾಡುವುದರಿಂದ, ತಕ್ಕಷ್ಟು ವಿರಾಮವೂ ದೊರೆಯುವುದು ಈ ಕ್ರಮವನ್ನು ಅಭ್ಯಸಿಸಿದ ತರುವಾಯ, ಮಿತವ್ಯಯ ಮತ್ತು ಉದ್ಯೋಗತತ್ಪರತೆಗಳಿಂದ ಮನುಷ್ಯನು ತನಗೂ ತನ್ನವರಿಗೂ ಗೌರವ ಜೀವನಕ್ಕೆ ಬೇಕಾಗುವಷ್ಟನ್ನು ಸಂಪಾದಿಸಿಕೊಂಡು, ಸಾಲಶೂಲಗಳಿಲ್ಲದೆ ಜೀವಿಸಲು ಅನುಕೂಲಿಸುವುದು. ಅಷ್ಟಾದರೆ ತರುವಾಯ ನ್ಯಾಯಮಾರ್ಗದಲ್ಲಿ ನಡೆಯಲು ಕಷ್ಟವಾಗುವುದಿಲ್ಲ.

ಮನಸ್ಸಾಕ್ಷಿಯನ್ನೇ ಇತರ ಎಲ್ಲಕ್ಕಿಂತಲೂ ದೊಡ್ಡ ಗುರುವನ್ನಾಗಿ ಇಟ್ಟುಕೊಂಡಿದ್ದ ಬೆಂಜಮಿನ್ ಫ್ರಾಂಕ್‌ಲಿನನು ಈ ಸುವರ್ಣಸೂಕ್ತಿಮಾಲೆಯ ಎಲ್ಲಾ ಗುಣಗಳನ್ನೂ ಒಮ್ಮೆಗೇ ಪ್ರಾರಂಭಿಸದೆ ಒಂದೊಂದು ಗುಣದ ಅಭ್ಯಾಸಕ್ಕೆ ಒಂದೊಂದು ವಾರವನ್ನು ಮೀಸಲಾಗಿಟ್ಟು, ಅದರಂತೆ ಹದಿಮೂರು ವಾರಗಳಲ್ಲಿ ಒಂದಾವರ್ತಿ ಈ ಎಲ್ಲಾ ಗುಣಗಳಿಗೂ ಒಂದು ಬಾರಿ ಆವರ್ತನೆಯನ್ನು ಕೊಟ್ಟು ಅಭ್ಯಾಸಿಸುತ್ತಾ ಬಂದನು. ಒಂದು ಗುಣವನ್ನು ಅಭ್ಯಾಸಕ್ಕೆ ಇಟ್ಟುಕೊಂಡಾಗ, ಮಿಕ್ಕ ಗುಣಗಳ ಆಚರಣೆಯಲ್ಲಿ ತನ್ನಲ್ಲಿ ಕಂಡುಬಂದ ಲೋಪಗಳನ್ನು ತಿದ್ದಲು, ಒಂದು ಚಿಕ್ಕ ಪುಸ್ತಕವನ್ನಿಟ್ಟುಕೊಂಡು, ಅದರಲ್ಲಿ ಒಂದೊಂದು ವಾರಕ್ಕೆ ಒಂದೊಂದು ಗುಣಕ್ಕೆ ಒಂದೊಂದು ಪುಟದಂತೆ ವಿನಿಯೋಗಿಸುತ್ತಿದ್ದನು. ಅದರ ಒಂದು ಪುಟದ ಮಾದರಿಯನ್ನು ಇಲ್ಲಿ ಕೊಟ್ಟಿದೆ.

## ಮಿತಾಹಾರ

(ಹಸಿವಿರುವವರೆಗೆ ತಿನ್ನಬೇಡ—ಜ್ಞಾನತಪ್ಪುವವರೆಗೆ ಕುಡಿಯಬೇಡ)

| | ಗುಣಗಳು | ಭಾನು | ಸೋ | ಮಂ | ಬುಧ | ಬೃಹ | ಶುಕ್ರ | ಶನಿ |
|---|---|---|---|---|---|---|---|---|
| ೧ | ಮಿತಾಹಾರ | | | | | | | |
| ೨ | ಮಿತಭಾಷಣ | | . | | . | | | |
| ೩ | ಕ್ರಮ | | . | | | . | . | . |
| ೪ | ದೃಢಸಂಕಲ್ಪ | | . | | | | | |
| ೫ | ಮಿತವ್ಯಯ | | . | | | | . | |
| ೬ | ಉದ್ಯೋಗತತ್ಪರತೆ | | | . | | | | |
| ೭ | ನಿಷ್ಕಾಪಟ್ಯ | | | | | | | |
| ೮ | ನ್ಯಾಯ | | | | | | | |
| ೯ | ಸಮಭಾವ | | | | | | | |
| ೧೦ | ನೈರ್ಮಲ್ಯ | | | | | | | |
| ೧೧ | ಮನಶ್ಶಾಂತಿ | | | | | | | |
| ೧೨ | ಸೌಶೀಲ್ಯ | | | | | | | |
| ೧೩ | ನಿರಹಂಕಾರ | | | | | | | |

ಹದಿಮೂರು ವಾರಗಳಿಗೆ ಒಂದು ಬಾರಿಯಂತೆ ವರ್ಷಕ್ಕೆ ನಾಲ್ಕು ಬಾರಿ ಈ ಎಲ್ಲಾ ಗುಣಗಳಿಗೂ ಪರಿವರ್ತನೆಯನ್ನು ಕೊಟ್ಟು ಅಭ್ಯಾಸದಲ್ಲಿ ತಂದ ಬೆಂಜಮಿನನಲ್ಲಿ ಪ್ರಾರಂಭದಲ್ಲಿ ಕಂಡುಬಂದ ದುರ್ಗುಣಗಳು ಹೇಳ ಹೆಸರಿಲ್ಲದಂತೆ ಮಾಯವಾದುವು. ತೋಟಗಾರನು ಹುಡುಕಿ ಹುಡುಕಿ ಬೇರುಗಳೊಂದಿಗೆ ಕಳೆಯನ್ನು ಕಿತ್ತೊಗೆಯುವಂತೆ, ಹೃದಯವನ್ನು ಶೋಧಿಸಿ ಶೋಧಿಸಿ ದುರ್ಗುಣಗಳನ್ನು ಹೀಗೆ ಕಿತ್ತೊಗೆಯಲು, ಅವುಗಳ ಸ್ಥಾನದಲ್ಲಿ ಸದ್ಗುಣಗಳು ತಾವಾಗಿಯೇ ಆವಿರ್ಭವಿಸತೊಡಗಿದುವು. ಇವುಗಳೊಂದಿಗೆ ಆತನು ತನ್ನ ನಿತ್ಯದ ಆಚರಣೆಗೆ ಒಂದು ವೇಳಾಪತ್ರಿಕೆಯನ್ನು ಸಿದ್ಧಪಡಿಸಿಕೊಂಡಿದ್ದನೆಂದು ಮೇಲೆ ಹೇಳಿದೆಯಲ್ಲವೆ! ಅದರ ಮಾದರಿಯು ಹೀಗಿದ್ದಿತು. ದಿನದ ಇಪ್ಪತ್ನಾಲ್ಕು ಗಂಟೆಗಳಲ್ಲಿ ಯಾವ ಯಾವ ಕಾಲದಲ್ಲಿ ಯಾವ ಕಾರ್ಯಮಾ

ಡತಕ್ಕದ್ದೆಂದು ಅದರಿಂದ ನಿರ್ಣಯವಾಗುತ್ತಿತ್ತು.

| | |
|---|---|
| ಪ್ರಾತಃಕಾಲ ೫ ಗಂಟೆಯಿಂದ ೭ ,, ವರೆಗೆ<br>ಪ್ರಶ್ನೆ:-ಈ ದಿನ ನಾನು ಯಾ ವಸತ್ಕಾರ್ಯ ಮಾಡಲಿ ? | ಹಾಸಿಗೆಯಿಂದ ಏಳುವಿಕೆ. ಸ್ನಾನ. ದೈವ. ಪ್ರಾರ್ಥನೆ. ಆ ದಿನದ ಕೆಲಸಗಳನ್ನು ಯೋಚಿಸಿ ಸಂಕಲ್ಪಮಾಡುವಿಕೆ ಸ್ವಲ್ಪ ಕಾಲ ವ್ಯಾಸಂಗ. ತರುವಾಯ ಅಲ್ಪಾಹಾರ ತೆಗೆದುಕೊಳ್ಳುವಿಕೆ. |
| ಪೂರ್ವಾಹ್ನ:-೮ರಿಂದ ೧೨ರವರೆಗೆ | ಕೆಲಸ. |
| ಮಧ್ಯಾಹ್ನ.-೧೨ರಿಂದ ೧೮ ವರೆಗೆ | ಓದುವಿಕೆ. ಸ್ವಂತ ಆದಾಯವೆಚ್ಚಗಳ ಲೆಕ್ಕ ನೋಡುವಿಕೆ. ನಂತರ ಭೋಜನ |
| ಅಪರಾಹ್ನ:-೨ರಿಂದ ೫ರ ವರೆಗೆ | ಕೆಲಸ. |
| ಸಾಯಂಕಾಲ:—೬ ರಿಂದ ೯ರ ವರೆಗೆ<br>ಪ್ರಶ್ನೆ:-ಈ ದಿನ ಯಾವ ಸತ್ಕಾರ್ಯ ಮಾಡಿದೆ ? | ಆಯಾ ವಸ್ತುಗಳನ್ನು ಅವುಗಳ ಸ್ಥಾನದಲ್ಲಿಡುವುದು ಊಟಮಾಡುವುದು. ಸಂಗೀತ, ವಿನೋದ ಅಥವ ಸಂಭಾಷಣೆಮಾಡಿಕೊಂಡಿರುವುದು. ಅಂದಿನ ಚರ್ಯೆಯನ್ನು ಕುರಿತು ಪರೀಕ್ಷೆ ನಡೆಸುವುದು |
| ರಾತ್ರಿ:-೧೦ ಗಂಟೆಯಿಂದ ೪ರವರೆಗೆ | ನಿದ್ರೆ. |

ಹೀಗೆ ಯಾವುದೊಂದು ಕೆಲಸಕ್ಕೂ ಗೊತ್ತಾದ ಕಾಲವನ್ನು ವಿಂಗಡಿಸಿ ಇಟ್ಟಿದ್ದುದರಿಂದ, ಆಯಾದಿನದ ಕೆಲಸವು ಆಯಾ ಕಾಲದಲ್ಲೇ ಆಗುತ್ತಿದ್ದುದಲ್ಲದೆ, ನಿಯಮವಿಲ್ಲದೆ ಮಾಡುವಿಕೆಗಿಂತಲೂ ಹೆಚ್ಚು ಕೆಲಸವೂ ನಡೆದು ತಕ್ಕಷ್ಟು ವಿರಾಮವೂ ದೊರೆಯುತ್ತಿತ್ತು. ಈ ಪದ್ಧತಿಯನ್ನು ಅನುಸರಿಸಿಕೊಂಡು ಬಂದುದರಿಂದ ತನಗೆ ಅಮಿತ ಪ್ರಯೋಜನವುಂಟಾಯಿತೆಂದೂ ಈ ಸುವರ್ಣ ಸೂತ್ರಗಳನ್ನು ತನಗೆ ಮಾರ್ಗದರ್ಶಕವಾಗಿಟ್ಟುಕೊಂಡು, ಅವುಗಳ ನಿಯಮದಂತೆ ನಡೆದೇ ತೀರಬೇಕೆಂಬ ಒಂದು ನಿರ್ಬಂಧಕ್ಕೆ ತನ್ನನ್ನು ತಾನು ಒಳಪಡಿಸಿಕೊಂಡ. ನಡೆಯದೆ ಸ್ವೇಚ್ಛೆಯಾಗಿದ್ದನಾಗಿದ್ದರೆ ತಾನೂ ಇತರರಂತೆಯೇ ಅಧೋಗತಿಯಲ್ಲೇ ಬಿದ್ದಿರಬೇಕಾಗುತ್ತಿದ್ದಿತೆಂದೂ ತನ್ನ ಆಗಿನ ಔನ್ನತ್ಯಕ್ಕೂ ಐಶ್ವರ್ಯ ಗೌರವ ಪದವಿ ಮುಂತಾದುವುಗಳ ಪ್ರಾಪ್ತಿಗೂ ತನ್ನ ಆ ಸದ್ಗುಣಾಚರಣೆಯೇ ಕಾರಣವೆಂದೂ ಆತನು ಹೇಳಿಕೊಂಡಿದ್ದಾನೆ. ತನ್ನ ಸ್ವಯಂಶಿಕ್ಷಣೆಗಾಗಿ ಇಷ್ಟು ಪ್ರಯತ್ನಮಾಡಿದ ಅವ

ನು ನಾಸ್ತಿಕನಾಗಿದ್ದನೆಂದು ತಿಳಿಯಬಹುದೇ? ಅನುಪಮ ಮಹಿಮನಾದ ದೇವರ ನಾಮ ಮತ್ತು ರೂಪಗಳ ಉಚ್ಚಾರಣೆ ಸ್ಮರಣೆ ಮುಂತಾದುವನ್ನು ಕುರಿತು ತೊಂದರೆಪಡುವುದು ಪ್ರಯೋಜನವಿಲ್ಲವೆಂದು ತಿಳಿದು, ಅವನು ಸರ್ವಚೈತನ್ಯ ಸ್ವರೂಪನೂ, ಜಗತ್ಕಾರಣನೂ, ಸರ್ವಸಂರಕ್ಷಕನೂ ಆದ ಸರ್ವೇಶ್ವರನನ್ನು ನಿಷ್ಕಪಟ ಹೃದಯದಿಂದ ಸ್ತೋತ್ರಮಾಡುತ್ತಿದ್ದನು. ತನಗೆ ಸೂಕ್ತವೆಂದು ತೋರಿದಂತೆ ಒಂದು ಸ್ತೋತ್ರಪಾಠವನ್ನು ಏರ್ಪಡಿಸಿ ಕೊಂಡು,-"ಓ ಪರಮ ಪಿತನೇ, ಸರ್ವೋತ್ಕೃಷ್ಟನಾದ ನೀನು ನನಗೆ ಯಾವುದು ಶ್ರೇಯಸ್ಕರವೋ ಅದನ್ನು ತಿಳಿಸಿಕೊಡು. ದುರ್ಮಾರ್ಗದಿಂದ ತಪ್ಪಿಸಿ ಸನ್ಮಾರ್ಗದಲ್ಲಿ ನಡೆಯಿಸು. ನನ್ನಲ್ಲಿ ದಂಭ ಅಹಂಕಾರಾದಿಗಳು ಮನೆಮಾಡದಂತೆ ಕಾಪಾಡು. ನನ್ನ ಹೃದಯ ಮನಸ್ಸುಗಳನ್ನು ದಿವ್ಯಜ್ಞಾನದಿಂದ ತುಂಬಿಸು. ಮನಸ್ಸಾಕ್ಷಿಯು ಸರ್ವದಾ ಜಾಗ್ರತವಾಗಿರುವಂತೆಯೂ, ನಡತೆಯು ಪರಿಶುದ್ಧವಾಗಿರುವಂತೆಯೂ, ಪವಿತ್ರವಾದ, ಶಾಶ್ವತವಾದ, ಎಂದಿಗೂ ಕುಂದದ ಶಾಂತತೆಯು ನನ್ನಲ್ಲಿ ನೆಲೆಸಿರುವಂತೆಯೂ ಅನುಗ್ರಹಿಸು"

ಎಂದು ಮುಂತಾಗಿ ಪ್ರಾರ್ಥಿಸುವನು ತನ್ನಲ್ಲಿ ಅಹಂಕಾರ ಮಮಕಾರಗಳು ತಲೆಹಾಕದಂತೆ ಸರ್ವದಾ ಜಾಗರೂಕನಾಗಿರುವನು.

ಪ್ರಿಯ ವಾಚಕ ಮಹಾಶಯರೇ! ತನ್ನನ್ನು ತಾನು ಈ ಬಗೆಯ ಪರೀಕ್ಷೆಗೆ ಒಳಪಡಿಸಿಕೊಂಡು, ಶಿಕ್ಷಿತನಾದ, ನಮ್ಮ ಕಥಾನಾಯಕನು ಜಗನ್ಮಾನ್ಯನಾದುದರಲ್ಲಿ ಆಶ್ಚರ್ಯವೇನು?

## ಉ ಪ ಸಂ ಹಾ ರ

ಈ ಮಹನೀಯನ ಚರಿತ್ರ ಪಠನೆಮಾಡುವ ಪ್ರತಿ ಕರ್ಣಾಟಕ ಬಾಲಕನೂ ತನ್ನ ಜೀವಮಾನವನ್ನು ಹೀಗೆ ಅರ್ಥವತ್ತಾಗಿ ರೂಪಿಸಿಕೊಂಡು ಅಭಿವೃದ್ಧಿಗೆ ಬರುವಂತೆಯೂ, *ನಮ್ಮ ಕಥಾನಾಯಕನಂತೆಯೇ ಮಾತೃದೇಶೋದ್ಧಾರಕನಾಗುವಂತೆಯೂ ಪರಾತ್ಪರನ ಪರಮಾನುಗ್ರಹವಾಗಲಿ.

**ತಥಾಸ್ತು.**

*ಈ ಮಹನೀಯನ ಲೋಕಸೇವಾ, ದೇಶಸೇವಾ ಮುಂತಾದ ಕಾರ್ಯಗಳ ಮುಂದಿನ ಚರಿತ್ರೆಯು, ಗ್ರಂಥಮಾಲೆಯ ಎರಡನೆಯ ಕುಸುಮವಾಗಿ ಪ್ರಕಟವಾಗುವುದು. ಸಂ.

|| ಶ್ರೀರಾಮಸಹಾಯಂ ||

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

ಅಮೆರಿಕಾ ಸಂಯುಕ್ತ ಸಂಸ್ಥಾನದ ಅಭಿವೃದ್ಧಿಗಾಗಿ ತ್ರಿಕರಣಪೂರ್ವಕ ಶ್ರಮಪಟ್ಟ ಬೆಂಜಮಿನ್ ಫ್ರಾಂಕ್‌ಲಿನ್ ಮಹಾಶಯನ ವಂಶಪರಿಚಯ, ಜನನ ಬಾಲ್ಯ ವಿದ್ಯಾಭ್ಯಾಸ, ಉದ್ಯೋಗಪ್ರವೇಶ, ಅವನ ಸದ್ಗುಣ ಸದಾಚರಣೆಗಳು, ಸ್ವಶಿಕ್ಷಣೆ ಮುಂತಾದ ಹಲವು ವಿಚಾರಗಳನ್ನು, ಹಿಂದಿನ ಸಂಚಿಕೆಯಲ್ಲಿ ಕೊಡಲಾಯಿತು. ಆತನು ತನ್ನ ಜನಾಂಗದವರಲ್ಲಿ ಜಾಗೃತಿಯನ್ನುಂಟುಮಾಡುವುದಕ್ಕಾಗಿ ಕೈಕೊಂಡ ಹಲವು ಪ್ರಯತ್ನಗಳು, ಪ್ರಜೋಪಕಾರಕ್ಕಾಗಿ ಮಾಡಿದ ಕಾರ್ಯಗಳು, ತನ್ನ ಮಾತೃದೇಶದ ಸ್ವಾತಂತ್ರ್ಯರಕ್ಷಣೆಗಾಗಿ ಪರಕೀಯರೊಡನೆ ಮಾಡಿದ ಯುದ್ಧವ್ಯವಹಾರ, ಪ್ರಜಾಪ್ರತಿನಿಧಿ ಪ್ರಭುತ್ವದ ನಿಯಮ ನಿಬಂಧನೆಗಳು ನಡೆವಳಿಕೆಗಳು ಕರ್ತವ್ಯ ಮುಂತಾದುವನ್ನು ಏರ್ಪಡಿಸಿ ಆಚರಿಸಿ ತೋರಿಸಿದ ಆತನ ಅಗಾಧ ಸ್ವಾರ್ಥತ್ಯಾಗದ ಮಾದರಿ, ವೈಜ್ಞಾನಿಕ ಪರಿಶೋಧನೆಯಲ್ಲಿ ಆತನು ಪಟ್ಟ ಪರಿಶ್ರಮದ ವಿಚಾರ, ತನ್ಮೂಲಕ ಆತನಿಗೆ ಸ್ವದೇಶ ಪರದೇಶಗಳಲ್ಲಿ ಲಭಿಸಿದ ಗೌರವಾದರಗಳು ಮುಂತಾದ ಹಲವು ವಿಚಾರಗಳನ್ನು ಒಂದೇ ಚಿಕ್ಕ ಪುಸ್ತಕದಲ್ಲಿ ಸಾಧ್ಯವಾದಷ್ಟುಮಟ್ಟಿಗಾದರೂ ವಿವರವಾಗಿ ತಿಳಿಸಲು ಅವಕಾಶವಾಗಲಿಲ್ಲವಾಗಿ, ಆತನ ಚರಿತ್ರೆಯ ಈ ಎರಡನೆಯ ಭಾಗವನ್ನು, ಮೇಲ್ಕಂಡ ವಿಚಾರಗಳ ನಿರೂಪಣೆಗಾಗಿ ಇಟ್ಟುಕೊಳ್ಳಲಾಯಿತು. ವಾಚಕಮಹಾಶಯರು, ಈ ಎರಡು ಭಾಗಗಳನ್ನೂ ಸಂಗ್ರಹಿಸಿ, ಆ ಮಹನೀಯನ ಚರಿತ್ರೆಯಿಂದ ಉಂಟಾಗುವ ಸಂಪೂರ್ಣ ಪ್ರಯೋಜನವನ್ನು ಪಡೆಯಬೇಕು.

ಬೆಂಜಮಿನ್ನನು ನಿರ್ಧನನಾಗಿ ಜನಿಸಿದರೂ, ಅವನು ರಾಜಾಧಿರಾಜರ ಮನ್ನಣೆಗೆ ಪಾತ್ರನಾಗುವಂತಹ ಉನ್ನತಸ್ಥಿತಿಯನ್ನು ಪಡೆಯಲು, ಆತನ ಸ್ವಯಂ ಪರಿಶ್ರಮವೇ ಕಾರಣ! ಮಾನವಸ್ವಾಭಾವಿಕವಾದ, ತನ್ನಲ್ಲಿದ್ದ ದುರ್ಗುಣಗಳನ್ನು ಕಳೆದುಕೊಳ್ಳಲು ಆತನು ಹೇಗೆ ಪ್ರಯತ್ನಿಸಿದನೋ, ಸದ್ಗುಣಗಳ ಸಂಗ್ರಹಣಕ್ಕಾಗಿಯೂ ಹಾಗೆಯೇ ಶ್ರಮಿಸಿದನು. ತತ್ವಜ್ಞಾ

ನದ ಅಮೋಘ ವಿಚಾರಗಳನ್ನು ಬಾಯಿಂದ ಉಚ್ಚರಿಸಿದ ಮಾತ್ರಕ್ಕೆ ಒಬ್ಬ ನು ಘನವಂತನೆನ್ನಲು ಸಾಧ್ಯವಿಲ್ಲ ; ಅವನಲ್ಲಿ ಆ ತತ್ವಬೀಜಗಳು ನಾಟ ವೊಳಕೆಗೊಂಡಿರುವುದರ ಉದಾಹರಣೆಗಳು, ಅವನ ನಡೆನುಡಿಗಳಲ್ಲಿ ವ್ಯಕ್ತ ವಾಗಬೇಕು. ಆಗಲೇ ಮನುಷ್ಯನು ಬೇಡ ಬೇಡವೆಂದರೂ, ಗೌರವಾದರ ಗಳು ಅವನನ್ನು ಹುಡುಕಿಕೊಂಡು ಬರುವುವು.

ಜನತೆಯಲ್ಲಿ ಜನಾರ್ದನನ ಸಾನ್ನಿಧ್ಯವಿರುವುದೆಂಬುದರ ತತ್ವವನ್ನರಿತ ಮಹನೀಯರು, ಲೋಕಸೇವೆಯೇ ಲೋಕೇಶ್ವರನ ಸೇವೆಯೆಂಬುದರ ನಿಶ್ಚ ಯತತ್ವವನ್ನು ಮನಗಂಡು ತ್ರಿಕರಣಪೂರ್ವಕವಾಗಿ ಲೋಕಸೇವೆಗೆ ತೊಡ ಗುವರು. ಜನತೆಯಲ್ಲಿ ವ್ಯಾಪಿಸಿರುವ ಅಜ್ಞಾನಾಂಧಕಾರವನ್ನು ಕಳೆದು, ಅವರ ಮನಸ್ಸಿಗೆ ಜ್ಞಾನಸೂರ್ಯನ ಕಿರಣಗಳ ಪ್ರಕಾಶವನ್ನು ತಂದೀವ ಕಾರ್ಯವೊಂದು ಲೋಕಸೇವೆಗೆಂದು ಮುಂದೆ ಬರುವವರು ಕೈಗೊಳ್ಳಬೇಕಾದ ಮೊದಲನೆಯ ಅತ್ಯಾವಶ್ಯಕ ಕಾರ್ಯವಾಗಿರುವುದು. ಇದರೊಂದಿಗೇ, ಜನತೆಯಲ್ಲಿ ಆರೋಗ್ಯ ನೈರ್ಮಲ್ಯ, ವಿದ್ಯಾಭಿವೃದ್ಧಿ, ಉದ್ಯೋಗ ವ್ಯವಹಾರ ಗಳ ಬೆಳೆವಣಿಗೆ, ಪರಸ್ಪರಸಹಾಯ, ಐಕಮತ್ಯ ದೇಶಾಭಿಮಾನ ಧರ್ಮಾಭಿ ಮಾನಗಳು, ದೈವಭಕ್ತಿ ಮುಂತಾದುವುಗಳ ಬೆಳೆವಣಿಗೆಗೂ ತಕ್ಕ ಬೋಧ ನೆಯು ನಡೆಯಬೇಕು. ಅಜ್ಞಾನಾಂಧಕೂಪದಲ್ಲಿ ಬಿದ್ದಿದ್ದ ಒಂದು ಜನಾಂ ಗವನ್ನು ಈ ಬಗೆಯ ಬೋಧನೆಗಳ ಮೂಲಕ ಜಾಗ್ರತಗೊಳಿಸಿ, ಅವರನ್ನು ಸ್ವಕರ್ತವ್ಯ ತತ್ಪರರನ್ನಾಗಿ ಮಾಡಿದ ಮನುಷ್ಯನು ಸಾಮಾನ್ಯನೆನ್ನಲಾ ದೀತೇ ? ಬೆಂಜಮಿನ್ ಫ್ರಾಂಕ್‌ಲಿನ್ನನು, ಜನಾಂಗದ ಅಭಿವೃದ್ಧಿಗಾಗಿಯೇ ಜನ್ಮಿಸಿ, ತನ್ನ ಜೀವಿತೋದಾಹರಣೆಯಿಂದ ಹಲವರನ್ನು ಸನ್ಮಾರ್ಗಕ್ಕೆ ತಂದ ಮಹಾಪುರುಷನೆನ್ನಲು ಏನೂ ಸಂದೇಹವಿಲ್ಲ. ಗ್ರಂಥಮಾಲಾಭಿ ಮಾನಿಗಳು, ಗುಣಗ್ರಹಣಶೀಲರಾಗಿ ಇಂತಹ ಮಹಾಪುರುಷರ ಚರಿತ್ರ ಪ್ರಕಟಣೆಯನ್ನೇ ಮುಖ್ಯೋದ್ದೇಶವನ್ನಾಗಿ ಕೈಕೊಂಡಿರುವ ಗ್ರಂಥಮಾಲೆ ಯ ಚಿರಜೀವಿತಕ್ಕೆ ಸ್ವಹಸ್ತ ಪರಹಸ್ತ ಸಹಕರಿಸಿ, ನಮ್ಮ ಉದ್ಯಮವನ್ನು ಸಾರ್ಥಕಗೊಳಿಸಬೇಕಾಗಿ ಪ್ರಾರ್ಥನೆ.

ತಾ. ೩—೭—೩೨
ಬೆಂಗಳೂರು ನಗರ

ಇತಿ ಸುಜನ ವಿಧೇಯ
ಯಂ. ರಾಮರಾವ್.

॥ ಶ್ರೀ ರಾಮಸಹಾಯಂ ॥

# ಬೆಂಜಮಿನ್ ಫ್ರಾಂಕ್ಲಿನ್

## (ಭಾಗ ೨)

### ಅಧ್ಯಾಯ ೧ "ಆತ್ಮಾವಲಂಬನೆ"

**ಲೋಕಸೇವೆಯೇ** ಲೋಕೇಶ್ವರನ ಸೇವೆಯೆಂದು ನಂಬಿ ಪರೋಪಕಾರ ಪರಾಯಣರಾಗುತ್ತಿದ್ದ ಜನರು, ನಮ್ಮ ಮಾತೃಭೂಮಿಯಾದ ಭರತಖಂಡದಲ್ಲಿ ಮಾತ್ರವಲ್ಲ; ಎಲ್ಲಾ ದೇಶಗಳಲ್ಲೂ, ಎಲ್ಲಾ ಕಾಲಗಳಲ್ಲೂ, ಭಗವದಿಚ್ಛಾನುಸಾರವಾಗಿ ಅಂತಹ ಸತ್ಪುರುಷರು ಜನ್ಮಿಸಿ, ಲೋಕೋಪಕಾರಿಗಳಾಗಿರುವರು. ಈ ಬಗೆಯ ಪರೋಪಕಾರಬುದ್ಧಿಯು ಮನುಷ್ಯನಲ್ಲಿ ಉದಯಿಸಲು, ಒಂದು ಬಗೆಯ ಸಂಸ್ಕಾರವು ಆವಶ್ಯಕವಾಗಿದೆ. ಯಾವನಲ್ಲಿ ಸ್ವಾರ್ಥತೆಯು ತುಂಬಿತುಳುಕುತ್ತಿರುವುದೋ, ದಂಭ ಅಹಂಕಾರ ಅಭಿಮಾನಾದಿಗಳು ಯಾವನ ಮನಸ್ಸಿನಲ್ಲಿ ಆಧಿಪತ್ಯಮಾಡುತ್ತಿರುವುವೋ, ಯಾವನು ಪರರ ವಿದ್ಯೆ, ಐಶ್ವರ್ಯ, ಪದವಿ ಮುಂತಾದುವುಗಳಿಗಾಗಿ ಅಸೂಯೆಪಟ್ಟು, ಅವುಗಳು ತನಗೆ ಪ್ರಾಪ್ತಿಸಲಿಲ್ಲವಲ್ಲಾ ಎಂದು ಮತ್ಸರಿಸುತ್ತಿರುವನೋ ಅವನಲ್ಲಿ ಪರೋಪಕಾರಬುದ್ಧಿಯೂ, ಲೋಕಸೇವೆಯ ಯೋಚನೆಯೂ ಪ್ರವೇಶಗೊಳ್ಳಲು ಆಸ್ಪದವೇ ಇಲ್ಲ. ಲೋಕಸೇವಾಬುದ್ಧಿಯು ಒಬ್ಬನಲ್ಲಿ ಉದಯಿಸಬೇಕಾದರೆ, ಲೋಕೇಶ್ವರನು ಸರ್ವವ್ಯಾಪಿ, ಸರ್ವಶಕ್ತ, ಸರ್ವನಿಯಾಮಕ ಎಂಬ ವಿಚಾರಗಳ ಬೆಳಕು ಅವನ ಮನಸ್ಸೆಂಬ ಕನ್ನಡಿಯಮೇಲೆ ಬಿದ್ದಿರಬೇಕು. ಆಗಲೇ ಅದು ಭೂತದಯೆ, ಪರೋಪಕಾರ, ವಿನಯ, ಮೃದುಭಾಷಣ, ಮುಂತಾದುವುಗಳ ರೂಪದಲ್ಲಿ ಪ್ರತಿಬಿಂಬಿಸುವುದು. ಹೀಗೆ ಪಾರಮಾರ್ಥಿಕ ಭಾವನೆಯಿಂದ ಪ್ರೇರಿತರಾದವರಲ್ಲದೆ ಮಿಕ್ಕವರು ಕೈಕೊಳ್ಳುವ ಪರಹಿತ ಕಾರ್ಯಗಳೂ, ದೇಶಸೇವಾ ಕಾರ್ಯ

ಗಳೂ ಸಹ ಸ್ವಾರ್ಥಮೂಲವಾಗಿಯೇ ಹುಟ್ಟುವುವು. ಇದೇ ಮಾತನ್ನೇ ಕನ್ನಡ ಕವಿಗಳಲ್ಲಿ ಶ್ರೇಷ್ಠನಾದ ಸರ್ವಜ್ಞನು—

ದೇಶಾಭಿಮಾನಿ ತಾ ಪಾರಮಾರ್ಥಿಕನಯ್ಯ
ಆಶಾಭಿಮಾನಿ ಉಳಿದವನು ಮತ್ತೆ
ನಾಶಾಭಿಮಾನಿ ಸರ್ವಜ್ಞ—

ಎಂದು ಸ್ಪಷ್ಟೋಕ್ತಿಗಳಲ್ಲಿ ಹೇಳಿರುವನು. ತನ್ನಂತೆಯೇ ಇತರರಿಗೂ ಜೀವವಿದೆ, ಇತರ ಪ್ರಾಣಿಗಳಿಗೂ ತನ್ನಂತೆಯೇ ಹಸಿವು ನೀರಡಿಕೆ ಸುಖ ದುಃಖಗಳಿವೆ, ಎಂಬ ಯೋಚನೆಯು ಒಬ್ಬನ ಮನಸ್ಸಿನಲ್ಲಿ ಹುಟ್ಟಬೇಕಾದರೆ, ಎಲ್ಲರಲ್ಲೂ ಎಲ್ಲಾ ಪ್ರಾಣಿಗಳಲ್ಲೂ ಅಂತರ್ಯಾಮಿಯಾಗಿ ಪರಮಾತ್ಮನಿದ್ದಾನೆ, ತಾನು ತನ್ನ ಸಹವಾಸಿಗಳಿಗೆ ಕೊಡುವ ಸುಖ ಅಥವ ದುಃಖಗಳಿಂದ ಆಯಾ ಪ್ರಾಣಿಗಳ ಅಂತರಾತ್ಮನಾದ ಪರಮೇಶ್ವರನಿಗೆ ಪ್ರಿಯ ಅಥವ ಅಪ್ರಿಯವನ್ನುಂಟುಮಾಡಿದಂತೆ ಆಗುವುದು ಎಂಬ ಭಾವನೆಯು ಅವನ ಮನಸ್ಸಿನಲ್ಲಿ ಹೊಳೆದಿರಬೇಕು. ಆಗಲೇ ಪರಕೀಯರನ್ನು ತನ್ನಂತೆಯೇ ನೋಡಿಕೊಳ್ಳಬೇಕೆಂಬ ಬುದ್ಧಿಯು ಅವನಿಗೆ ಹುಟ್ಟಲು ಸಾಧ್ಯವಿರುವುದು. ಪ್ರಾಣಿಹಿಂಸೆಮಾಡುವುದನ್ನು ಬಿಟ್ಟು, ಭೂತದಯಾ ಪಶ್ಚಾತ್ತಾಪಾದಿಗಳು ಒಬ್ಬನಲ್ಲಿ ಹುಟ್ಟಬೇಕಾಗಿದ್ದರೆ, ಸರ್ವಾಂತರ್ಯಾಮಿಯಾದ ದೇವರು ತನ್ನ ಹಿಂಸಾಕಾರ್ಯದಿಂದ ತನ್ನ ಮೇಲೆ ಕುಪಿತನಾಗುವನು ಎಂಬ ಯೋಚನೆಯು ಅವನ ಬುದ್ಧಿಗೆ ಹೊಳೆಯದಿದ್ದರೆ ಸಾಧ್ಯವೇ ಇಲ್ಲ. ಹೀಗೆ ಪರೋಪಕಾರವಾಗಲೀ, ಲೋಕಸೇವೆಯಾಗಲೀ ಪಾರಮಾರ್ಥಿಕ ಚಿಂತೆಯುಳ್ಳವನಿಂದಲಲ್ಲದೆ ಮಿಕ್ಕವರಿಂದ ನಡೆಯದು

ನಮ್ಮ ಕಥಾನಾಯಕನಿಗೆ ಚಿಕ್ಕಂದಿನಿಂದಲೂ ತಂದೆಯ ಬಳಿಯಿದ್ದ ಮತಗ್ರಂಥಗಳನ್ನು ಓದಿ ದೇವರು ಧರ್ಮ ಮುಂತಾದವುಗಳಲ್ಲಿ ವಿಶೇಷ ಶ್ರದ್ಧೆಯುಂಟಾಗಿದ್ದಿತು. ಆಗಿನ ಮತಬೋಧಕರ ನಡತೆ ಮುಂತಾದುವು ಅವನಿಗೆ ತೃಪ್ತಿಕರವಾಗಿರಲಿಲ್ಲವಾದರೂ ಅವನಲ್ಲಿ ದೈವಭಕ್ತಿಗೆ ಕೊರತೆಯಿರಲಿಲ್ಲ. ಅವನು ತನ್ನ ಮನಸ್ಸಿಗೆ ಯುಕ್ತ ತೋರಿದಂತೆ ಒಂದು ಪ್ರಾರ್ಥನಾ ಪದ್ಧತಿಯನ್ನು ಏರ್ಪಡಿಸಿಕೊಂಡು, ಅದರಂತೆ ಯುಕ್ತ ವೇಳೆಗಳಲ್ಲಿ ಪ್ರಾರ್ಥಿ

ಸುತ್ತಾ, ತನ್ನ ಶ್ರದ್ಧಾ ಭಕ್ತಿಗಳನ್ನು ಬೆಳೆಯಿಸಿಕೊಳ್ಳುತ್ತಿದ್ದನು. ಆಗಿನ ಮತಬೋಧಕರು, ತಮ್ಮ ಬೋಧನೆ ಆಚರಣೆಗಳಿಂದ ಜನಗಳಿಗೆ ಸದ್ಗುಣ ಸದಾಚರಣೆಗಳಲ್ಲಿ ಮಾರ್ಗದರ್ಶಕರಾಗುವುದಕ್ಕೆ ಬದಲಾಗಿ, ತಮ್ಮ ನಡತೆ ಯಿಂದ ತಮ್ಮ ಧರ್ಮಕ್ಕೇ ಅಪಖ್ಯಾತಿಯನ್ನು ತರುವಂತೆ ಇದ್ದರು. ಇದನ್ನು ಕಂಡು ಬೆಂಜಮಿನ್ ಫ್ರಾಂಕ್‌ಲಿನ್ನನು ವ್ಯಸನಪಟ್ಟು, ತನ್ನಂತೆಯೇ ದೈವ ಭಕ್ತಿಯುಳ್ಳವರೂ, ಪ್ರಜಾಸೇವಾತತ್ಪರರೂ ಆದ ಕೆಲವುಂದಿ ಸ್ನೇಹಿತರನ್ನು ಸೇರಿಸಿಕೊಂಡು ಒಂದು ಸಂಘವನ್ನೇರ್ಪಡಿಸಿ ತನ್ಮೂಲಕ ಪ್ರಜಾಸಾಮಾನ್ಯ ದಲ್ಲಿ ಸದ್ಬೋಧೆಯ ಕಾರ್ಯವನ್ನು ನಡೆಯಿಸಬೇಕು ಎಂದು ಉದ್ದೇಶ ಪಟ್ಟನು. ಆತನ ಮನಸ್ಸಿನಲ್ಲಿ, ಕಾಲಕ್ರಮದಲ್ಲಿ ಲೋಕೋಪಕಾರಕ್ಕಾಗಿ ದುಡಿಯುವವರ ಒಂದು ದೊಡ್ಡ ಸಂಘವನ್ನೇ ಸ್ಥಾಪಿಸಬೇಕೆಂಬ ಅಭಿ ಲಾಷೆಯಿದ್ದಿತು. ಆದರೆ ಅದು ಕಾರ್ಯಕಾರಿಯಾಗದಿದ್ದರೂ, ಆತನು ತನ್ನ ಮಿತ್ರಮಂಡಲಿಯ ಕೆಲವುಂದಿ ಸತ್ಪುರುಷರ ಮೂಲಕವೇ ಸಾಧ್ಯ ವಾದಷ್ಟು ಕೆಲಸಮಾಡುತ್ತಾಬಂದನು. ಅವನು ಏರ್ಪಡಿಸಿದ್ದ ಪುಸ್ತಕ ಭಂಡಾರದ ಮೂಲಕವೂ ಜನಗಳಲ್ಲಿ ಜ್ಞಾನಪ್ರಸಾರವಾಗಲು ಅವಕಾಶವುಂ ಟಾಯಿತು. ಅಲ್ಲದೆ, ಅವನಿಂದ ಪ್ರಕಟಿಸಲ್ಪಡುತ್ತಿದ್ದ 'ಪೆನ್ಸಿಲ್ವೇನಿಯಾ ಗೆಜೆಟ್' ಎಂಬ ವೃತ್ತಪತ್ರಿಕೆಯ ಮೂಲಕವಾಗಿಯೂ ಜನಮನವು ತಕ್ಕಷ್ಟುಮಟ್ಟಿಗೆ ಸುಧಾರಿಸಲ್ಪಡುತ್ತಿತ್ತು.

ತನ್ನ ಮಾತೃಭೂಮಿಯ ಸೇವೆಯನ್ನು ತನ್ನಿಂದ ಸಾಧ್ಯವಿರುವ ಮಾ ರ್ಗಗಳಿಂದಲೆಲ್ಲ ಮಾಡಬೇಕೆಂದು ಸದಾ ಹಂಬಲಿಸುತ್ತಿದ್ದ ಆ ಸತ್ಪುರುಷನ ಮನಸ್ಸಿನಲ್ಲಿ ಹೊಸ ಹೊಸ ಭಾವನೆಗಳು ಬರಲಾರಂಭಿಸಿದುವು. ಮಹ ದ್ಗ್ರಂಥಗಳಲ್ಲಿದ್ದ ಮಹನೀಯರ ಮತ್ತು ಮಹಾಕವಿಗಳ ವಾಕ್ಯಗಳನ್ನು ಆರಿಸಿ, ದಿನಕ್ಕೊಂದರಂತೆ ಅವನ್ನು ವಿಂಗಡಿಸಿ, 'Poor Richard's Almanac' ಎಂದರೆ 'ಬಡ ರಿಛರ್ಡನ ಪಂಚಾಂಗ' ಎಂಬ ಹೆಸರಿನಿಂದ ಒಂದು ಪಂಚಾಂಗವನ್ನು ೧೭೩೨ರಲ್ಲಿ ಪ್ರಕಟಿಸಿದನು. ಅದರಲ್ಲಿ ಸಂಗೃ ಹೀತವಾದ ನೀತಿಬೋಧಕ ವಾಕ್ಯಗಳು ಸಕಲರ ಹೃದಯವನ್ನೂ ಆಕರ್ಷಿ ಸುತ್ತಿದ್ದುವು. ಪ್ರತಿವರ್ಷವೂ ಆ ಪಂಚಾಂಗದ ಸುಮಾರು ಹತ್ತುಸಾವಿರ ಪ್ರತಿಗಳಿಗೆ ಮೇಲ್ಪಟ್ಟು ಖರ್ಚಾಗುತ್ತಿದ್ದುವಂತೆ! ಬೆಂಜಮಿನ್ನನೂ ಮೇಲೆ

ಮೇಲೆ ಉತ್ಸಾಹಗೊಂಡು, ನವನವೀನ ವಿಚಾರಗಳನ್ನು ಸಂಗ್ರಹಿಸಿ-ಅದನ್ನು ಇಪ್ಪತ್ತೈದು ವರ್ಷಗಳವರೆಗೆ ಪ್ರಕಟಿಸುತ್ತಾ ಬಂದನು. ಆ ವಾಕ್ಯಗಳು ಮನೋಲ್ಲಾಸಕರವಾಗಿದ್ದುದು ಮಾತ್ರವಲ್ಲ - ಆ ಪ್ರಾಂತದವರ ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡಿ, ಅವರಲ್ಲಿ ದೇಶಾಭಿಮಾನ ಧರ್ಮಾಭಿಮಾನಗಳನ್ನೂ ಹೆಚ್ಚಿಸಿದುವು. ಅವರಲ್ಲನೇಕರು, ತಮ್ಮ ದೇಶವು ಬಡತನಸ್ಥಿತಿಯಲ್ಲಿರುವಾಗ ಪರದೇಶೀಯ ವಸ್ತುಗಳಿಗೆ ಮೋಹಪಟ್ಟು ತಮ್ಮ ದೇಶದಲ್ಲಿ ತಯಾರಾಗುವ ಪದಾರ್ಥಗಳನ್ನು ನಿರಾಕರಿಸುವುದು ತಪ್ಪೆಂದೂ, ಅಪರಾಧವೆಂದೂ ತಿಳಿದುಕೊಂಡು, ವಿದೇಶೀಯ ಮೋಹಕ ಸಾಮಗ್ರಿಗಳನ್ನು ಬಹಿಷ್ಕರಿಸತೊಡಗಿದರು. ಆತನ ಪತ್ರಿಕೆಯ ಮೂಲಕ ವಾರವಾರವೂ ಪ್ರಕಟಿಸಲ್ಪಡುತ್ತಿದ್ದ ಹಲವು ವಿಷಯಗಳ ಮೂಲಕ ತಮ್ಮ ನಡೆನುಡಿಗಳನ್ನು ತಿದ್ದಿಕೊಳ್ಳಲು ಜನತೆಗೆ ಅನುಕೂಲವಾಯಿತು. ಅವನ ಪತ್ರಿಕೆಯಲ್ಲಿ ಅನುಪಯೋಗವಾದ ವಿಚಾರವೊಂದಕ್ಕೂ ಎಡೆಸಿಕ್ಕುತ್ತಿರಲಿಲ್ಲ. ಪರಸ್ಪರ ದ್ವೇಷಾಸೂಯೆಗಳನ್ನು ಹುಟ್ಟಿಸಿ ಹಬ್ಬಿಸುವ ಬರೆವಣಿಗೆಗಳಿಗೆ ಆತನು ತನ್ನ ಪತ್ರಿಕೆಯಲ್ಲಿ ಎಂದೂ ಸ್ಥಳಕೊಟ್ಟವನಲ್ಲ. ಸದಾ ನ್ಯಾಯಪಕ್ಷಪಾತಿಯಾಗಿಯೂ, ಸಜ್ಜನನಾಗಿಯೂ ಇದ್ದ ಅವನ ಪತ್ರಿಕೆಯು ಸಕಲರಿಗೂ ಆಪ್ತ ಮಿತ್ರನಂತಿದ್ದು, ಸಕಲ ವಿಧಗಳಲ್ಲೂ ಸಹಕಾರಿಯಾಗಿದ್ದಿತು.

ಸ್ತ್ರೀ ವಿದ್ಯಾಭ್ಯಾಸವು, ಆಗ ಈಗಿನಂತೆ ಸಾರ್ವತ್ರಿಕವಾಗಿ ಪ್ರಚಾರಕ್ಕೆ ಬಂದಿರಲಿಲ್ಲ. ಬೆಂಜಮಿನ್ ಫ್ರಾಂಕ್‌ಲಿನ್ನನು ಸ್ತ್ರೀಯರು ವಿದ್ಯಾವತಿಯರಾಗಿ ಲೋಕವ್ಯವಹಾರವನ್ನೂ ಧರ್ಮನೀತಿಗಳನ್ನೂ ತಿಳಿದುಕೊಂಡರಾದರೆ ಅವರ ಮೂಲಕ ಕುಟುಂಬಪೋಷಣೆ ಮುಂತಾದ ಕಾರ್ಯಗಳು ಉತ್ಕೃಷ್ಟರೀತಿಯಿಂದ ನಡೆಯಲು ಅವಕಾಶವಾಗುವುದೆಂದು ನಂಬಿದ್ದನು. ಆದುದರಿಂದ ತನ್ನ ಪತ್ರಿಕೆಯ ಮೂಲಕವೂ, ಮಿತ್ರಮಂಡಲಿಯ ಉಪನ್ಯಾಸಾದಿಗಳೂ ಮೂಲಕವೂ ಈ ವಿಚಾರವನ್ನು ಕುರಿತು ಸಮಯದೊರೆತಾಗಲೆಲ್ಲ ಪ್ರಸ್ತಾಪಿಸುತ್ತಾ, ಸ್ತ್ರೀ ಶಿಕ್ಷಣದ ಕ್ರಮವನ್ನು ಏರ್ಪಡಿಸಲು ಪ್ರಯತ್ನಪಟ್ಟನು.

ಬೆಂಜಮಿನ್ನನ ರೀತಿ ನೀತಿಗಳು ಬಹು ಸರಳವಾಗಿದ್ದುವು. ಅವನು ಎಂದೂ ಯಾರೊಡನೆಯೂ ಕಲಹ ಮಾಡಿದವನಲ್ಲ. 'ಮಾತು ಬಲ್ಲವನಿಗೆ

ಜಗಳವಿಲ್ಲ—ಊಟಬಲ್ಲವನಿಗೆ ರೋಗವಿಲ್ಲ' ಎಂಬ ಗಾಥೆಯು ಅವನ ವಿಷಯದಲ್ಲಿ ತಕ್ಕಂತೆ ಒಪ್ಪುತ್ತಿದ್ದಿತು. ತನ್ನ ಮುದ್ರಣಾಲಯದ ಕಾರ್ಯವು ದಿನದಿನಕ್ಕೆ ಹೆಚ್ಚುತ್ತಿರಲು, ಅವನು ತನ್ನಲ್ಲಿದ್ದ ಕೆಲಸಗಾರರಿಗೆ ಬೇರೆ ಬೇರೆ ಸ್ಥಳಗಳಲ್ಲಿ ಮುದ್ರಣಾಲಯಗಳನ್ನಿಟ್ಟುಕೊಟ್ಟು, ಅವರೊಂದಿಗೆ ಪ್ರಾರಂಭದಲ್ಲೇ ತಕ್ಕ ನಿಯಮ ನಿಬಂಧನೆಗಳನ್ನೇರ್ಪಡಿಸಿಕೊಂಡು ಅವರೂ ಕಾಲಕ್ರಮದಲ್ಲಿ ಸ್ವತಂತ್ರವಾಗಿ ಜೀವನೋಪಾಯಮಾಡಿಕೊಳ್ಳಲು ಅವಕಾಶವುಂಟಾಗುವಂತೆ ಏರ್ಪಡಿಸುತ್ತಿದ್ದನು. ತಮ್ಮ ಆ ಊರಿಗೆ ಮತ ಪ್ರಚಾರಾದಿ ಸತ್ಕಾರ್ಯಗಳಿಗಾಗಿ ಯಾರು ಬಂದರೂ, ಅವರು ಯೋಗ್ಯರೆಂದು ಕಂಡುಬಂದರೆ ಆತನು ಸಹಕರಿಸಿ, ಅವರ ಧರ್ಮಪ್ರಚಾರಕಾರ್ಯಕ್ಕೆ ತನ್ನಿಂದ ಸಾಧ್ಯವಿದ್ದ ಸಹಾಯಗಳನ್ನೆಲ್ಲ ಮಾಡುತ್ತಿದ್ದನು.

ತಂದೆತಾಯಿಗಳನ್ನು ಬಿಟ್ಟು ಸ್ವಸ್ಥಳದಿಂದ ಬಹುದೂರದ ಆ ಪರಸ್ಥಳಕ್ಕೆ ಏಕಾಂಗಿಯಾಗಿ ಪ್ರಯಾಣಮಾಡಿ, ಅಲ್ಲಿ ಸ್ವಸಾಮರ್ಥ್ಯದಿಂದಲೇ ಅಷ್ಟುಮಟ್ಟಿನ ಅಭಿವೃದ್ಧಿ ಸ್ಥಿತಿಗೆ ಬಂದಿದ್ದ ಬೆಂಜಮಿನ್ನನು ತನ್ನ ಭಾಷಾಜ್ಞಾನವನ್ನು ಹೆಚ್ಚಿಸಿಕೊಳ್ಳಲು, ತನಗೆ ಇಂಗ್ಲೀಷಿನೊಂದಿಗೆ ಇತರ ಕೆಲವು ಭಾಷೆಗಳ ಪರಿಚಯವಿರಬೇಕಾದುದೂ ಆವಶ್ಯಕವೆಂದೆಣಿಸಿದನು. ೧೭೩೩ನೆಯ ಸಂವತ್ಸರದವರೆಗೆ ಇತರ ಭಾಷೆಗಳನ್ನು ಅಭ್ಯಸಿಸಲು ಅವನಿಗೆ ಅವಕಾಶವೇ ದೊರೆಯಲಿಲ್ಲ. ಆಗ ಫ್ರೆಂಚ್ ಭಾಷೆಯನ್ನು ಕಲಿಯಲಾರಂಭಿಸಿ, ಆ ಭಾಷೆಯ ಗ್ರಂಥಗಳನ್ನು ಓದಿ ಪರಸಹಾಯವಿಲ್ಲದೆ ಅರ್ಥಮಾಡಿಕೊಳ್ಳುವಷ್ಟು ಜ್ಞಾನವನ್ನು ಸಂಪಾದಿಸಿದನು. ತರುವಾಯ ಇಟಾಲಿಯನ್ ಮತ್ತು ಸ್ಪ್ಯಾನಿಷ್ ಭಾಷೆಗಳಲ್ಲೂ ವ್ಯವಹಾರಕ್ಕೆ ಉಪಯೋಗವಾಗುವ ಮಟ್ಟಿಗೆ ತಿಳಿವಳಿಕೆಯನ್ನು ಹೊಂದಿದನು. ಇಷ್ಟಾದ ತರುವಾಯ, ಈ ಐರೋಪ್ಯ ಭಾಷೆಗಳಿಗೆಲ್ಲ ಮಾತೃಸ್ಥಾನೀಯವಾದ ಲ್ಯಾಟಿನ್ ಭಾಷೆಯನ್ನೂ ಕಲಿಯತಕ್ಕುದು ಆವಶ್ಯಕವೆಂದೆಣಿಸಿ ಅದರಲ್ಲೂ ತಕ್ಕಷ್ಟು ಪ್ರವೇಶಗೊಂಡನು. ಒಂದು ಭಾಷೆಯನ್ನು ಚೆನ್ನಾಗಿ ಕಲಿತು ಮಿಕ್ಕ ಸೋದರೀ ಭಾಷೆಗಳನ್ನು ವ್ಯವಹಾರಕ್ಕೆ ಅನುಕೂಲವಾಗುವಷ್ಟುಮಟ್ಟಿಗೆ ಅಭ್ಯಾಸಮಾಡುವುದು ಲೋಕವ್ಯವಹಾರದಲ್ಲಿ ತೊಡಗಿರುವ ಪ್ರತಿಯೊಬ್ಬನಿಗೂ ಅವಶ್ಯಕವೆಂದು ಆತನ ಅಭಿಪ್ರಾಯವಾಗಿದ್ದಿತು. ವ್ಯರ್ಥಕಾಲಕ್ಷೇಪಮಾಡದೆ ತನು ಪಟು

ಯವನ್ನು ಜ್ಞಾನಾಭಿವೃದ್ಧಿಗೆ ವಿನಿಯೋಗಿಸಿ ಪ್ರಯತ್ನಮಾಡಿದಲ್ಲಿ ಸಕಲರೂ ಆತನಂತೆಯೇ ಕೃತಕೃತ್ಯರಾಗಬಹುದೆಂಬುದಕ್ಕೆ ಸಂದೇಹವೇನು?

'ಕೆಲವಂ ಬಲ್ಲವರಿಂದ ಕಲ್ತು........ಸರ್ವಜ್ಞನಪ್ಪಂತೆ' ಬೆಂಜಮಿನ್ನನು ಸ್ವಸಾಮರ್ಥ್ಯದಿಂದಲೇ ತನ್ನ ಜೀವಿತ ಪಥವನ್ನು ಕಲ್ಪಿಸಿಕೊಂಡುದು ಮಾತ್ರವಲ್ಲ - ಸಹವಾಸಿಗಳಲ್ಲಿ ಗೌರವವನ್ನು ಪಡೆದು ಪಂಡಿತರಲ್ಲಿ ಗಣ್ಯನಾಗುವಷ್ಟು ವಿದ್ಯಾಬುದ್ಧಿಗಳನ್ನು ಗಳಿಸಿ ಸ್ವನಾಮಖ್ಯಾತನಾದನು. ಆ ಊರಿನಲ್ಲೂ, ಆ ಪ್ರಾಂತದಲ್ಲೂ ಬೆಂಜಮಿನ್ ಫ್ರಾಂಕ್ಲಿನ್ ಎಂದರೆ ಜನಗಳಲ್ಲಿ ಸದಭಿಪ್ರಾಯವುಂಟಾಗಿದ್ದಿತು. ಹೀಗೆ ತನ್ನ ಸದ್ಗುಣ ಸದಾಚರಣೆಗಳಿಂದ ಕೀರ್ತಿಯನ್ನೂ ಸಂಪತ್ತನ್ನೂ ಸಂಪಾದಿಸಿಕೊಂಡ ತರುವಾಯ ಒಂದು ವೇಳೆ ತನ್ನ ನಂಟರಿಷ್ಟರನ್ನೆಲ್ಲಾ ನೋಡುವುದಕ್ಕಾಗಿ ತನ್ನ ಜನ್ಮಸ್ಥಾನವಾದ ಬೋಸ್ಟನ್ ಪಟ್ಟಣಕ್ಕೆ ಪ್ರಯಾಣಮಾಡಿದನು. ಹಿಂದೆ ತನ್ನ ತಮ್ಮನ ಅಭಿವೃದ್ಧಿಯನ್ನು ಕಂಡು ಸಹಿಸದೆ ಅಸೂಯೆಪಡುತ್ತಿದ್ದ ಜೇಮ್ಸನು ಈಗ ರೋಗಗ್ರಸ್ತನಾಗಿ ಅಶಕ್ತನಾಗಿಯೂ ದೀನನಾಗಿಯೂ ಇದ್ದುದರಿಂದ ಅಂತಹ ವೇಳೆಯಲ್ಲಿ ಉತ್ತಮ ಸ್ಥಿತಿಯಲ್ಲಿರುವ ತನ್ನ ತಮ್ಮನೇ ತನಗೆ ಆಶ್ರಯವೆಂದು ನಂಬಿ, ಅವನನ್ನು ಉಚಿತ ವಚನಗಳಿಂದ ಆದರಿಸಿ, ತನ್ನ ಹತ್ತು ವಯಸ್ಸಿನ ಮಗನನ್ನು ಅವನ ವಶಕ್ಕೆಕೊಟ್ಟು, ಕಾಪಾಡಿ ಅಭಿವೃದ್ಧಿಗೊಳಿಸೆಂದು ಪ್ರಾರ್ಥಿಸಿಕೊಂಡನು ಬೆಂಜಮಿನ್ನನು ತನ್ನ ಅಣ್ಣನ ಪ್ರಾರ್ಥನೆಯನ್ನು ಮನ್ನಿಸಿ ಆತನ ಮರಣಾನಂತರ, ಆ ಹುಡುಗನಿಗೆ ಕೆಲಕಾಲ ವಿದ್ಯಾಭ್ಯಾಸಮಾಡಿಸಿ, ತರುವಾಯ, ಅವನಿಗೂ ಮುದ್ರಣಾಲಯದ ಕೆಲಸ ಕಾರ್ಯಗಳನ್ನು ಕಲ್ಪಿಸಿ, ಸ್ವತಂತ್ರ ವೃತ್ತಿಯಲ್ಲಿ ನಿಲ್ಲಿಸಿದನು. ಹೀಗೆ ಒಬ್ಬನು ಸ್ವಸಾಮರ್ಥ್ಯದಿಂದ ಜ್ಞಾನಪ್ರಕಾಶದ ಕಿರಣಗಳನ್ನು ಕಂಡು ಅಭಿವೃದ್ಧಿಗೆ ಬಂದನೆಂದರೆ ಇತರರನೇಕರೂ ಆತನ ಉದಾಹರಣೆಯಿಂದ ಅಭಿವೃದ್ಧಿಯ ಸೋಪಾನವನ್ನಡರಲು ಮಾರ್ಗವಾಗುವುದು.



## ಅಧ್ಯಾಯ ೨ . 'ಸಾರ್ವಜನಿಕ ಕಾರ್ಯ ಸೂತ್ರಧಾರಕ'

ಲೋಕದಲ್ಲಿ ತಮಗೆ ಅಧಿಕಾರ ಪದವಿಗಳು ಲಭಿಸಲಿಲ್ಲವೆಂದು ಮರುಗುವ,-ಅಸೂಯೆಪಡುವ ಜನರು ಹಲವರುಂಟು; ತಮಗೆ ಗೌರವ ದೊರೆಯಲಿಲ್ಲವೆಂದು ಸಂಕಟಪಡುವ ಜನರುಂಟು. ಆದರೆ ಅಧಿಕಾರಪದವಿಗಳೂ ಗೌರವವೂ ತಕ್ಕ ಯೋಗ್ಯತೆಯಿಲ್ಲದೆ ದೊರೆಯಲಾರವೆಂಬುದನ್ನು ಅವರು ಗಮನಿಸುವುದಿಲ್ಲ. ಯೋಗ್ಯತೆಯನ್ನು ಸಂಪಾದಿಸಿದವನ ಬಳಿಗೆ ಅಧಿಕಾರ ಉದ್ಯೋಗಗಳು ಹುಡುಕಿಕೊಂಡು ಬರುವುವು. ಗೌರವವಾದರೂ ಅಷ್ಟೆ! ಯೋಗ್ಯತೆಯು ಪ್ರಾಪ್ತವಾಯಿತೆಂದರೆ, ಅದರೊಂದಿಗೇ ಬರುವುದು. ಹಾಗೆ ಬಾರದಿದ್ದಲ್ಲಿ ಅರ್ಹತೆಯಲ್ಲಿ ಏನೋ ಕುಂದುಂಟಾಗಿದೆಯೆಂದು ಭಾವಿಸಬೇಕು. ಬೆಂಜಮಿನ್ ಫ್ರಾಂಕ್‌ಲಿನನು ಸದ್ಗುಣವಿಭೂಷಿತನೂ, ನಂಬಿಗಸ್ತನೂ ಗೌರವಸ್ಥನೂ ಆಗಿದ್ದುದು ಅವನಿಗೆ ಮುದ್ರಣಾಲಯ ಸಂಬಂಧದ ಕೆಲಸ ಕಾರ್ಯಗಳನ್ನು ಹೆಚ್ಚು ಹೆಚ್ಚಾಗಿ ಒದಗಿಸುವಲ್ಲಿ ಮಾತ್ರವಲ್ಲ-ರಾಷ್ಟ್ರ ಸಂಘದಲ್ಲೂ ಆತನಿಗೊಂದು ಸ್ಥಾನವನ್ನು ದೊರಕಿಸಿತು. ಆ ಸಂವತ್ಸರದಲ್ಲಿ ನಡೆದ ಚುನಾವಣೆಯಲ್ಲಿ ಆತನನ್ನು ರಾಷ್ಟ್ರಸಭೆಯ ಕಾರ್ಯದರ್ಶಿಯನ್ನಾಗಿ ಚುನಾಯಿಸಿದರು. ಮಹಾಜನ ಸಮ್ಮತಿಯಿಂದ ಚುನಾಯಿತನಾದ ಆತನು ತನಗೆ ಸ್ವಾಭಾವಿಕವಾದ ಶ್ರದ್ಧೋತ್ಸಾಹಗಳಿಂದ ಕೆಲಸಮಾಡುತ್ತಾ ಎಲ್ಲರ ಪ್ರೀತಿ ವಿಶ್ವಾಸಗಳಿಗೂ ಪಾತ್ರನಾದನು. ಮೂರನೆಯ ವರ್ಷದಲ್ಲೂ ಆತನೇ ಆರಿಸಲ್ಪಟ್ಟು, ಅದೇ ಅಧಿಕಾರವನ್ನೇ ಪಡೆದನು. ಆ ಸಂದರ್ಭದಲ್ಲಿ ಸ್ವಾರ್ಥಿಯಾದ ಒಬ್ಬ ಸದಸ್ಯನು, ತನ್ನ ಕಡೆಯವನಿಗೆ ಆ ಉದ್ಯೋಗವನ್ನು ಕೊಡಿಸಬೇಕೆಂದು ಪ್ರಯತ್ನಿಸಿದ್ದನು. ಅವನ ಇಚ್ಛೆಗೆ ವಿರೋಧವಾಗಿ ಪುನಃ ಬೆಂಜಮಿನ್ನನೇ ಚುನಾಯಿತನಾದುದರಿಂದ ಆ ಸದಸ್ಯನಿಗೆ ಅವನಮೇಲೆ ಸ್ವಲ್ಪ ಅಸಮಾಧಾನವುಂಟಾಗಿದ್ದಿತು. ಬೆಂಜಮಿನ್ನನು ತನ್ನ ವಿಷಯದಲ್ಲಿ ಅವನ ಮನಸ್ಸಿನಲ್ಲಿದ್ದ ವಿರೋಧಭಾವವನ್ನು ಹೋಗಲಾಡಿಸಬೇಕೆಂದು ಇಚ್ಛಿಸಿದನಾದರೂ, ಅವನ ಬಳಿಗೆ ದೀನಭಾವದಿಂದ ಹೋಗಲು ಮನಸ್ಸು ಬರಲಿಲ್ಲ. ಆಗ ಒಂದು ಉಪಾಯಮಾಡಿದನು. ಆ ಸದಸ್ಯನ ಬಳಿಯಲ್ಲಿದ್ದ ಒಂದು ಅಪೂರ್ವ ಗ್ರಂಥವನ್ನು ಓದಲಿಕ್ಕೆ ಎರವಲಾಗಿ ಕೊಟ್ಟ

ರಬೇಕೆಂದು ವಿನಯಪೂರ್ವಕ ಬರೆದು ಕಳುಹಿಸಿದನು. ಪುಸ್ತಕವನ್ನು ಓದಿ ಮುಗಿಸಿದ ತರುವಾಯ, ಅದನ್ನು ಹಿಂದಿರುಗಿ ಕಳುಹಿಸುವಾಗ ಒಂದಿಗೇ ಬಂದು ಕೃತಜ್ಞತಾ ಸೂಚಕಪತ್ರವನ್ನು ಬರೆದಿಟ್ಟು ಕಳುಹಿಸಿದನು. ಬೆಂಜಮಿನ್ನನ ಈ ಸೌಜನ್ಯವು ಆ ಸದಶ್ಯನ ಮನಸ್ಸನ್ನು ಬದಲಾಯಿಸಿತು. ಆತನಿಗೆ ಇವನ ವಿಷಯದಲ್ಲಿ ಗೌರವಭಾವವೂ ಪ್ರೀತಿ ವಿಶ್ವಾಸಗಳೂ ಉದಯಿಸಿದುವು. ಬೆಂಜಮಿನ್ನನು ಹೀಗೆ ತಾನು ದೀನತೆಯನ್ನು ವಹಿಸದೆಯೇ ಅಹಂಕಾರಿಯೂ ತನಗೆ ವಿರೋಧಿಯೂ ಆದ ಬೇರೊಬ್ಬನನ್ನು ಹಣ್ಣುಮಾಡಿ ಮಾರ್ಗಕ್ಕೆ ತರುವ, ವಿನಯ ಸೌಜನ್ಯತೆಗಳೆಂಬ ಅಮೌಲ್ಯ ಸಾಧನಗಳನ್ನು ಗಳಿಸಿ ತನ್ನ ಸಕಲ ಕಾರ್ಯಗಳನ್ನೂ ಸಾಧನೆ ಮಾಡಿಕೊಳ್ಳುತ್ತಿದ್ದನು.

ಇದಾದ ತರುವಾಯ ಟಪ್ಪಾಲು ಇಲಾಖೆಯಲ್ಲಿ ಆವರೆಗೆ ನಡೆಯುತ್ತಿದ್ದ ಅವ್ಯವಸ್ಥೆಗಳನ್ನು ಸರಿಪಡಿಸುವ ಕಾರ್ಯವೂ ಆತನ ಪಾಲಿಗೇ ಬಂದಿತು. ಆ ಅಧಿಕಾರದಿಂದ ಅವನಿಗೆ ಸಂಬಳವು ಹೆಚ್ಚಾಗದಿದ್ದರೂ, ಅವನ ಪತ್ರಿಕೆಗಳ ಪ್ರಚಾರಕ್ಕೂ ಹೆಚ್ಚುಮಂದಿ ಚಂದಾದಾರರು ದೊರೆತು, ಅವನ ಪತ್ರಿಕಾ ಉದ್ಯೋಗದಿಂದ ವಿಶೇಷ ಲಾಭ ಸಂಪಾದನೆಯಾಗಲಿಕ್ಕೂ ಮಾರ್ಗವಾಯಿತು. ಇದರೊಂದಿಗೇ ಗ್ರಾಮ-ರಕ್ಷಣೆಗಾಗಿ ಏರ್ಪಟ್ಟಿದ್ದ ಪೋಲೀಸು ಖಾತೆಯನ್ನೂ ಸುಧಾರಿಸಲು ಆತನು ವಿಶೇಷವಾಗಿ ಶ್ರಮಿಸಿದನು. ತಮ್ಮ ಮಿತ್ರಮಂಡಳಿಯ ಸಭೆಗಳಲ್ಲಿ, ಜನರ ಪ್ರಾಣ ಧನ ಮಾನಗಳ ರಕ್ಷಣೆಗಾಗಿ ಆ ಇಲಾಖೆಯ ಕಾರ್ಯಗಳನ್ನು ಕುರಿತು ಉಪನ್ಯಾಸ ಮಾಡಿಯೂ, ತನ್ನ ಪತ್ರಿಕೆಯಲ್ಲಿ ಲೇಖನಗಳನ್ನು ಬರೆದು ಪ್ರಕಟಿಸಿಯೂ ಜನಮನವನ್ನು ತಿದ್ದಿದನು. ಇಷ್ಟಾದಮೇಲೆ ಸರ್ಕಾರದವರು ಆತನ ಸಲಹೆಯ ಸತ್ಯತೆಯನ್ನು ಕಂಡು, ಹೊಸ ತೆರಿಗೆಯನ್ನು ಹಾಕಿ ದ್ರವ್ಯವನ್ನು ಶೇಖರಿಸಿ, ಆ ದ್ರವ್ಯದಿಂದ ಆವಶ್ಯಕವಾದಷ್ಟು ಸಂಖ್ಯೆಯ ಪೋಲೀಸು ದಳವನ್ನು ನಿಯಮಿಸಿ ಪ್ರಜೆಗಳ ಧನ ಮಾನ ಪ್ರಾಣಗಳಿಗೆ ಸುರಕ್ಷಣೆಯನ್ನು ಒದಗಿಸಿದರು. ಆ ಕಾಲದಲ್ಲಿ ಆ ಪ್ರಾಂತದಲ್ಲಿ ಇಲ್ಲದಿದ್ದ ಬೇರೊಂದು ಅನುಕೂಲತೆಯನ್ನು ಒದಗಿಸಿಕೊಟ್ಟು ಪ್ರಜೆಗಳಿಗೆ ಉಪಕಾರಮಾಡಬೇಕೆಂಬ ಒಂದು ಯೋಚನೆಯು ಬೆಂಜಮಿನ್ನನ ಮನಸ್ಸಿಗೆ ಹೊಳೆಯಿತು. ಬೇಸಿಗೆಯಲ್ಲಿ ಮನೆಗಳಿಗಾಗಲೀ ದವಸಧಾನ್ಯ ಹುಲ್ಲುಸೊಪ್ಪುಗಳಿರುವ ಜೋ

ಪಡಿಗಳಿಗಾಗಲೀ ಬೆಂಕಿ ಬಿದ್ದಿತೆಂದರೆ, ಅದನ್ನು ಆರಿಸುವ ಸಾಮಗ್ರಿಗಳನ್ನು ಒದಗಿಸಿಕೊಳ್ಳುವುದರೊಳಗಾಗಿಯೇ ಎಲ್ಲವೂ ಭಸ್ಮವಾಗುತ್ತಿದ್ದಿತು. ಈ ಅನರ್ಥವನ್ನು ತಪ್ಪಿಸಲು, ಅಗ್ನಿ ಉಪಶಾಮಕ ಸಾಮಗ್ರಿಗಳನ್ನು ಮೊದಲೇ ಸಂಗ್ರಹಿಸಿಟ್ಟುಕೊಂಡಿರುವುದರ ಆವಶ್ಯಕತೆಯನ್ನು ಕುರಿತು ಪತ್ರಿಕೆಗಳಲ್ಲಿ ಬರೆದೂ ಉಪನ್ಯಾಸಗಳ ಮೂಲಕ ಹೇಳಿಯೂ ಜನಗಳಲ್ಲಿ - ಆ ಭಾವವನ್ನು ಉದಯಗೊಳಿಸಿದನು. ಅದರ ಪ್ರಯೋಜನವು ದಿನದಿನಕ್ಕೆ ಪ್ರಕಟವಾಗ ತೊಡಗಿತು. ಎಲ್ಲೆಲ್ಲೂ ಅಂತಹ ಸಂಘಗಳು ಏರ್ಪಟ್ಟುವು. ಸಕಲರೂ ತಮ್ಮತಮ್ಮ ಮನೆಯಲ್ಲೇ ಅಗ್ನಿಶಮನ ಸಾಮಗ್ರಿಗಳನ್ನು ಶೇಖರಿಸಿ ಇಡ ತೊಡಗಿದರು. ಇದರಿಂದಲೂ ವಿಶೇಷ ಪ್ರಯೋಜನವುಂಟಾಗಿ, ಆ ಪ್ರಾಂತ ದಲ್ಲಿ ಬೆಂಕಿಯ ಅನಾಹುತಗಳೆಂಬ ಹೆಸರೇ ಇಲ್ಲದಂತಾಯಿತು.

ಬೆಂಜಮಿನ್ ಫ್ರಾಂಕ್ಲಿನ್ನನು ಗೌರವಸ್ಥನಾದ ದೊಡ್ಡಮನುಷ್ಯನಾಗಿದ್ದುದರಿಂದ ಪ್ರಜೋಪಕಾರಕವಾದ ಸಕಲ ಕಾರ್ಯಗಳ ನಿರ್ವಹಣದಲ್ಲೂ ಅವನಿಗೆ ಭಾಗ ಸಿಕ್ಕದೆ ಹೋಗುತ್ತಿರಲಿಲ್ಲ. ಹತ್ತು ಮಂದಿಗೆ ಸಂಬಂಧಿಸಿದ ಕೆಲಸವೊಂದು ಯುಕ್ತವ್ಯವಸ್ಥೆಯಿಂದ ನಡೆಯಿತೆಂದರೆ ಅದರಲ್ಲಿ ಬೆಂಜಮಿನ್ನನ ಪ್ರವೇಶವಿದ್ದಿತೆಂದು ತಿಳಿಯಲೇ ಬೇಕು. ಮುಂದೆ ಒಂದು ವೇಳೆಯಲ್ಲಿ ಐರ್ಲೆಂಡಿನಿಂದ ವೈಟ್‌ಫೀಲ್ಡರೆಂಬ ಧರ್ಮೋಪದೇಶಕರೊಬ್ಬರು ಬಂದರು. ಅವರು ತಮ್ಮ ದೈವಭಕ್ತಿ, ಸೌಮ್ಯಭಾವ, ಜನಗಳಲ್ಲಿ ಪ್ರೇಮಾದರಗಳು, ನಿಷ್ಕಾಪಟ್ಯ, ವಾಕ್ಚಾತುರ್ಯ ಮುಂತಾದ ಗುಣಗಳಿಂದ ಸರ್ವರ ಪ್ರೀತಿವಿಶ್ವಾಸಗಳಿಗೂ ಪಾತ್ರರಾದರು. ಅವರ ಉಪನ್ಯಾಸವೆಂದರೆ ಜನಗಳು ತಮ್ಮ ಕೆಲಸಕಾರ್ಯಗಳನ್ನು ಬಿಟ್ಟು ಗುಂಪುಗುಂಪಾಗಿ ಹೋಗುತ್ತಿದ್ದರು. ಅವರ ಉಪನ್ಯಾಸ ನಡೆಯಲು ತಕ್ಕ ಸಾರ್ವಜನಿಕ ಮಂದಿರಗಳು ಆಗ ಇರಲಿಲ್ಲ. ಮಠಾಧಿಕಾರಿಗಳಿಗೆ, ಅವರ ಧರ್ಮೋಪದೇಶಗಳು ಅಷ್ಟು ಜನಪ್ರಿಯವಾಗಿ ನಡೆಯುತ್ತಿದ್ದುದು, ತಮ್ಮ ಪ್ರತಿಷ್ಠೆಗೆ ಕಂದುಕವೆಂಬ ಭಾವನೆಯಿಂದ ಆ ಬೋಧಕರಮೇಲೆ ಒಂದು ಬಗೆಯ ಅಸೂಯೆಯುಂಟಾಗಿದ್ದುದರಿಂದ, ಅವರ ಉಪನ್ಯಾಸಗಳಿಗೆ ತಮ್ಮ ಪ್ರಾರ್ಥನಾಮಂದಿರಗಳಲ್ಲಿ ಅವಕಾಶಕೊಡುತ್ತಿರಲಿಲ್ಲ. ಆದುದರಿಂದ ಅವು ಬಯಲಿನಲ್ಲೇ ನಡೆಯ ಬೇಕಾಗಿದ್ದಿತು. ಬೇಸಗೆಯಲ್ಲಿ ಈ ಉಪನ್ಯಾಸಗಳಿಗೆ ಯಾವ ತೊಂದ

ರೆಯೂ ಉಂಟಾಗಲಿಲ್ಲವಾದರೂ, ಮಳೆಗಾಲದಲ್ಲಿ ಬಯಲಿನಲ್ಲಿ ಉಪನ್ಯಾಸ ಮಾಡುವುದು ಸಾಧ್ಯವಾಗುತ್ತಿರಲಿಲ್ಲ ಆದುದರಿಂದ ಜನಗಳು ತಮ್ಮ ತಮ್ಮ ಲ್ಲೇ ಚಂದಾಸೇರಿಸಿ ಒಂದು ಪ್ರತ್ಯೇಕ ಉಪನ್ಯಾಸ ಮಂದಿರವನ್ನೇ ನಿರ್ಮಿಸಿದರು. ಇದರ ವಿಚಾರಣಾಧಿಕಾರಿಗಳಲ್ಲಿ ಒಂದು ಸ್ಥಾನವು ಬೆಂಜ ಮಿನ್ನನಿಗೂ ದೊರೆಯಿತು. ಬೆಂಜಮಿನ್ ಫ್ರಾಂಕ್‌ಲಿನ್ನನು, ಧರ್ಮೋಪ ದೇಶಕರಲ್ಲಿರಬೇಕಾದ ಸಕಲ ಆವಶ್ಯಕ ಸದ್ಗುಣಗಳನ್ನೂ ಗಳಿಸಿದ್ದ ವೈಟ್ ಫೀಲ್ಡರನ್ನು ಮೆಚ್ಚಿಕೊಂಡು, ಅವರ ಪ್ರತಿಯೊಂದು ಉಪನ್ಯಾಸಕ್ಕೂ ಹೋಗುತ್ತ, ಅವರ ಪ್ರಸಂಗವು ಹೆಚ್ಚು ಪ್ರಚಾರವಾಗಲು ಏನು ಮಾಡು ವುದು ಆವಶ್ಯಕವೋ ಆ ಎಲ್ಲಾ ಕೆಲಸಗಳನ್ನೂ ಶಕ್ತಿಲೋಪವಿಲ್ಲದೆ ಮಾ ಡುತ್ತಿದ್ದನು. ನಿಸ್ವಾರ್ಥಿಯೂ ಪರೋಪಕಾರಶೀಲರೂ ಆದ ಆ ಧರ್ಮೋ ಪದೇಶಕರು, ಫಿಲಡೆಲ್ಫಿಯದ ನೆರೆಯ ಪ್ರಾಂತವಾದ ಜಾರ್ಜಿಯ ಎಂಬಲ್ಲಿ ಒಂದು ಅನಾಥಾಲಯವನ್ನು ಸ್ಥಾಪಿಸಿ, ಅಲ್ಲಿ ತಂದೆತಾಯಿಗಳಿಲ್ಲದೆ ಅನಾಥ ರಾಗಿ ನಿಂತ ಬಡಮಕ್ಕಳಿಗೆ ಅನ್ನವಸ್ತ್ರಗಳನ್ನಿತ್ತು ಪೋಷಿಸಬೇಕೆಂದು ಪ್ರಯತ್ನಿಸಿದರು. ಈ ಪರೋಪಕಾರ ಕಾರ್ಯವು ಬೆಂಜಮಿನ್ನನಿಗೆ ಪರ ಮಸಮ್ಮತವಾಗಿ ಆ ಸತ್ಕಾರ್ಯಕ್ಕಾಗಿ ಆತನೂ ತನ್ನ ಕೈಯಲ್ಲಾದ ಎಲ್ಲಾ ಸಹಾಯಗಳನ್ನೂ ಮಾಡಿದನು. 'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ' ಎಂಬಂತೆ ಬೆಂಜಮಿನ್ ಮತ್ತು ವೈಟ್‌ಫೀಲ್ಡರ ಸ್ನೇಹವು ದಿನ ದಿನಕ್ಕೆ ಹೆಚ್ಚುತ್ತಾ ಇಬ್ಬರಿಗೂ ಪ್ರೇಮಾನುಬಂಧವು ವಿಶೇಷವಾಗಿ ಬೆಳೆದು ಬಂದಿತು. ಅವರ ಪ್ರಜ್ಞೆಯೂ, ನಿಷ್ಕಾಪಟ್ಯ ಭಾವವೂ, ಅಜ್ಞಾನಿಗಳಿಗೆ ಜ್ಞಾನದೀಪದ ಬೆಳಕನ್ನು ತೋರಿಸಿ, ಅವರನ್ನು ಉದ್ಧರಿಸಬೇಕೆಂಬ ವಿಚಾರದಲ್ಲಿ ಅವರಲ್ಲಿ ಕಂಡುಬಂದ ಶ್ರದ್ಧೋತ್ಸಾಹಗಳೂ, ಬೆಂಜಮಿನ್ನ ನಿಗೆ ಅವರ ವಿಷಯದಲ್ಲಿ ವಿಶೇಷ ಭಕ್ತಿ ಗೌರವಗಳನ್ನು ಉಂಟಾಗಿಸಲು ಸಹಾಯಕವಾದುವು. ಅವರಿಬ್ಬರ ಈ ಸ್ನೇಹವು ಮುಂದೆ ಬಹುಕಾಲ ನಡೆದುಬಂತು.

ಸ್ವಾರ್ಥತೆಯನ್ನು ಬದಿಗಿಟ್ಟು ಸಾರ್ವಜನಿಕ ಕಾರ್ಯಗಳಿಗಾಗಿ ಮುಂದೆ ಬರುತ್ತಿದ್ದ ಆತನಿಗೆ, ಇತರರ ಯೋಚನೆಗೆ ಬರುವುದಕ್ಕೆ ಮುಂ ಚೆಯೇ ಹಲವು ದೇಶಹಿತ ಕಾರ್ಯಗಳು ಹೊಳೆಯುತ್ತಿದ್ದವು. ಹಾಗೆ

ಯೋಚನೆಗೆ ಹೊಳೆದೊಡನೆಯೇ ಅದರ ಯುಕ್ತಾಯುಕ್ತತೆಗಳನ್ನೂ ಸಾಧಕಬಾಧಕಗಳನ್ನೂ ದೀರ್ಘವಾಗಿ ಪರಿಶೀಲಿಸಿ, ಯುಕ್ತತೋರಿತೆಂದರೆ ಅದಕ್ಕೆ ಒಡನೆ ವಿಶೇಷ ಗಮನಕೊಟ್ಟು ಕಾರ್ಯಸ್ವರೂಪಕ್ಕೆ ಬಂದು ನಿಲ್ಲುವಂತೆ ಸಿದ್ಧಪಡಿಸುತ್ತಿದ್ದುದು ಆತನ ಸ್ವಭಾವ. ಆ ಕಾಲದಲ್ಲಿ ಆ ಪೆಸಿಲ್ವೇನಿಯಾ ಪ್ರಾಂತರಕ್ಷಣೆಗಾಗಿ ತಕ್ಕ ಯಾವ ಏರ್ಪಾಡೂ ಇರಲಿಲ್ಲ. ಸ್ಪೈಯಿನ್ ಮತ್ತು ಇಂಗ್ಲೆಂಡು ದೇಶಗಳಿಗೆ ಪ್ರಾರಂಭದಿಂದಲೂ ಇದ್ದ ಮನಸ್ತಾಪಕ್ಕೆ, ಫ್ರೆಂಚರ ಒತ್ತಾಸೆಯೂ ದೊರೆತು, ಅವರೂ ಸ್ಪೈಯಿನ್‌ದೇಶದವರೊಡನೆ ಸೇರಿ ಇಂಗ್ಲೆಂಡನ್ನು ದ್ವೇಷಿಸತೊಡಗಿದರು. ಕೊನೆಗೆ ಈ ಹಗೆಗಳೆಲ್ಲರೂ ಒಟ್ಟಾಗಿ ಅಮೆರಿಕದಲ್ಲಿದ್ದ ಇಂಗ್ಲೀಷರ ಸ್ವಾಸ್ಥ್ಯಗಳನ್ನು ಆಕ್ರಮಿಸಬಹುದೆಂಬ ವರ್ತಮಾನವು ಹಬ್ಬಿತು. ಜನಗಳಲ್ಲಿ ತಳಮಳವು ಬಲವಾಯಿತು. ಮುಂದೇನುಗತಿಯೆಂದು ಸಕಲರೂ ಭಯವಿಹ್ವಲರಾದರು. ಆ ವಿಷಮಕಾಲದಲ್ಲಿ, ನಮ್ಮ ಕಥಾನಾಯಕನ ಮುಂದಾಲೋಚನೆಯೂ, ಸಲಹೆಗಳೂ, ಕಾರ್ಯಪ್ರಯತ್ನವೂ ಧೈರ್ಯಸಾಹಸಗಳೂ ವಿಶೇಷ ಪ್ರಯೋಜನವನ್ನುಂಟುಮಾಡಿದುವು. ಆತನು ಸಧ್ಯದಲ್ಲೇ ತಮ್ಮ ಪ್ರಾಂತಕ್ಕೆ ಪ್ರಾಪ್ತವಾಗಲಿದ್ದ ಅಪಾಯಗಳನ್ನೂ ಅದರ ನಿವಾರಣೋಪಾಯಗಳನ್ನೂ, ಶತ್ರುವರ್ಗದ ಪ್ರಾಬಲ್ಯವನ್ನೂ ವಿವರಿಸಿ ತನ್ನ ಪತ್ರಿಕೆಯಲ್ಲಿ ಹಲವು ಲೇಖನಗಳನ್ನು ಬರೆದು ಪ್ರಕಟಿಸಿದನು. ನಿವಾರಣೋಪಾಯಗಳಲ್ಲಿ ಅತಿ ಮುಖ್ಯವಾದುದೆಂದರೆ, ಸೈನ್ಯವನ್ನು ತಯಾರಿಸಿಕೊಂಡು, ಯುದ್ಧಸಾಮಗ್ರಿಗಳನ್ನು ಶೇಖರಿಸಿಕೊಂಡೂ ಅಪಾಯವನ್ನೆದುರಿಸಲು ಸಿದ್ಧರಾಗಿರುವುದು. ಬೆಂಜಮಿನ್ನನ ಈ ಸಲಹೆಯು ಸರ್ವರಿಗೂ ಸಮಂಜಸವೆಂದು ತೋರಿತು. ಒಡನೆ ಅಲ್ಲಲ್ಲಿ ಸಭೆಗಳು ನಡೆದು, ಆ ಸಲಹೆಯನ್ನು ಶ್ಲಾಘಿಸಿದುವು. ಮಾತ್ರವಲ್ಲ-ಧನಸಹಾಯವೂ ಬೇಕಾದಷ್ಟು ಒದಗಿತು. ಸೈನ್ಯದಲ್ಲಿ ಸಿಪಾಯಿಗಳಾಗಿ ಸೇರಿ ಕೆಲಸಮಾಡಲು ಸಾವಿರಾರು ಸಂಖ್ಯೆಯಿಂದ ಜನರೂ ಮುಂದೆ ಬಂದರು. ದೇಶದ ಎಲ್ಲಾ ಪ್ರಾಂತದಲ್ಲೂ ಸ್ವಸಂರಕ್ಷಣೆಗಾಗಿ ಈ ಬಗೆಯ ಸೈನ್ಯಗಳೇರ್ಪಟ್ಟು ಯುದ್ಧಸಾಮಗ್ರಿಗಳನ್ನೂ ಹವಣಿಸಿಕೊಂಡರು. ಬೆಂಜಮಿನ್ನನು ವಾಸವಾಗಿದ್ದ ಫಿಲಡೆಲ್ಫಿಯ ಪ್ರಾಂತದವರು, ತಮ್ಮ ಪ್ರಾಂತ್ಯದಲ್ಲಿ ಏರ್ಪಟ್ಟ ಸೈನ್ಯಕ್ಕೆ ಆತನನ್ನೇ ನಾಯಕನಾಗಿರಲು ಕೋರಿದರು.

ಆದರೆ ಆತನು ಆ ಉನ್ನತಸ್ಥಾನಕ್ಕೆ ತಾನು ಅರ್ಹನಲ್ಲವೆಂದು ಹೇಳಿ, ಅದಕ್ಕೆ ಯೋಗ್ಯನಾದ ಮತ್ತೊಬ್ಬಾತನಿಗೆ ಆ ಸ್ಥಾನವನ್ನು ಕೊಡಿಸಿ ತಾನೂ ಇತರರಂತೆಯೇ ಒಬ್ಬ ಸಾಮಾನ್ಯನಾದ ಸಿಪಾಯಿಯಾಗಿ ಎಲ್ಲರಂತೆಯೇ ಕ್ಲುಪ್ತಕಾಲಗಳಲ್ಲಿ ಪಹರೆ ಕೊಡುವುದೇ ಮುಂತಾದ ಕೆಲಸಗಳನ್ನು ಮಾಡುತ್ತ, ದೇಶಹಿತ ದೃಷ್ಟಿಯಿಂದ ಸಾಮಾನ್ಯರಲ್ಲಿ ಒಬ್ಬನಾಗಿ ದುಡಿಯುತ್ತಿದ್ದನು.

ಅಪಾಯ ಸಂದರ್ಭದಲ್ಲಿ ಸ್ವಸಂರಕ್ಷಣೆ ಮಾಡಿಕೊಳ್ಳಲಿಕ್ಕಾಗಿ ಸೈನ್ಯವಿರಬೇಕೆಂಬ ವಿಚಾರವನ್ನು ದೇಶದಲ್ಲಿ ಸಕಲರೂ ಒಪ್ಪುತ್ತಿದ್ದರಾದರೂ, ರಾಷ್ಟ್ರಸಭೆಯಲ್ಲಿದ್ದ ಮಂದಪಕ್ಷದವರೆಂಬ ಕೆಲಮಂದಿಗೆ ಅದು ಸಮ್ಮತವಾಗಿರಲಿಲ್ಲ ಅವರ ಅಭಿಪ್ರಾಯದಲ್ಲಿ, ಯುದ್ಧಪ್ರಸಕ್ತಿಯೇ ಇಲ್ಲದ ಆ ಕಾಲದಲ್ಲಿ, ವಿಶೇಷ ಧನವ್ಯಯಕ್ಕೆ ಕಾರಣವಾದ ಯುದ್ಧ ಸಾಮುಗ್ರಿಗಳ ಸಂಗ್ರಹಣವೇ ಮುಂತಾದುವು ಅನಾವಶ್ಯಕವೆಂದು ಹೊರಪಟ್ಟಿತು. ಆದರೆ ಬೆಂಜಮಿನ್ ಫ್ರಾಂಕ್ಲಿನ್ನನು ಸಕಲ ವಿಚಾರಗಳನ್ನೂ ಕಾರ್ಯಕಾರಣಗಳೊಂದಿಗೆ ವಿವರಿಸಿದ್ದುದರಿಂದ ದೇಶದಲ್ಲಿದ್ದ ಸಕಲರೂ ಅವನ ಅಭಿಪ್ರಾಯಗಳನ್ನೇ ಮೆಚ್ಚಿಕೊಂಡು, ಸೈನ್ಯದ ತರಬಿಯತ್ತು, ಫಿರಂಗಿಯೇ ಮುಂತಾದ ಯುದ್ಧ ಸಾಮುಗ್ರಿಗಳ ಸಂಗ್ರಹಣ ಮುಂತಾದುವಕ್ಕೆ ಅನುಮೋದಿಸಿದ್ದರು. ಹೀಗೆ ಜನಮನವನ್ನು ಒಲಿಸಿಕೊಂಡಿದ್ದ ಬೆಂಜಮಿನ್ನನ ಅಭಿಪ್ರಾಯವನ್ನು ಕಾಲಕ್ರಮದಲ್ಲಿ ಮಂದಪಕ್ಷದ ಮಿಕ್ಕ ಸದಸ್ಯರೂ ಅನುಮೋದಿಸಲೇ ಬೇಕಾಯಿತು. ಹೀಗೆ ಸೈನ್ಯವನ್ನು ತಯಾರಿಸಿ, ಫಿರಂಗಿ ಮದ್ದುಗುಂಡುಗಳನ್ನು ಶೇಖರಿಸಲು ಸರ್ವ ಸನ್ನಾಹಗಳನ್ನೂ ಮಾಡುತ್ತಿದ್ದನಾದುದರಿಂದ ಬೆಂಜಮಿನ್ ಫ್ರಾಂಕ್ಲಿನ್ನನು ಕಾಲು ಕೆರೆದು ಜಗಳ ತೆಗೆಯಲು ಸಿದ್ಧನಾಗಿದ್ದ ಕಲಹಪ್ರಿಯನೆಂದು ಯಾರೂ ಭಾವಿಸಬಾರದು. ಒಂದುವೇಳೆ ಅಕಸ್ಮಾತ್ತಾಗಿ ಯುದ್ಧಪ್ರಸಂಗವೊದಗಿದರೆ - ಶತ್ರುಪಕ್ಷದವರು ಬಂದು ಮೇಲೆ ಬಿದ್ದರೆ, ಸ್ವಸಂರಕ್ಷಣೆಗೆ ಮೊದಲಿನಿಂದಲೇ ಸಿದ್ಧರಾಗಿರತಕ್ಕುದು ಆವಶ್ಯಕವೆಂದೇ ಈ ತಯಾರಿಕೆಯು ನಡೆದಿದ್ದಿತು. ಈ ಸೈನ್ಯ ಸಾಮುಗ್ರಿಗಳ ಸಿದ್ಧತೆಗಾಗಿಯೂ, ಸೈನಿಕರ ತಯಾರಿಕೆಗಾಗಿಯೂ ಉತ್ಸಾಹಕರ ಲೇಖನಗಳನ್ನು ಬರೆಯುತ್ತಿದ್ದ ಆತನು, ದೇಶದಲ್ಲಿ ಶಾಂತಿಸುಖ ಸಮಾಧಾನಗಳನ್ನು ನೆಲೆ

ಗೊಳಿಸುವಂತೆ ಸಕಲರೂ ಭಕ್ತಿಪರಾಯಣರಾಗಿ ದೇವರನ್ನು ಪ್ರಾರ್ಥಿಸ ಬೇಕೆಂದೂ ಸಲಹೆಕೊಡುತ್ತಿದ್ದನು. ಈ ಸಲಹೆಯನ್ನು ಮಠದ ಧರ್ಮ ಬೋಧಕರೂ, ಸಾರ್ವಜನಿಕ ಉಪದೇಶಿಗಳೂ ಮಾನ್ಯಮಾಡಿ, ತಮ್ಮ ಉಪ ನ್ಯಾಸಗಳಲ್ಲಿ, ಈ ವಿಚಾರವನ್ನು ಒತ್ತಿಯೊತ್ತಿ ಹೇಳತೊಡಗಿದರು.

ಸೈನ್ಯವೂ ಯುದ್ಧಸಾಮಗ್ರಿಗಳೂ ಸಿದ್ಧವಾಗಿದ್ದುವಾದರೂ, ಪ್ರಜಾ ನಾಶಕರವಾದ ಯುದ್ಧವೇನೋ ನಡೆಯಲಿಲ್ಲ. ಕಾಲಕ್ರಮದಲ್ಲಿ ಯುದ್ಧ ಪ್ರಸಕ್ತಿಯೇ ನಿಂತುಹೋಗಿ ದೇಶದಲ್ಲಿ ಶಾಂತಿಸಮಾಧಾನಗಳು ವ್ಯಾಪಿಸಿ ದುವು. ಜನಗಳ ಮನಸ್ಸು ಒಂದು ಸ್ಥಿಮಿತಕ್ಕೆ ಬಂದಂತಾಯಿತು. ಈ ಸಂದರ್ಭವನ್ನೇ ಕಾದಿದ್ದ ಬೆಂಜಮಿನ್ ಫ್ರಾಂಕ್‌ಲಿನ್ನನು, ಮತ್ತೊಂದು ಪ್ರಜಾಹಿತ ಕಾರ್ಯವನ್ನು ಕೈಕೊಂಡನು. ಅಷ್ಟು ಪ್ರಜಾಸಂಖ್ಯೆಯಿರುವ ತಮ್ಮ ಪ್ರಾಂತದಲ್ಲಿ ಬಾಲಕರ ಮತ್ತು ಯುವಕರ ವಿದ್ಯಾಭ್ಯಾಸಕ್ಕೆ ತಕ್ಕ ಏರ್ಪಾಡಿಲ್ಲವಲ್ಲ ಎಂಬ ಅಂಶವು ಆತನ ಮನಸ್ಸನ್ನು ಬಹುದಿನಗಳಿಂದಲೂ ಬಾಧಿಸುತ್ತಿದ್ದಿತು. ಈಚೆಗೆ ಯುದ್ಧಪ್ರಸಕ್ತಿಯೊಂದು ಒದಗಿ ಜನದ ಮನ ಶ್ಶಾಂತಿಗೆ ಭಂಗ ಬಂದಿದ್ದಿತಾದುದರಿಂದ ಆ ವಿಚಾರವನ್ನು ಬದಿಗಿಟ್ಟು ಆತ ನು ಸೈನ್ಯದ ತಯಾರಿಕೆಯನ್ನು ಪ್ರೋತ್ಸಾಹಗೊಳಿಸುವ ಕಾರ್ಯದಲ್ಲಿ ನಿರತ ನಾಗಿದ್ದನು. ಈಗ ಆ ಕಾರ್ಯದ ಆವಶ್ಯಕತೆಯು ಮುಗಿದುದರಿಂದ ಪುನಃ ವಿದ್ಯಾನಿಲಯಸ್ಥಾಪನೆಯ ಕಾರ್ಯಕಲಾಪಗಳಿಗೆ ಪ್ರಾರಂಭಿಸಿ, ತನ್ನ ಅಭಿ ಪ್ರಾಯಗಳನ್ನೆಲ್ಲ ಸೂಚಿಸಿ ಒಂದು ಚಿಕ್ಕ ಹಸ್ತಕವನ್ನು ಬರೆದು ಪ್ರಕಟಿಸಿ ದುದಲ್ಲದೆ-ಹಲವುಮಂದಿ ಪ್ರಜಾಪ್ರಮುಖರಿಗೆ ಅದನ್ನು ಕಳುಹಿಸಿ ಅವರ ಅಭಿಪ್ರಾಯಗಳನ್ನೂ ಅಪೇಕ್ಷಿಸಿದನು. ಆತನ ಸೂಚನೆಗಳು ಸಮಂಜಸ ವಾದುವೆಂದು ಸರ್ವರಿಂದಲೂ ಅಂಗೀಕೃತವಾಗಿ, ಅಪೇಕ್ಷಿತವಾದ ಚಂದಾ ಹಣವು ಸಾವಿರ ಸಂಖ್ಯೆಯಿಂದ ಬರಲು ಆರಂಭವಾಯಿತು. ಒಡನೆ ವಿದ್ಯಾ ನಿಲಯದ ಸ್ಥಾಪನೆಯ ಕಾರ್ಯವು ಮಹೋತ್ಸಾಹದಿಂದ ಪ್ರಾರಂಭಿಸಿ, ಇಪ್ಪತ್ನಾಲ್ಕುಮಂದಿ ಸಭ್ಯರನ್ನೊಳಗೊಂಡ ಒಂದು ಸಮಿತಿಯು ಏರ್ಪಟ್ಟಿ ತು. ಆ ಸಮಿತಿಯಲ್ಲಿ ಬೆಂಜಮಿನ್ನನೂ ಒಬ್ಬನಾಗಿ ಆರಿಸಲ್ಪಟ್ಟನೆಂದು ಹೇಳಬೇಕಾದುದಿಲ್ಲವಷ್ಟೆ! ಆ ಸಮಿತಿಗೆ ಬೆಂಜಮಿನ್ನನೂ ಆತನ ಮಿತ್ರ

ನಾದ ಫ್ರಾನ್ಸಿಸ್ ಎಂಬಾತನೂ ಸೂತ್ರಧಾರಕರಾಗಿ, ಆ ವಿದ್ಯಾನಿಲಯದ ಸ್ಥಾಪನೆ, ಕಾರ್ಯಕ್ರಮ ಮುಂತಾದುವುಗಳ ಏರ್ಪಾಡನ್ನು ಕುರಿತ ನಿಯಮ ನಿಬಂಧನೆಗಳನ್ನು ಬರೆದು ಸಿದ್ಧಗೊಳಿಸಿದರು. ಈ ಸತ್ಪುರುಷರ ಮಹೋತ್ಸಾಹದ ಫಲವಾಗಿ ವಿದ್ಯಾನಿಲಯವು ೧೭೪೯ನೆಯ ಸಂವತ್ಸರದಲ್ಲಿ ಪ್ರಾರಂಭವಾಯಿತು. ತರಗತಿಗಳು ವಿಂಗಡಿಸಲ್ಪಟ್ಟು, ಯೋಗ್ಯರಾದ ಉಪಾಧ್ಯಾಯರು ನಿಯಮಿಸಲ್ಪಟ್ಟು, ಪಾಠಪ್ರವಚನಗಳು ಕ್ರಮವಾಗಿ ನಡೆಯಲಾರಂಭವಾದುವು. ವಿದ್ಯಾರ್ಥಿಗಳ ಸಂಖ್ಯೆಯು ದಿನದಿನಕ್ಕೆ ಹೆಚ್ಚತೊಡಗಿತು. ಹತ್ತಿರದ ದೂರದ ಬಾಲಕ ಬಾಲಿಕೆಯರು ಹೆಚ್ಚು ಹೆಚ್ಚು ಸಂಖ್ಯೆಯಿಂದ ಬಂದು ತುಂಬತೊಡಗಲು, ಬಾಡಿಗೆಗೆ ಪಡೆದಿದ್ದ ಆ ಪಾಠಶಾಲಾ ಕಟ್ಟಡವು ಶುದ್ಧಾಂಗವಾಗಿ ಸಾಲದಾಗಿ, ಪಾಠಶಾಲೆಗಾಗಿಯೇ ಪ್ರತ್ಯೇಕವಾದೊಂದು ದೊಡ್ಡ ಕಟ್ಟಡವಿರಬೇಕಾದುದು ಆವಶ್ಯಕವೆನ್ನಿಸಿತು. ಅಷ್ಟು ದೊಡ್ಡ ಕಟ್ಟಡಕ್ಕೂ ಅದರೊಂದಿಗೇ ಇರಬೇಕಾದ ಬಾಲಕರ ಆಟದ ಬಯಲು ಮುಂತಾದುವುಗಳಿಗೂ ಸಾಕಾಗುವಷ್ಟು ಸ್ಥಳವನ್ನು ಸಂಪಾದಿಸುವುದು ಹೇಗೆ ಎಂಬುದರೊಂದಿಗೆ, ಕಟ್ಟಡಕ್ಕೆಂಬ ಕಾರಣದಿಂದ ಮೇಲೆಮೇಲೆ ಜನಗಳನ್ನು ಧನಸಹಾಯಕ್ಕಾಗಿ ಯಾಚಿಸುವುದಾದರೂ ಹೇಗೆ ಎಂಬ ಯೋಚನೆಯೂ ಸಮಿತಿಯವರನ್ನು- ಮುಖ್ಯವಾಗಿ ಬೆಂಜಮಿನ್ನನನ್ನು ಬಾಧಿಸತೊಡಗಿತು. ಆ ಸಂದರ್ಭದಲ್ಲಿ ಆತನಿಗೆ ಒಂದು ಉಪಾಯ ತೋರಿತು. ಹಿಂದೆ ವೈಟ್ ಫೀಲ್ಡರೆಂಬ ಧರ್ಮೋಪದೇಶಕರ ಬೋಧನೆಗಾಗಿ ನಿರ್ಮಿತವಾಗಿದ್ದ ಸಾರ್ವಜನಿಕ ಕಟ್ಟಡವು ಯಾವ ಉಪಯೋಗಕ್ಕೂ ಇಲ್ಲದೆ, ಬರಿದಾಗಿಯೇ ಇದ್ದುದರಿಂದ ಅದನ್ನು ಪಾಠಶಾಲೆಗಾಗಿ ಉಪಯೋಗಿಸಿಕೊಳ್ಳಬಹುದೆಂದು ಆತನು ಯೋಚಿಸಿದನು. ಬೆಂಜಮಿನ್ನನು ಆ ಕಟ್ಟಡದ ಧರ್ಮಕರ್ತರಲ್ಲೊಬ್ಬನಾಗಿಯೂ, ವಿದ್ಯಾನಿಲಯದ ಕಾರ್ಯಕಾರಿ ಸಮಿತಿಯವರಲ್ಲಿ ಒಬ್ಬನಾಗಿಯೂ ಇದ್ದುದರಿಂದ ಆ ಸಾರ್ವಜನಿಕ ಕಟ್ಟಡವನ್ನು ಸಾರ್ವಜನಿಕರದೇ ಆದ ವಿದ್ಯಾನಿಲಯದ ಆಧಿಪತ್ಯಕ್ಕೆ ವಹಿಸಿಕೊಡುವಂತೆಯೂ, ಧರ್ಮ ಪ್ರಸಂಗಾದಿ ಸಾರ್ವಜನಿಕ ಕಾರ್ಯಗಳಿಗೆ ಬೇಕಾದಾಗ ಅದನ್ನು ಒಂದು ಹಗಲು ಅಥವ ಒಂದು ದಿನದ ಮಟ್ಟಿಗೆ ಬಿಟ್ಟುಕೊಡುವಂತೆಯೂ ಉಭಯರನ್ನೂ ಒಪ್ಪಿಸುವುದು ಆತನಿಗೆ ಕಷ್ಟವಾಗಲಿಲ್ಲ.

ಹೀಗೆ ವಿಶೇಷ ಕಷ್ಟವಿಲ್ಲದೆಯೇ ವಿದ್ಯಾನಿಲಯಕ್ಕೊಂದು ಭವ್ಯವಾದ ಸ್ವತಂತ್ರ ಕಟ್ಟಡವು ದೊರೆತುದು ಅದರ ಸಕಲವಿಧ ಅಭಿವೃದ್ಧಿಗಳಿಗೂ ಆಧಾರವಾಯಿತು. ದಿನದಿನಕ್ಕೆ ವಿದ್ಯಾರ್ಥಿಗಳ ಸಂಖ್ಯೆಯು ಬೆಳೆಯುತ್ತ ಹೋಯಿತು. ಸಮರ್ಥರಾದ ಪಂಡಿತರು ಉಪಾಧ್ಯಾಯರಾಗಿ ಕೆಲಸಮಾಡಲು ಬಂದು ನಿಂತರು. ಅದರ ಅಭಿವೃದ್ಧಿಗಾಗಿ ಸ್ವದೇಶ ವಿದೇಶಗಳ ಧರ್ಮಾತ್ಮರನೇಕರು ದ್ರವ್ಯಸಹಾಯಗಳನ್ನು ಒದಗಿಸಿ ಪ್ರೋತ್ಸಾಹಿಸಿದರು. ದಿನದಿನಕ್ಕೆ ಅದರ ಕೀರ್ತಿಪ್ರತಿಷ್ಠೆಗಳೂ ಐಶ್ವರ್ಯವೂ ಹೆಚ್ಚಿ, ಕಾಲಕ್ರಮದಲ್ಲಿ, ಅದೇ ವಿದ್ಯಾನಿಲಯವೇ 'ಫಿಲಡೆಲ್ಫಿಯಾ ವಿಶ್ವವಿದ್ಯಾನಿಲಯ' (Philadelphia University) ಎಂಬ ಪ್ರಖ್ಯಾತ ನಾಮಧೇಯವನ್ನು ಹೊಂದಿ, ಇಂದಿಗೂ ಸಹಸ್ರಾರುಮಂದಿ ತರುಣರಿಗೆ ವಿದ್ಯಾದಾನಮಾಡುತ್ತಿದೆ. ಬೆಂಜಮಿನ್ ಫ್ರ್ಯಾಂಕ್‌ಲಿನ್ನನು, ಸುಮಾರು ನಾಲ್ವತ್ತು ವರ್ಷಕಾಲ ಇದರ ಪ್ರಾರಂಭ, ಬೆಳೆವಣಿಗೆ, ಸ್ಥಿತಿ ಮುಂತಾದ ಕಾರ್ಯಗಳಲ್ಲೆಲ್ಲ ಸೂತ್ರಧಾರಕನಾಗಿದ್ದು ಅದರ ಅಭಿವೃದ್ಧಿಯಲ್ಲಿ ಪರಮೋತ್ಸಾಹಗೊಂಡು, ಅದರ ಸಂಬಂಧದಲ್ಲಿ ತಾನು ಮಾಡಿದ ಸೇವೆಯನ್ನು ತನ್ನ ಜೀವಿತದಲ್ಲೊಂದು ಪರಮ ಲಾಭವೆಂದೆಣಿಸಿ ತೃಪ್ತಿಗೊಂಡಿದ್ದನು.



## ಅಧ್ಯಾಯ ೩ "ಯುದ್ಧಕಾರ್ಯ ಮುಂತಾದುವು"

ನಮ್ಮ ಕಥಾನಾಯಕನ ಯೋಗ್ಯತೆ, ಸ್ವಭಾವ, ಸಾಮರ್ಥ್ಯ, ದೂರದರ್ಶಿತ್ವ, ಲೋಕೋಪಕಾರಬುದ್ಧಿ ಮುಂತಾದುವುಗಳ ಪರಿಚಯವು ಪ್ರಜೆಗಳಿಗೂ, ಸರ್ಕಾರದವರಿಗೂ ಹೆಚ್ಚು ಹೆಚ್ಚಾಗಿ ಆದಂತೆ, ಆತನಿಗೆ ಸಾರ್ವಜನಿಕ ಕಾರ್ಯಗಳಲ್ಲೂ, ಸರ್ಕಾರದಲ್ಲೂ ಬಹು ಜವಾಬುದಾರಿಯ ಉನ್ನತ ಸ್ಥಾನಗಳು ದೊರೆಯುತ್ತಾ ಹೋದುವು. ಇಷ್ಟೆಲ್ಲಾ ಸದ್ಗುಣಗಳ ಜೊತೆಗೆ, ಸಾರ್ವಜನಿಕ ಧುರೀಣರಲ್ಲಿ ಅತ್ಯಾವಶ್ಯಕವಾಗಿ ಇರಬೇಕಾದ ನಿಸ್ಪೃಹತೆಯೆಂಬೊಂದು ಅಮೌಲ್ಯಗುಣವು ಆತನಲ್ಲಿ ಅಕ್ಷಯವಾಗಿದ್ದುದರಿಂದ ಪ್ರಜಾಸಾಮಾನ್ಯವು ಆತನಲ್ಲಿ ಅಚಂಚಲ ನಂಬಿಕೆ ವಿಶ್ವಾಸಗಳನ್ನಿಡಲು ಕಾರಣ

ವಾಯಿತು. ಅಲ್ಲಿಯ ಗೌರ್ನರು ಆತನನ್ನು ನ್ಯಾಯಾಧಿಪತಿಯನ್ನಾಗಿ ನಿಯ ಮಿಸಿದನು. ಆ ಉನ್ನತಸ್ಥಾನದಲ್ಲಿ ಕುಳಿತು ಆತನು ಬಡವರು ಬಲ್ಲಿದರೆಂಬ ತಾರತಮ್ಯಕ್ಕೂ ದಾಕ್ಷಿಣ್ಯಕ್ಕೂ ಒಳಗಾಗದೆ ಕೊಡುತ್ತಿದ್ದ ತೀರ್ಮಾನಗಳು ಸರ್ವರ ಮೆಚ್ಚುಗೆಯನ್ನೂ ಪಡೆದುವು. ಒಡನೆ ಫಿಲಡೆಲ್ಫಿಯದ ನಗರ ಪಾರಿಶುದ್ಧ್ಯ ಸಂಘದ ಸದಸ್ಯತ್ವವೂ, ಕೆಲವುದಿನಗಳೊಳಗಾಗಿ ಅದರ ಅಧ್ಯ ಕ್ಷಸ್ಥಾನವೂ ಆತನಿಗೆ ಲಭ್ಯವಾದುವು. ಇಷ್ಟು ಕೆಲಸಗಳನ್ನೂ ದಕ್ಷತೆಯಿಂದ ನೆರವೇರಿಸಿಕೊಳ್ಳುತ್ತಾ, ಒಂದಿಗೇ ರಾಷ್ಟ್ರಸಭೆಯ ಕಾರ್ಯದರ್ಶಿಯಾಗಿದ್ದು ಆ ಕೆಲಸಗಳನ್ನೂ ನಿರ್ವಹಿಸಿಕೊಂಡು ಹೋಗುತ್ತಿದ್ದನು ಬಹುದಿನಗ ಳಿಂದಲೂ, ಈ ರಾಷ್ಟ್ರಸಭೆಯಲ್ಲಿ ಒಂದು ಉದ್ಯೋಗ ಸ್ಥಾನದಲ್ಲೇ ಇದ್ದು ಬಿಟ್ಟುದರಿಂದ, ಸಭೆಯಮುಂದೆ ಬರುತ್ತಿದ್ದ ಹಲವು ಪ್ರಶ್ನೆಗಳ ವಿಚಾರವಾಗಿ ತನ್ನ ಸ್ವಂತ ಅಭಿಪ್ರಾಯವೇನೆಂಬುದನ್ನು ತಿಳಿಸಲು ಅವಕಾಶವೇ ಇರಲಿಲ್ಲ. ಪ್ರಜೆಗಳಿಗೆ ಪ್ರಯೋಜನಕರವಾದ ಕಾರ್ಯಗಳನ್ನು ಮಾಡಬೇಕೆಂದು ಸದಾ ಹಂಬಲಿಸುತ್ತಿದ್ದ ಆತನಿಗೆ, ಇದು ದೊಡ್ಡ ಪ್ರತಿಬಂಧಕವಾಗಿದ್ದಿತು ಹೀ ಗಿರುವಲ್ಲಿ ಮುಂದೆ ಕೆಲವು ದಿನಗಳೊಳಗಾಗಿ, ನಡೆದ ಪ್ರತಿನಿಧಿ ಚುನಾವಣೆ ಯಲ್ಲಿ ಬೆಂಜಮಿನ್ನನೂ ಒಬ್ಬ ಪ್ರಜಾಪ್ರತಿನಿಧಿಯಾಗಿ ಆರಿಸಲ್ಪಟ್ಟನು. ಇದು ಆತನಿಗೆ ವಿಶೇಷ ತೃಪ್ತಿಯನ್ನುಂಟುಮಾಡಿತು. ಮುಂದೆ ಹತ್ತು ವರ್ಷಕಾಲ ಆ ಸಭೆಯಲ್ಲಿ ಸಕಲರ ಉತ್ತಮಾಭಿಪ್ರಾಯಗಳಿಗೂ ಪಾತ್ರನಾಗಿ ಸದಸ್ಯನಾಗಿದ್ದು ಪ್ರಜಾಕ್ಷೇಮಕರವಾದ ಹಲವು ಮಹತ್ಕಾರ್ಯಗಳ ನಿರ್ವ ಹಣದಲ್ಲಿ ಭಾಗಿಯಾದನು.

ಮಾರನೆಯ ವರ್ಷದಲ್ಲೇ ಕಾರ್ಲಿಸಲ್ ಎಂಬೊಂದು ಪ್ರಾಂತದಲ್ಲಿ ವಾಸವಾಗಿದ್ದ ಮೂಲನಿವಾಸಿಗಳೊಂದಿಗೆ ಕರಾರುಮಾಡಿಕೊಳ್ಳುವುದಕ್ಕಾಗಿ ಏರ್ಪಟ್ಟ ಒಂದು ಸಮಿತಿಯೊಂದಿಗಿದ್ದು ಕೆಲಸಮಾಡಲು ರಾಷ್ಟ್ರಸಭೆಯಿಂದ ಕೆಲಮಂದಿ ಸಭಿಕರನ್ನು ಪ್ರತಿನಿಧಿಗಳನ್ನಾಗಿ ಕಳುಹಿಸಬೇಕೆಂದು ಗೌರ್ನರು ಅಪೇಕ್ಷಿಸಿದನು. ಅತಿಶಯ ಮದ್ಯಪಾಯಿಗಳಾದ ಅವರಿಂದ ಗೌರವಸ್ಥರ ವಾಸಕ್ಕೆ ವಿಶೇಷ ಹಿಂಸೆಯಾಗುತ್ತಿದ್ದುದರಿಂದ ಅವರೊಂದಿಗೆ ಮಾಡಿಕೊಳ್ಳ ಬೇಕಾಗಿದ್ದ ಕರಾರಿನಲ್ಲಿ ಅವರನ್ನು ಹೆಚ್ಚು ನಿರ್ಬಂಧಕ್ಕೆ ಒಳಪಡಿಸುವಂ ತಹ ನಿಯಮಗಳನ್ನು ರಚಿಸಬೇಕಾದುದೂ, ಆ ನಿಯಮಗಳಿಗೆ ಅವರನ್ನು

ಒಳಪಡಿಸಿಕೊಳ್ಳುವುದೂ ಅತ್ಯಂತ ಆವಶ್ಯಕವಾಗಿದ್ದಿತು. ರಾಷ್ಟ್ರ ಸಭೆಯಿಂದ ಮಿ|| ನಾರಿಸ್ ಎಂಬಾತನೂ ಬೆಂಜಮಿನ್ ಫ್ರಾಂಕ್ಲಿನ್ನನೂ ಚುನಾಯಿತರಾದರು. ಆ ದಿನ ಆ ಕರಾರಿನ ಕಾಲದಲ್ಲಿ ಸ್ಥಿಮಿತಬುದ್ಧಿಯಿಂದ ಇದ್ದು ಕೆಲಸವನ್ನು ನಡೆಸಿದರೆ ತರುವಾಯ ಅವರಿಗೆ ವಿಶೇಷವಾಗಿ ಮದ್ಯವನ್ನು ಕೊಡಿಸುತ್ತೇವೆಂದು ಕಮಿಷನ್ನಿನವರು ವಾಗ್ದಾನಮಾಡಿದರು. ಅದರಂತೆಯೇ ಆ ದಿನದ ಕೆಲಸ ಕಾರ್ಯಗಳು ಬಹು ತೃಪ್ತಿಕರವಾಗಿ ನಡೆಯಲು, ಸಾಯಂಕಾಲದಲ್ಲಿ ನೂರಾರುಮಂದಿ ಮೂಲನಿವಾಸಿಗಳು ಸ್ವೇಚ್ಛೆಯಾಗಿ ಕುಡಿದು ಹೆಣ್ಣು ಗಂಡೆಂಬ ಭೇದವನ್ನೂ ಮರೆತು, ಒಬ್ಬರನ್ನೊಬ್ಬರು ಬೈಯುತ್ತಲೂ ಹೊಡೆಯುತ್ತಲೂ ಹಲವು ಅಸಹ್ಯ ಕೃತ್ಯಗಳನ್ನು ಮಾಡುತ್ತಲೂ ಬಲು ಹಾವಳಿಮಾಡಿದರು. ಮಾರನೆಯ ಪ್ರಾತಃಕಾಲ ಮದ್ಯಪಾನದ ಮತ್ತು ಇಳಿದ ತರುವಾಯ ತಾವು ಮಾಡಿದುದು ತಪ್ಪೆಂದು ಅವರಿಗೇ ತಿಳಿವಳಿಕೆಯಾಗಿ, ಕ್ಷಮಾಪಣೆ ಕೇಳಿಕೊಳ್ಳಲು ತಮ್ಮ ಪೈಕಿ ಮೂವರನ್ನು ಕಮಿಷನ್ನಿನವರ ಬಳಿಗೆ ಕಳುಹಿಸಿದರು. ಅವರು ತಮ್ಮ ಜನಗಳು ಮಾಡಿದ ಹಾವಳಿಗೆಲ್ಲ ಆ ಮದ್ಯವೇ ಕಾರಣವೆಂದೂ, ದೇವರು ನಮ್ಮವರು ಅದನ್ನು ಕುಡಿಯಬೇಕೆಂದೇ ಅದನ್ನು ಸೃಷ್ಟಿಮಾಡಿದ್ದಾನಾದುದರಿಂದ ಆ ಭಾಗದಲ್ಲಿ ತಾವು ನಿರ್ದೋಷಿಗಳೆಂದೂ ಸ್ಥಾಪಿಸಿಕೊಂಡರು. ಬೆಂಜಮಿನ್ನನ ಮನಸ್ಸಿಗೆ ಆ ಮೂಲನಿವಾಸಿಗಳಿಗಿದ್ದ ಮದ್ಯವು ತಮಗಾಗಿಯೇ ದೇವರಿಂದ ನಿರ್ಮಿಸಲ್ಪಟ್ಟಿತೆಂಬ ಅಭಿಪ್ರಾಯವೂ ಒಂದು ದೃಷ್ಟಿಯಿಂದ ನಿಶ್ಚಯವೆಂದೇ ತೋರಿತು. ಏಕೆಂದರೆ ಅವರನ್ನು ನಿರ್ಮೂಲಗೊಳಿಸಲು ಅದಕ್ಕಿಂತಲೂ ಉತ್ತಮವಾದ ಸಾಧನವು ಮತ್ತೊಂದಿರಲಿಲ್ಲ. ಅದರ ಪ್ರಭಾವದಿಂದಲೇ ಸಮುದ್ರತೀರದಲ್ಲೆಲ್ಲ ನಿಬಿಡವಾಗಿ ವಾಸವಾಗಿದ್ದ ಮೂಲನಿವಾಸಿಗಳ ಸಂತತಿಯವರು ಕ್ರಮಕ್ರಮವಾಗಿ ಕ್ಷೀಣಿಸುತ್ತ ಬಂದು ಈಗ ಕೇವಲ ನಾಮಾವಶೇಷರಾಗಿದ್ದಾರೆ. ಮದ್ಯಪಾನದಿಂದಲ್ಲದೆ ಅವರ ಸಮೂಲನಾಶಕ್ಕೆ ಮತ್ತೊಂದು ಕಾರಣವಿರದು.

ಕ್ರಮಕ್ರಮವಾಗಿ ನಮ್ಮ ಕಥಾನಾಯಕನ ಸಂಬಂಧವಿರದ, ಸಾರ್ವಜನಿಕ ಸಂಸ್ಥೆಯೇ ಫಿಲಡೆಲ್ಫಿಯಾದಲ್ಲಿ ಇಲ್ಲದಂತಾಯಿತು. ಸುಮಾರು ೧೭೫೧ನೆಯ ಸಂವತ್ಸರದಲ್ಲಿ ಡಾ. ಥಾಮಸ್ ಬಾಂಡ್ ಎಂಬಾತನು ವೈದ್ಯ

ಶಾಲೆಯನ್ನು ಸ್ಥಾಪಿಸಬೇಕೆಂದು ಪ್ರಯತ್ನಿಸಿ, ಅನೇಕರನ್ನು ಸಹಾಯಮಾಡಿರೆಂದು ಕೇಳಿದನು. ಆದರೆ ಆತನು ಯಾರ ಬಳಿಗೆ ಹೋದರೂ, ಅವರು- 'ತಾವು ಬೆಂಜಮಿನ್ನರನ್ನು ಕಂಡಿದ್ದಿರಾ ? ಈ ವಿಚಾರದಲ್ಲಿ ಅವರೇನು ಅಭಿಪ್ರಾಯಪಟ್ಟರು ?' ಎಂದು ಪ್ರಶ್ನಿಸುತ್ತಿದ್ದರು. ತಾನು ಆತನನ್ನು ಇನ್ನೂ ಕಂಡಿಲ್ಲವೆಂದು ಹೇಳಿದೊಡನೆಯೇ,-ಹಾಗಾದರೆ ನೋಡೋಣ-ಎಂದು ಹೇಳುತ್ತಾ ಬಂದರು. ಆಗಲಾತನು, ಬೆಂಜಮಿನ್ನನ ಬಳಿಗೇ ಬಂದು - ಸಕಲರೂ ತಮ್ಮಲ್ಲಿ ನಿರ್ವಿವಾದವಾದ ನಂಬಿಕೆ ವಿಶ್ವಾಸಗಳನ್ನಿಟ್ಟಿರುವುದರಿಂದ ತಾವು ಈ ಕಾರ್ಯಕ್ಕೆ ಒಪ್ಪಿದರೆ ಬಹು ಜನಕ್ಕೆ ಪ್ರಯೋಜನಕರವಾದ ಈ ಕಾರ್ಯವು ನೆರವೇರುತ್ತದೆಂದು ವಿಜ್ಞಾಪಿಸಿಕೊಂಡನು. ಬೆಂಜಮಿನ್ನನು ಅದರ ಪೂರ್ವೋತ್ತರ ವಿಚಾರಗಳನ್ನೆಲ್ಲ ಆತನೊಂದಿಗೆ ಚರ್ಚಿಸಿ, ಅದು ನಿಶ್ಚಯವಾಗಿಯೂ ಪ್ರಜೋಪಕಾರಕವಾದ ಕಾರ್ಯವೆಂಬುವನ್ನು ಕಂಡುಹಿಡಿದು ಒಡನೆ ತಾನು ಅದಕ್ಕೆ ದ್ರವ್ಯಸಹಾಯಮಾಡಿದುದಲ್ಲದೆ, ಮಿಕ್ಕವರೂ ಹಾಗೆ ಮಾಡಲು ಸಾಧ್ಯವಿದ್ದ ಕಾರ್ಯಗಳನ್ನೆಲ್ಲ ಮನಃಪೂರ್ವಕವಾಗಿ ಮಾಡಿದನು. ಅದರ ಪ್ರಯೋಜನಗಳನ್ನೂ ಆವಶ್ಯಕತೆಯನ್ನೂ ಕುರಿತು, ತನ್ನ ಪತ್ರಿಕೆಯಲ್ಲಿ ಹಲವು ಲೇಖನಗಳನ್ನು ಬರೆದು ಪ್ರಕಟಿಸಿದನು. ಬೆಂಜಮಿನ್ನನ ಬೆಂಬಲವನ್ನು ಪಡೆದಿದ್ದ ಆ ಕಾರ್ಯಕ್ಕೆ ಮಹಾಜನಸಹಾಯವು ದೊರೆಯುವಲ್ಲಿ ಸಾವಕಾಶವಾಗಲಿಲ್ಲ. ದ್ರವ್ಯಸಹಾಯವು ಸಾವಿರ ಸಾವಿರವಾಗಿ ದೊರೆಯತೊಡಗಿತು. ಜನಗಳಿಂದ ಒದಗುವ ಸಹಾಯದೊಂದಿಗೆ ಸರ್ಕಾರದ ಸಹಾಯವನ್ನೂ ಯಾಚಿಸಿದ್ದಾಯಿತು. ವೈದ್ಯಶಾಲೆಯ ಕಟ್ಟಡನಿರ್ಮಾಣಕ್ಕೂ ಅದರ ಸ್ಥಾಪನೆ ಸ್ಥಿತಿ ಮುಂತಾದುವುಗಳಿಗೂ ಸಾಕಾದಷ್ಟು ದ್ರವ್ಯವು ಮುಂದೆ ಸ್ವಲ್ಪದಿನಗಳಲ್ಲೇ ಒದಗಲು, ಸರ್ವಜನೋಪಯುಕ್ತವಾಗಿರುವಂತೆ ವೈದ್ಯಶಾಲೆಯು ಪ್ರಾರಂಭವಾಗಿ ಕೆಲಸಮಾಡತೊಡಗಿತು. ಇದರಿಂದ ಪ್ರಯೋಜನಪಡೆದ ಪ್ರಜಾಸಮೂಹವು, ಈ ಸೌಕರ್ಯವನ್ನು ಆ ನಗರಕ್ಕೆ ಒದಗಿಸಿಕೊಟ್ಟುದಕ್ಕಾಗಿ ಬೆಂಜಮಿನ್ನನನ್ನು ಅಭಿನಂದಿಸಲು ಆ ನಿಸ್ಪೃಹ ಶಿರೋಮಣಿಯು, ಇದಕ್ಕೆ ನನ್ನಿಂದ ಆದ ಸಹಾಯವೆಂಬುದು ಅತ್ಯಲ್ಪ. ಈ ಮಹೋದ್ದೇಶವು ಮೊದಲು ಥಾಮಸ್ ಬಾಂಡ್ ರವರ ಮನಸ್ಸಿನಲ್ಲೇ ಅಂಕುರವಾಯಿತಾದುದರಿಂದ ಈ ಸಂಬಂಧವಾದ

ಸಮಸ್ತ ಶ್ರೇಯಸ್ಸೂ ಅವರಿಗೇ ಸೇರತಕ್ಕುದು ಎಂದು ನುಡಿದು ತನ್ನ ಚಿತ್ತವೃತ್ತಿಯನ್ನು ಪ್ರದರ್ಶಿಸಿದನು.

ಇದರಂತೆಯೇ ಆ ಪಟ್ಟಣದಲ್ಲಿ ಪ್ರಜಾಸೌಕರ್ಯವನ್ನು ಹೆಚ್ಚಿಸುವ ರಸ್ತೆಗಳ ನಿರ್ಮಾಣ, ರಸ್ತೆಗಳಿಗೆ ಕಲ್ಲು ಚಪ್ಪಡಿಗಳನ್ನು ಹಾಸಿಸುವಿಕೆ, ಚರಂಡಿಗಳ ರಚನೆ, ರಸ್ತೆಗಳಲ್ಲಿ ದೀಪಗಳನ್ನಿಟ್ಟು ರಾತ್ರಿ ಕಾಲದಲ್ಲಿ ಪ್ರಯಾಣಮಾಡತಕ್ಕವರಿಗೆ ಅನುಕೂಲಗೊಳಿಸುವುದು, ರಸ್ತೆಗಳನ್ನು ಗುಡಿಸಿ, ಕಸಕಡ್ಡಿಗಳನ್ನು ದೂರಕ್ಕೆ ಸಾಗಿಸಿ ಊರನ್ನು ಶುಚಿಯಾಗಿಟ್ಟಿರುವುದು ಮುಂತಾದ ನೂರಾರು ಸಣ್ಣಪುಟ್ಟ ಕೆಲಸಗಳನ್ನೂ ಆತನು ಗಮನಿಸಿ, ಯುಕ್ತವಾದುದೆಂದು ತೋರಿದೊಡನೆಯೇ ಆ ವಿಷಯವನ್ನು ಕುರಿತ ಲೇಖನವನ್ನು ಬರೆದು ಜನಮನವನ್ನು ಸಿದ್ಧಗೊಳಿಸಿ, ತರುವಾಯ ಅದು ಕಾರ್ಯರೂಪಕ್ಕೆ ಬರುವಂತೆ ಪ್ರಯತ್ನಪಡುತ್ತಿದ್ದನು. ಅಲ್ಲದೆ ವಿರಾಮವಿದ್ದ ವೇಳೆಯಲ್ಲಿ, ಸ್ವಲ್ಪ ಖರ್ಚಿನಿಂದ ಹೆಚ್ಚು ಉಪಯೋಗವನ್ನು ಪಡೆವ ಹಲವು ಚಿಕ್ಕಪುಟ್ಟ ವಸ್ತುಗಳನ್ನೂ ತಯಾರಿಸುತ್ತಿದ್ದನು. ಅಂಥವುಗಳಲ್ಲಿ ಸ್ವಲ್ಪವೇ ಇದ್ದಲಿನ ವೆಚ್ಚದಿಂದ ಚಳಿಗಾಲದಲ್ಲಿ ಮನೆಯನ್ನು ಶಾಖವಾಗಿಟ್ಟಿರಲು ಆತನು ರಚಿಸಿದ ಒಲೆಯೇ ಮುಖ್ಯವಾದುದು. ಇದನ್ನು ಆತನು ಬಡಜನಗಳು ಪ್ರಯೋಜನ ಹೊಂದಲೆಂಬ ಪರೋಪಕಾರ ಬುದ್ಧಿಯಿಂದ ರಚಿಸಿದನಲ್ಲದೆ, ಅದರ ರಚನೆಗೆ ತನ್ನ ಸ್ವಾಮ್ಯವನ್ನು ಸ್ಥಾಪಿಸಿ, ತನ್ಮೂಲಕ ದ್ರವ್ಯಸಂಪಾದನೆ ಮಾಡಬೇಕೆಂಬ ಉದ್ದೇಶದಿಂದಲಲ್ಲ. ಕೆಲವು ದಿನಗಳಮೇಲೆ ಇಂಗ್ಲೆಂಡಿನಲ್ಲಿ ಬೇರೊಬ್ಬನು ಬೆಂಜಮಿನ್ನನ ಒಲೆಯಂತೆಯೇ ಮತ್ತೊಂದನ್ನು ರಚಿಸಿ ಅದಕ್ಕೆ ತನ್ನ ಸ್ವಾಮ್ಯವನ್ನು (Patent) ಪಡೆದುಕೊಂಡನು. ಆ ಸಂಗತಿಯು ಬೆಂಜಮಿನ್ನನಿಗೆ ಗೊತ್ತಾಯಿತು. ಆದರೂ ಆತನಿಗೆ ಆ ವಿಚಾರದಲ್ಲಿ ವ್ಯವಹರಿಸಬೇಕೆಂಬ ಸ್ವಾರ್ಥಭಾವವು ಹುಟ್ಟಲಿಲ್ಲ. ಮಹನೀಯ ಗುಣಗಳುಳ್ಳ ವ್ಯಕ್ತಿಗಳು ಸ್ವಾರ್ಥತೆಯ ಅಲ್ಪಕಾರ್ಯಗಳಿಗೆ ಏಕೆ ಮನಸ್ಸು ಕೊಟ್ಟಾರು ?

ಬೆಂಜಮಿನ್ನನ ದೃಷ್ಟಿಯಲ್ಲಿ ಯಾವುದೂ ಅಲ್ಪಕಾರ್ಯವೆಂದಿರಲಿಲ್ಲ. ಆತನು ಯಾವ ಕಾರ್ಯವನ್ನು ಕೈಕೊಂಡರೂ, ಅದರಲ್ಲಿ ಸಂಪೂರ್ಣ ಚಿತ್ತವನ್ನಿಟ್ಟು ಶ್ರದ್ಧಾಪೂರ್ವಕ ಮಾಡುತ್ತಿದ್ದನು. ಅಲ್ಪಕಾ

ರ್ಯಗಳ ಆಧಿಕ್ಯತೆಯನ್ನು ಸಂಪೂರ್ಣವಾಗಿ ಬಲ್ಲವನಾಗಿದ್ದ ಆತನು ಉಪಯುಕ್ತವೆಂದು ತೋರಿದ ಯಾವುದನ್ನೂ ಅಲ್ಪಕಾರ್ಯವೆಂದು ಅಲಕ್ಷ್ಯ ಮಾಡುತ್ತಿರಲಿಲ್ಲ. ಹತ್ತು ಸಣ್ಣ ಕಾರ್ಯಗಳನ್ನು ಶ್ರದ್ಧಾಪೂರ್ವಕ ನೆರವೇರಿಸಿದರೆ ಅದೇ ಒಂದು ಮಹತ್ಕಾರ್ಯವಾಗುವುದು ಎಂಬುದು ಆತನ ಅಭಿಪ್ರಾಯವಾಗಿದ್ದಿತು. ಯಾವುದೊಂದು ಸತ್ಕಾರ್ಯಕ್ಕೆಂದು ಹೊರಗಿನಿಂದ ಯಾರು ಬಂದರೂ ಅವನ ಬೆಂಬಲವಿಲ್ಲದಿದ್ದರೆ, ಅವರ ಕಾರ್ಯವು ಸುಲಲಿತವಾಗಿ ನಡೆಯುತ್ತಿರಲಿಲ್ಲ. ಆತನು ಒಪ್ಪಿ ಮೆಚ್ಚಿಕೊಂಡ ಕಾರ್ಯವು, ಉಪಯುಕ್ತವಾದುದು, ಪ್ರೋತ್ಸಾಹಕ್ಕೆ ಅರ್ಹವಾದುದು ಎಂಬ ನಂಬಿಕೆಯು ಜನರಿಗೆ ದೃಢವಾಗಿದ್ದಿತಾದುದರಿಂದ, ಆತನು ಒಪ್ಪಿಬಿಟ್ಟನೆಂದರೆ, ಆ ಕಾರ್ಯವು ಸಿದ್ಧಿಯಾಯಿತೆಂದೇ ತಿಳಿಯಬೇಕು. ತಾನು ಇಷ್ಟುಮಟ್ಟಿನ ಪ್ರಜಾನುರಾಗಕ್ಕೆ ಪಾತ್ರನಾಗಿದ್ದೇನೆಂಬುದರ ಪರಿಚಯವು ಆತನಿಗಿದ್ದಿತಾದರೂ, ಆ ಮಹನೀಯನು ಒಮ್ಮೆಯೂ ತನ್ನ ಅಧಿಕಾರವು ಜನಗಳಮೇಲೆ ನಡೆಯಬೇಕೆಂದು ಆಸಿಸಿದವನಲ್ಲ. ತನ್ನ ಮಾತಿನ ದರ್ಪದಿಂದ ಯಾರ ಮನಸ್ಸನ್ನೂ ನೋಯಿಸಲು ಇಚ್ಛಿಸಿದವನಲ್ಲ. ತಾನು ಇಂತಹ ಸ್ಥಿತಿಗೆ ಏರಿದೆನಲ್ಲ ಎಂದು ಅಹಂಕಾರಗೊಂಡವನಲ್ಲ. ತನ್ನಿಂದ ಅನೇಕರಿಗೆ ಅನೇಕ ಬಗೆಯ ಪ್ರಯೋಜನಗಳುಂಟಾಗುತ್ತಿವೆಯೆಂಬ ಮಮಕಾರವು ಅವನ ಮನಸ್ಸನ್ನು ಹೊಗಲಿಲ್ಲ. ಅವನ ವಿಷಯದಲ್ಲಿ ಪ್ರಜಾಭಿಪ್ರಾಯವು ಹೆಚ್ಚುತ್ತಾ ಸಾಗಿದಂತೆಲ್ಲ, ಆತನಲ್ಲಿ ಹೆಚ್ಚುಹೆಚ್ಚು ವಿನಯ ಸೌಜನ್ಯಾದಿಗಳೂ, ನಿಸ್ವಾರ್ಥತೆ ನಿರ್ಮಮತೆಗಳೂ ವ್ಯಕ್ತವಾಗತೊಡಗಿದುವು. ಪರೋಪಕಾರಮಾಡುವುದರಿಂದ ಬೇರೊಬ್ಬರನ್ನು ಉದ್ಧರಿಸುತ್ತೇನೆಂಬ ಭಾವನೆಯು ಆ ಮಹನೀಯನ ಮನಸ್ಸಿಗೆ ಬಾರದೆ, ಕಷ್ಟದಲ್ಲಿ ಸಿಕ್ಕಿದ್ದ ಬೇರೊಬ್ಬರಿಗೆ ಮಾಡುವ ಸಹಾಯದಿಂದ ತನ್ನ ಮನಸ್ಸಿಗುಂಟಾಗುತ್ತಿದ್ದ ಆನಂದಾನುಭವಮಾಡುವುದೇ ಆತನಿಗೆ ಹೆಚ್ಚು ಪ್ರಿಯಕರವಾಗಿದ್ದಿತು. ಆದುದರಿಂದಲೇ ಆ ಸತ್ಪುರುಷನು ರಾತ್ರಿಯೆನ್ನದೆ ಹಗಲೆನ್ನದೆ, ತನಗಾಗುವ ಕಷ್ಟನಷ್ಟಗಳೊಂದಕ್ಕೂ ಲಕ್ಷ್ಯಕೊಡದೆ ಪರೋಪಕಾರ್ಯಕ್ಕೆ ಸರ್ವದಾ ಸಿದ್ಧನಾಗಿರುತ್ತಿದ್ದನು.

ಮನಃಪೂರ್ವಕವಾಗಿ ಪರೋಪಕಾರಮಾಡಬೇಕೆಂದು ಇಚ್ಛಿಸುವ ಸತ್ಪುರುಷನಿಗೆ ದೈವಸಹಾಯವೂ ಒದಗುತ್ತಾ ಹೋಗುವುದೆಂಬುದು ಬೆಂಜ

ಮಿನ್ನನ ವಿಷಯದಲ್ಲಿ ನಿದರ್ಶನಕ್ಕೆ ಬಂದಿತು. ಆತನು ಹೀಗೆ ಸರ್ವದಾ ಪರಹಿತಕಾರ್ಯಗಳಲ್ಲೇ ನಿರತನಾಗಿರಲು ಸಹಾಯಕವಾಗಿ ಆತನ ಮುದ್ರಣಾಲಯದ ಕಾರ್ಯಗಳನ್ನು, ಆತನೊಡನೆ ಪಾಲುಗಾರನಾಗಿ ಸೇರಿದ್ದ ಡೇವಿಡ್‌ಹಾಲ್ ಎಂಬ ನಂಬಿಗಸ್ತನಾದ ಸತ್ಪುರುಷನು ಸಂಪೂರ್ಣವಾಗಿ ವಹಿಸಿಕೊಂಡು, ಆತನ ಪಾಲಿನ ಲಾಭಾಂಶವನ್ನು ತಪ್ಪದೆ ಒಪ್ಪಿಸುತ್ತಾ ಬರುತ್ತಿದ್ದುದರಿಂದ ಬೆಂಜಮಿನ್ನನು ನಿರ್ಯೋಚನೆಯಿಂದ ಸಕಲ ಕಾರ್ಯಗಳಲ್ಲೂ ಬೆರೆಯಲು ಅವಕಾಶವಾಗುತ್ತಿದ್ದಿತು.

ಈ ಕಾಲದಲ್ಲೇ ಅಂಚೆಯ ಇಲಾಖೆಯ ಸರ್ವಾಧಿಕಾರವನ್ನು ವಹಿಸಿ, ಅದರಲ್ಲಿದ್ದ ಅವ್ಯವಸ್ಥೆಗಳನ್ನು ಸರಿಪಡಿಸುವ ಬಹು ಜವಾಬುದಾರಿಯ ಕಾರ್ಯವೂ ಆತನ ಪಾಲಿಗೇ ಬಂದಿತು. ಯಾವ ಉಪಯುಕ್ತ ಕಾರ್ಯವೂ ನನ್ನಿಂದಲಾಗದೆಂದು ಹೇಳಿ ತಪ್ಪಿಸಿಕೊಳ್ಳುವ ಸ್ವಭಾವವೇ ಆತನಿಗಿರಲಿಲ್ಲವಾದುದರಿಂದ, ಆ ಕೆಲಸವನ್ನು ಕೈಕೊಂಡು ವಿಶೇಷ ದಕ್ಷತೆಯಿಂದ, ಆ ಇಲಾಖೆಯು ಹೆಚ್ಚು ಉಪಯುಕ್ತವಾಗಲು ಆವಶ್ಯಕವಾದ ಹಲವು ತಿದ್ದುಪಾಟುಗಳನ್ನು ರೂಢಿಗೆ ತಂದು ಯಶಸ್ಸಂಪನ್ನನಾದನು.

ಇದಾದ ಸ್ವಲ್ಪ ದಿನಗಳೊಳಗಾಗಿ ಎಂದರೆ ೧೭೫೪ನೆಯ ಸಂವತ್ಸರದ ವೇಳೆಗೆ ಯೂರೋಪಿನಲ್ಲಿ ಇಂಗ್ಲೀಷರಿಗೂ ಫ್ರೆಂಚರಿಗೂ ಯುದ್ಧವು ಆರಂಭಿಸಲಾಗಿ, ಅಮೆರಿಕನಲ್ಲೂ ಅವರವರಿಗೆ ಮನಸ್ತಾಪವುಂಟಾಗಲು ಮೊದಲಾಯಿತು. ಒಡನೆ ಆಲ್ಬನಿ ಎಂಬ ಸ್ಥಳದಲ್ಲಿ ಒಂದು ಸಮ್ಮೇಳನವನ್ನು ಸೇರಿಸಿ, ಅದರಲ್ಲಿ ಆರು ರಾಷ್ಟ್ರಗಳ ಪ್ರತಿನಿಧಿಗಳು ಕಲೆತು ಪ್ರಕೃತ ಸ್ಥಿತಿಯನ್ನು ಕುರಿತು ಚರ್ಚಿಸಬೇಕೆಂದು ನೀರ್ಮಾನವಾಯಿತು. ಗವರ್ನರ್ ಹ್ಯಾಮಿಲ್ಟನ್ನನು, ಪೆನಿಸಿಲ್ವೇನಿಯದಿಂದ ಆರಿಸಲ್ಪಟ್ಟ ಪ್ರತಿನಿಧಿಗಳೊಂದಿಗೆ ಸೇರಿ ಕೆಲಸಮಾಡಲು ಬೆಂಜಮಿನ್ನನನ್ನು ಪ್ರಾರ್ಥಿಸಿದನು. ಆ ಸಮ್ಮೇಳನದಲ್ಲಿ ಬೆಂಜಮಿನ್ನನು, ಅಮೆರಿಕದ ಸಕಲ ರಾಷ್ಟ್ರಗಳೂ ಒಮ್ಮನಸ್ಕತೆಯಿಂದ ಕಲೆತು, ಶತ್ರುಗಳನ್ನು ಎದುರಿಸಬೇಕೆಂದು ಸೂಚಿಸಿದನು. ಅದು ಸರ್ವ ಪ್ರತಿನಿಧಿಗಳಿಗೂ ಸಮ್ಮತವಾಗಲು, ತಮ್ಮ ತೀರ್ಮಾನವನ್ನು ಇಂಗ್ಲೆಂಡಿಗೆ ತಿಳಿಸಿದರು. ಆದರೆ, ಸ್ಥಳೀಯ ವಿದ್ಯಮಾನಗಳನ್ನು ಪ್ರತ್ಯಕ್ಷವಾಗಿ ಕಂಡರಿಯದ ಅಲ್ಲಿಯ ಅಧಿಕಾರಿಗಳಿಗೆ, ಆ ಸಮ್ಮೇಳನದ ತೀರ್ಮಾನ

ಗಳು ರುಚಿಸದೆ, ಅವರು ಅಮೆರಿಕದಲ್ಲಿದ್ದ ಫ್ರೆಂಚ್ ಸ್ವಾಸ್ಥ್ಯಗಳನ್ನು ಹಿಡಿಯಲು ಸೈನ್ಯಗಳನ್ನು ಕಳುಹಿಸಬೇಕೆಂದು ನಿಶ್ಚಯಿಸಿದರು. ಆದರ ಖರ್ಚುವೆಚ್ಚಗಳಿಗಾಗಿ ಹತ್ತು ಸಾವಿರ ಪೌಂಡುಗಳನ್ನು ಕೊಡಬೇಕೆಂದು ರಾಷ್ಟ್ರಸಭೆಯವರು ತೀರ್ಮಾನಿಸಿದರು. ಈ ತೀರ್ಮಾನವನ್ನು ಗೌರ್ನರು ಒಪ್ಪಲಿಲ್ಲ. ಇದರಿಂದ ಸಭೆಯವರ ಮಾನಹೋಗುವ ಪ್ರಸಂಗ ಬಂದಿತು. ಆ ಸಂದರ್ಭದಲ್ಲಿ ಯಾವುದಾದರೊಂದು ಉಪಾಯವನ್ನು ಕಂಡುಹಿಡಿದು ಈ ಇಕ್ಕಟ್ಟಿನಿಂದ ಪಾರುಮಾಡಬೇಕೆಂದು ಅವರು ಬೆಂಜಮಿನ್ನನನ್ನು ಪ್ರಾರ್ಥಿಸಿದರು. ಆಗಲಾತನು ಒಂದು ಉಪಾಯಮಾಡಿ, ಸಭೆಯವರು ಗೌರ್ನರಿನ ಆಜ್ಞೆಯನ್ನು ನಿರೀಕ್ಷಿಸದೆಯೇ ಸ್ವತಂತ್ರವಾಗಿ ಹಣ ಕೊಡುವ ಮಾರ್ಗವನ್ನು ಸೂಚಿಸಿದನು. ಅದರಿಂದ ಸಭೆಯ ಗೌರವ ಉಳಿದುದು ಮಾತ್ರವಲ್ಲದೆ, ಆತನ ಧೈರ್ಯಸ್ಥೈರ್ಯಗಳೂ ಸಮಯಜ್ಞತೆಯೂ ಎಲ್ಲರ ತಿಳಿವಳಿಕೆಗೂ ಬಂದುವು.

ಸ್ಥಳೀಯ ಕಾರ್ಯಕಲಾಪಗಳನ್ನು ಇಷ್ಟುಮಟ್ಟಿಗೆ ಸಿದ್ಧಪಡಿಸಿಕೊಳ್ಳುವುದರೊಳಗಾಗಿ ಇಂಗ್ಲೆಂಡಿನಿಂದ ಬ್ರಾಡಕ್ ಎಂಬಾತನ ಸೈನ್ಯಾಧಿಪತ್ಯದಲ್ಲಿ ಎರಡು ದಳಗಳು ಬಂದಿಳಿದುವು. ಆತನಿಗೆ ಬರುವಾಗಲೇ ರಾಷ್ಟ್ರಸಭೆಯ ವಿಷಯದಲ್ಲಿ ಉತ್ತಮಾಭಿಪ್ರಾಯವಿರದಿದ್ದುದರಿಂದ, ಆತನು ಅವರ ಸಲಹೆಗಳಿಗೊಂದಕ್ಕೂ ಲಕ್ಷ್ಯಕೊಡದೆ ಇದ್ದುಬಿಟ್ಟನು. ಇದರಿಂದ ಮಹದನರ್ಥವುಂಟಾಗಬಹುದೆಂದು ಯೋಚಿಸಿದ ರಾಷ್ಟ್ರಸಭೆಯವರು, ಆತನ ಮನವಲಿಸಿಕೊಳ್ಳುವ ಕಾರ್ಯಕ್ಕಾಗಿ ಬೆಂಜಮಿನ್ನನನ್ನೇ ಪ್ರಾರ್ಥಿಸಿ ಕಳುಹಿಸಿದರು. ಒಡನೆ ಆತನು, ಸೈನ್ಯಾಧಿಪತಿಯಿದ್ದ ಸ್ಥಳಕ್ಕೆ ಹೋಗಿ ಆತನನ್ನು ಕಂಡು ತನ್ನ ಸ್ನೇಹಪರ ಸಂಭಾಷಣೆಯಿಂದ ಆತನ ಮನಸ್ಸಿನಲ್ಲಿದ್ದ ದುರ್ಭಾವನೆಯನ್ನು ಹೋಗಲಾಡಿಸಿದುದಲ್ಲದೆ, ಸೈನ್ಯದ ಸಾಮಗ್ರಿಗಳನ್ನು ಸ್ಥಳದಿಂದ ಸ್ಥಳಕ್ಕೆ ಸಾಗಿಸಲು ಬಂಡಿ ಕುದುರೆಗಳಿಲ್ಲದೆ, ತೊಂದರೆ ಪಡುತ್ತಿದ್ದ ಆತನಿಗೆ, ತನ್ನ ಪ್ರಾಂತದಿಂದ ಬೇಕಾದ ಸಹಾಯಗಳನ್ನು ಒದಗಿಸಿಕೊಟ್ಟನು. ಪರಸ್ಥಳದಿಂದ ಬಂದ ಆತನು ಸ್ಥಳೀಕರ ಸಹಾಯವನ್ನು ಪಡೆದು, ಅವರ ಅಭಿಪ್ರಾಯಾನುಸಾರವಾಗಿ ವರ್ತಿಸಿದ್ದರೆ ಜಯವಾಗಲು ಸಂಶಯವಿರಲಿಲ್ಲ. ಆದರೆ ದುರಹಂಕಾರಿಯಾದ ಆತನು, ಅಮೇರಿಕದವರ

ಸ್ಥಿತಿಗತಿಸ್ವಭಾವಗಳು ತನಗೆ ತಿಳಿಯದಿದ್ದರೂ ಸ್ವಯಂಪ್ರತಿಷ್ಠೆಯಿಂದ ಯುದ್ಧಕಾರ್ಯವನ್ನು ಆರಂಭಿಸಿ ವಿಶೇಷ ಕಷ್ಟನಷ್ಟಗಳನ್ನು ಅನುಭವಿಸ ಬೇಕಾಯಿತು. ಸೈನಕ್ಕೆ ಅಪಜಯವಾದುದರೊಂದಿಗೆ, ಆತನಿಗೂ ಗಾಯ ವಾಯಿತು. ಸ್ಥಳೀಕರನ್ನು ದುರ್ಲಕ್ಷಿಸಿದುದಕ್ಕೆ ತಕ್ಕ ಫಲವಾಯಿತೆಂದು ಆತನಿಗೆ ಮನವರಿಕೆಯಾಯಿತು.

ಯುದ್ಧವು ಇಂಗ್ಲಿಷ್ ಸೈನ್ಯಕ್ಕೆ ಅಪಜಯವಾಗಿ ಕೊನೆಗಂಡಿತಾ ದರೂ, ಮುಂದೂ ಸೈನ್ಯವನ್ನು ಇಟ್ಟುಕೊಂಡು ರಕ್ಷಿಸಬೇಕಾದ ಆವಶ್ಯಕ ತೆಯು ತಪ್ಪಲಿಲ್ಲ. ಯುದ್ಧದ ಖರ್ಚಿಗಾಗಿ ಇಂಗ್ಲೆಂಡಿನ ಸರ್ಕಾರದವರು ಹೊಸ ತೆರಿಗೆಯನ್ನು ಹಾಕಿ, ದ್ರವ್ಯಸಂಗ್ರಹಮಾಡುವಂತೆ ಆಜ್ಞೆಮಾಡಿ ದರು. ಇದು ಪ್ರಜಾವರ್ಗದಲ್ಲಿ ವಿಶೇಷ ಅಸಮ್ಮತಿಯನ್ನುಂಟುಮಾಡಿತು. ಆ ಸಂದರ್ಭದಲ್ಲಿ ಜನಮನವನ್ನು ಸಮಾಧಾನಗೊಳಿಸಿ ಸರ್ಕಾರದ ಕಾರ್ಯವು ಸುಲಲಿತವಾಗಿ ನಡೆಯುವಂತೆ ಮಾಡುವುದಕ್ಕಾಗಿಯೂ ಅವರು ಬೆಂಜಮಿ ನ್ನನನ್ನೇ ಪ್ರಾರ್ಥಿಸಿದರು. ಪ್ರಾರಂಭದಲ್ಲಿ ಹೊಸ ತೆರಿಗೆಯಲ್ಲಿ ಒಂದು ಪೈ ಸಹ ವಸೂಲಾಗದಿದ್ದುದು, ಬೆಂಜಮಿನ್ ಫ್ರಾಂಕ್‌ಲಿನ್ನನು ಉಭಯರಿಗೂ ಮಧ್ಯಸ್ಥಗಾರನಾಗಿ ಕೆಲಸಮಾಡಿದಮೇಲೆ ಅರವತ್ತು ಸಾವಿರ ಪೌಂಡುಗಳು ದೊರಕುವ ಮಾರ್ಗವನ್ನು ಕಲ್ಪಿಸಿತು. ಮುಂದೆ ಸೈನಿಕರನ್ನು ಸಂಗ್ರಹಿ ಸುವ, ಅವರ ನಾಯಕರನ್ನು ನಿಯಮಿಸುವ, ಅವರಿಗೆ ಯುದ್ಧವಿದ್ಯೆಯಲ್ಲಿ ಶಿಕ್ಷಣಕೊಡುವ, ಅವರ ಅನುಕೂಲತೆಗೆ ಆವಶ್ಯಕವಾದ ಸಾಮಾನು ಸರಂ ಜಾಮುಗಳನ್ನು ಸಂಗ್ರಹಿಸುವ ಸಕಲ ಕಾರ್ಯಗಳೂ ಆತನ ಪಾಲಿಗೇ ಬಿದ್ದುವು. ಈವರೆಗೆ ಎಂದೂ ಯುದ್ಧರಂಗದಲ್ಲಿದ್ದು, ಅಥವ ಸೈನ್ಯದ ಆಡ ಳಿತದೊಂದಿಗೆ ಬಳಕೆಗೊಂಡು ಇದ್ದವನಲ್ಲವಾದರೂ, ಉಚಿತಜ್ಞನಾದ ಆತನು ಆ ಕಾರ್ಯದ ಮುಂದಾಳುತನವನ್ನೂ ವಹಿಸಿ ಸರ್ಕಾರಕ್ಕೂ ಪ್ರಜೆ ಗಳಿಗೂ ತೃಪ್ತಿಕರವಾಗುವಂತೆ ಆ ಸಂಬಂಧದ ಸಮಸ್ತ ಕಾರ್ಯಗಳನ್ನೂ ಸಮಗ್ರವಾಗಿ ನೆರವೇರಿಸಿ ಸರ್ವರ ಪ್ರೀತಿವಿಶ್ವಾಸಗಳಿಗೂ, ಕೃತಜ್ಞತೆಗೂ ಪಾತ್ರನಾದನು. ಈತನು ಸೈನ್ಯದ ಆಧಿಪತ್ಯವನ್ನು ವಹಿಸಿದಾಗ, ಆವರೆಗೆ ಸೈನ್ಯದಲ್ಲಿಲ್ಲದಿದ್ದ ಒಂದು ಪದ್ಧತಿಯನ್ನು ಹೊಸದಾಗಿ ಕಲ್ಪಿಸಿದನು. ಅದೇ ನೆಂದರೆ ಸೈನಿಕರೆಲ್ಲರೂ ತಮ್ಮ ತಿಂಡಿ ತೀರ್ಥಗಳನ್ನು ಪಡೆಯುವುದಕ್ಕೆ

ಮೊದಲು ದೇವತಾ ಪ್ರಾರ್ಥನೆಗೆ ಒಂದೆಡೆಯಲ್ಲಿ ನೆರೆಯಬೇಕೆಂಬುದು! ಇದರಿಂದ ಆತನಿಗೆ ದೈವಭಕ್ತಿಯೂ ಯುಕ್ತಿಸಂಪನ್ನತೆಯೂ ಎಷ್ಟುಮಟ್ಟಿಗಿದ್ದುವೆಂಬುದು ವ್ಯಕ್ತವಾಗುತ್ತವೆ.

ಹೀಗೆ ಯುದ್ಧಕಾರ್ಯಕ್ಕಾಗಿ ಕೆಲಕಾಲ ಫಿಲಡೆಲ್‌ಫಿಯದಿಂದ ಹೊರಗೆ ವಾಸಿಸಬೇಕಾಗಿದ್ದ ಆತನು, ಆ ಕಾರ್ಯಗಳನ್ನೆಲ್ಲ ಸಮಂಜಸವಾಗಿ ನೆರವೇರಿಸಿದ ತರುವಾಯ ತನ್ನ ಊರಿಗೆ ಹಿಂದಿರುಗಿದನು. ಸೈನ್ಯಾಧಿಕಾರಿಯ ಉಡುಪಿನಲ್ಲಿ ಬಂದ ಆತನನ್ನು ಸಕಲರೂ ಅನೇಕ ವಿಧಗಳಿಂದ ಗೌರವಿಸಿದರು. ಬೆಂಜಮಿನ್ನನು ತಾನಿದ್ದಾಗ ಏರ್ಪಡಿಸಿದ್ದ ಪ್ರಜೋಪಕಾರಕ ಕಾರ್ಯಗಳೆಲ್ಲವೂ ಯಥಾಸ್ಥಿತವಾಗಿ ನಡೆಯುತಿದ್ದುದನ್ನು ಕಂಡು ಪರಮ ಸಂತುಷ್ಟನಾದನು. ಮೊದಲಿನಿಂದಲೂ ಕೇವಲ ಸಾಹಿತ್ಯ ಸೇವೆಯಲ್ಲೂ ಹಲವು ಪ್ರಜಾಹಿತ ಕಾರ್ಯಗಳಲ್ಲೂ ಪಳಗಿ ಬಂದ ಆತನು ಯುದ್ಧಕಾರ್ಯ ಮುಂತಾದುವನ್ನೂ ವಹಿಸಿ ನಿರ್ವಹಿಸಿದುದು, ಆತನ ಸರ್ವತೋಮುಖವಾದ ಪ್ರಜ್ಞೆ ಉತ್ಸಾಹಗಳನ್ನು ವ್ಯಕ್ತಗೊಳಿಸುತ್ತದೆ.



## ಅಧ್ಯಾಯ ೪ ‘ಸ್ವಾತಂತ್ರ್ಯ ಸಂಪಲ್ಲಾಭ’

ಪ್ರಜಾವರ್ಗದ ಪ್ರತಿನಿಧಿಯಾಗಿದ್ದು ಕೆಲಸಮಾಡುವವನ ಉತ್ತರವಾದಿತ್ವವು ಸ್ವಲ್ಪವಾದುದಲ್ಲ; ಸಾಮಾನ್ಯವಾದುದಲ್ಲ. ಅವನು ಮನಸ್ಸಾಕ್ಷಿಗೆ ವಿರೋಧವಿಲ್ಲದಂತೆ ನಡೆವ ಋಜುತ್ವವುಳ್ಳವನಾಗಿರಬೇಕು. ಅವನಲ್ಲಿ ದುರಭಿಮಾನ, ಸ್ವಯಂಪ್ರತಿಷ್ಠೆಗಳು ಇರಬಾರದು. ಅವನು ಪ್ರತಿನಿಧಿಯಸ್ಥಾನದ ದುರುಪಯೋಗಪಡಿಸಿಕೊಂಡು ಸ್ವಾರ್ಥಸಾಧಕನಾಗುವಂತಹ ಪ್ರಕೃತಿಯವನಾಗಿರಬಾರದು. ಮತ್ತು ದಾಕ್ಷಿಣ್ಯಕ್ಕೆ ಕಟ್ಟುಬಿದ್ದು, ಯುಕ್ತವಾದುದನ್ನು ಅಯುಕ್ತವಾಗಿಯೂ ಅಯುಕ್ತವಾದುದನ್ನು ಯುಕ್ತವಾಗಿಯೂ ತಿಳಿದು ಆಚರಿಸುವಂತಹ ಕೀಳುಮನಸ್ಸಿನವನಾಗಬಾರದು. ಅವನಲ್ಲಿ ಪಕ್ಷಪಾತವೆಂಬ ದುರ್ಗುಣವು ತಲೆದೋರಬಾರದು. ಅವನು ತಾನು ಯಾವ

ಪ್ರಜಾವರ್ಗದ ಪಕ್ಷವನ್ನು ವಹಿಸಿರುವನೋ ಅವರ ಹಿತಕ್ಕಾಗಿ, ಸತ್ಯ ಧರ್ಮ ನ್ಯಾಯಗಳಿಗೆ ಕುಂದುಂಟಾಗಲು ಅವಕಾಶವಾಗದಂತೆ ಧೈರ್ಯ ದಿಂದಲೂ ನಿಸ್ಪೃಹತೆಯಿಂದಲೂ ವಿರೋಧಿಗಳೊಡನೆ ಹೊಡೆದಾಡಲ ಹೆದರದವನಾಗಿರಬೇಕು. ಪ್ರತಿನಿಧಿಯೆಂಬ ಆ ಪದಕ್ಕೆ ಏನರ್ಥವೋ ಆ ಅರ್ಥದ ಸಂಪೂರ್ಣ ಆಚರಣೆಯೂ ಬೆಂಜಮಿನ್ ಫ್ರಾಂಕ್‌ಲಿನನಲ್ಲಿ ಕಂಡು ಬಂದುವು.

ಈಗ ಅಮೇರಿಕಾ ಸಂಯುಕ್ತ ಸಂಸ್ಥಾನವೆಂದು ಜಗದ್ವಿಖ್ಯಾತವಾಗಿ, ಲೋಕದ ಸ್ವತಂತ್ರರಾಷ್ಟ್ರಗಳಿಗೆಲ್ಲ ಶಿರೋಭೂಷಣಪ್ರಾಯವಾಗಿರುವ ಆ ಪ್ರಾಂತವು ನಮ್ಮ ಕಥಾನಾಯಕನ ಕಾಲದಲ್ಲಿ ಇನ್ನೂ ಯಾವ ಬಗೆಯ ರಾಜ್ಯಭಾರಕ್ರಮವೂ ಇಲ್ಲದೆ, ಕೇವಲ ಅವ್ಯವಸ್ಥ ಸ್ಥಿತಿಯಲ್ಲಿದ್ದಿತು. ಅಮೆ ರಿಕದಲ್ಲಿದ್ದ ಈ ಪ್ರಾಂತದ ಒಡೆತನವು ಸಾವಿರಾರು ಮೈಲಿಗಳ ಆಚೆ ಇಂಗ್ಲೆಂ ಡಿನಲ್ಲಿದ್ದ ರಾಜರಿಗೆ ಸೇರಿದ್ದಿತು. ಆದರೂ ಅವರೇನು ಅದರ ಕ್ಷೇಮಚಿಂತನೆ ಯನ್ನುಳ್ಳವರಾಗಿರಲಿಲ್ಲ. ಇಂಗ್ಲೆಂಡಿನ ಸರಕಾರದವರಿಗೆ ಬಹು ದೂರ ಪ್ರಾಂತದಲ್ಲಿದ್ದ ಈ ಬಡರೈತರು ದೃಷ್ಟಿಗೋಚರರಾಗುತ್ತಿರಲಿಲ್ಲ. ಅವರ ಕೃಪೆಗೆ ಪಾತ್ರರಾಗಿದ್ದವರೆಂದರೆ, ಸ್ವಾರ್ಥಸಾಧಕರಾದ ಕೆಲಮಂದಿ ಜಮೀ ನುದಾರರು. ಆ ಜಮೀನುದಾರರಾದರೋ ದುರಹಂಕಾರಿಗಳೂ ಕುತ್ಸಿತರೂ ದಯಾದಾಕ್ಷಿಣ್ಯರಹಿತರೂ ಆದ-ದುಡ್ಡುಗಳಿಸಿದ ದೊಡ್ಡಮನುಷ್ಯರು. ತಮ್ಮ ಸ್ವಾರ್ಥವು ಕೈಗೂಡುವಂತಿದ್ದರೆ ನ್ಯಾಯಾನ್ಯಾಯಗಳನ್ನು ಲೆಕ್ಕಿಸದೆ ಏನೆಂ ದರೆ ಆ ಕಾರ್ಯವನ್ನು ಮಾಡಲು ಹಿಂದೆಮುಂದೆ ನೋಡದಂತಹ ನೀಚಾ ತ್ಮರವರು. ಈ ಪ್ರಾಂತಗಳಿಗೆ ಮೇಲ್ವಿಚಾರಕರಾಗಿ ಇಂಗ್ಲೆಂಡಿನಿಂದ ಬರು ತ್ತಿದ್ದ ಗವರ್ನರುಗಳೆಂಬ ಅಧಿಕಾರಿಗಳು ಈ ಜಮೀನುದಾರರ ಸ್ನೇಹವನ್ನು ಸಂಪಾದಿಸಿಕೊಂಡು, ಅವರ ದಾಕ್ಷಿಣ್ಯಕ್ಕೆ ಒಳಪಟ್ಟು ನಡೆಯದಿದ್ದರೆ ಅನೇಕ ವೇಳೆಗಳಲ್ಲಿ ಜೀವಿಸುವುದೇ ಕಷ್ಟವಾಗುತ್ತಿದ್ದಿತು. ಅಂತಹ ಸಂದರ್ಭದಲ್ಲಿ ಪ್ರಜಾ ಸಾಮಾನ್ಯದ ಹಿತಚಿಂತನೆಯನ್ನು ಹಚ್ಚಿಕೊಂಡು ಬಡಿದಾಡುವ ಒಂದು ಸಂಸ್ಥೆಯು ಇರಬೇಕಾದುದು ಅತ್ಯವಶ್ಯಕವಾಗಿದ್ದಿತು. ಇದೇ ರಾಷ್ಟ್ರವ ಹಾಸಭೆ. ಈ ಸಭೆಗೇ ಬೆಂಜಮಿನ್ ಫ್ರಾಂಕ್ಲಿನ್ನನು ಪ್ರಜಾಪಕ್ಷದ ಪ್ರತಿನಿಧಿಯಾಗಿದ್ದನು.

ಬೆಂಜಮಿನ್ನನು ತನ್ನ ಸ್ಥಾನದ ಉತ್ತರವಾದಿತ್ವವನ್ನು ತಿಳಿದು, ನಿಸ್ಪೃಹಿಯಾದುದರಿಂದ ಪ್ರಜಾವರ್ಗಕ್ಕೆ ಕ್ಷೇಮವೆಂದು ತೋರುವ ಯಾವ ಪ್ರಶ್ನೆಯು ಮುಂದೆ ಬಂದರೂ ಅದನ್ನು ಕೂಲಂಕುಷವಾಗಿ ವಿಚಾರಿಸಿ, ಅದರ ಸಾಧನೆಯ ವಿಷಯದಲ್ಲಿ ಯಾರ ದಯಾದಾಕ್ಷಿಣ್ಯಕ್ಕೂ ಸೆರಗೊಡ್ಡದೆ ಧೈರ್ಯದಿಂದ ವಾದಿಸುತ್ತಿದ್ದನು. ಯುದ್ಧಕಾಲದಲ್ಲಿ ತರಿಸಿದ ಫಿರಂಗಿಗಳ ಬೆಲೆ, ಯುದ್ಧದ ಖರ್ಚು ಮುಂತಾದುವುಗಳಿಗಾಗಿ, ತಾವು ದ್ರವ್ಯ ಸಹಾಯ ಮಾಡುವುದಿಲ್ಲವೆಂದು ಜಮೀನುದಾರರು ಮುಷ್ಕರ ಹಿಡಿದರು. ಎಲ್ಲರಂತೆಯೇ ಅವರೂ ಕೊಟ್ಟೇ ತೀರಬೇಕೆಂದು ವಾದಿಸಿ, ಅವರಿಂದಲೂ ಐದು ಸಾವಿರ ಪೌಂಡುಗಳನ್ನು ತೆರಿಸಿದನು. ಕಾರ್ಯಕಾರಣ ಸಮನ್ವಿತವಾಗಿ ಅವನು ವಾದಿಸುತ್ತಿದ್ದ ರೀತಿಯನ್ನು ವಿರೋಧಿಸಲು ಯಾರಿಗೂ ಸಾಮರ್ಥ್ಯವಿರಲಿಲ್ಲವಾದುದರಿಂದ ಅವರು ಸಭೆಯ ತೀರ್ಮಾನದಂತೆ ಹಣವನ್ನು ತೆತ್ತರಾದರೂ ಒಳಗೊಳಗೇ ಅವನನ್ನು ದ್ವೇಷಿಸಲಾರಂಭಿಸಿದರು. ಅನ್ಯಾಯಕಾರಿಗಳಾದ ಈ ಐಶ್ವರ್ಯವಂತರು ಅವನನ್ನು ದ್ವೇಷಿಸುತ್ತಿದ್ದರಾದರೆ, ನಿಸ್ಸಹಾಯಕರಾದ ಬಡ ಜನರು ಸಹಸ್ರಾರು ಸಂಖ್ಯೆಯಿಂದ ಅವನನ್ನು ತಮ್ಮ ಭಾಗದ ದೇವರೋ ಎಂಬಂತೆ ಪ್ರೀತಿಸುತ್ತಿದ್ದರು. ಅವನನ್ನು ಕಂಡಕಂಡಲ್ಲಿ ಗೌರವಿಸುತ್ತಿದ್ದರು. ಆತನನ್ನು ಕಂಡಕೂಡಲೇ ಧ್ವಜಪಟಗಳನ್ನೆತ್ತಿ, ತಮ್ಮ ಉಲ್ಲಾಸವನ್ನು ಪ್ರಕಟಿಸುತ್ತಿದ್ದರು. ಒಂದು ಬಾರಿ ಅವನು ಅಶ್ವಾರೂಢನಾಗಿ ಪ್ರಯಾಣಮಾಡುತ್ತಿರಲಾಗಿ ಸೈನಿಕರು ಆತನ ಎರಡು ಕಡೆಗಳಲ್ಲೂ ತಮ್ಮ ಥಳಥಳಿಸುವ ಕತ್ತಿಗಳನ್ನು ಎತ್ತಿ ಹಿಡಿದು ತಮಗೆ ಆತನ ವಿಷಯದಲ್ಲಿದ್ದ ಗೌರವವನ್ನು ಪ್ರಕಟಿಸಿದರು. ಇದನ್ನು ಕಂಡು ಜಮೀನುದಾರರು ಬಹು ಅಸೂಯೆಪಟ್ಟು, ಗವರ್ನರನ ಬಳಿಯಲ್ಲೂ, ಇಂಗ್ಲೆಂಡಿನ ಅಧಿಕಾರಿಗಳ ಬಳಿಯಲ್ಲೂ ಅವನನ್ನು ದೂರಿಕೊಂಡರು.

ಆದರೆ ಬೆಂಜಮಿನ್ನನು ಅವರನ್ನು ದ್ವೇಷಿಸುತ್ತಿರಲಿಲ್ಲ. ಗವರ್ನರೇ ಮುಂತಾದ ಅಧಿಕಾರಿಗಳ ಸಂಗಡ ಅನಾವಶ್ಯಕವಾಗಿ ವಿರೋಧಕಟ್ಟಿಕೊಳ್ಳುತ್ತಿರಲಿಲ್ಲ. ಅಧಿಕಾರಿಗಳಿಗೆ ಅವನು ನ್ಯಾಯಪಕ್ಷಪಾತಿಯೆಂದೂ ಪ್ರಜಾಹಿತೈಷಿಯೆಂದೂ ಚೆನ್ನಾಗಿ ತಿಳಿದಿದ್ದಿತು. ರಾಜ್ಯಪಾಲನೆಯ ವಿಷಯದಲ್ಲಿ ಏನು ತೊಡಕುಗಳು ಬಂದರೂ ಆತನನ್ನು ಸಲಹೆ ಕೇಳದೆ ಇರುತ್ತಿರಲಿಲ್ಲ.

ಬೆಂಜಮಿನ್ನನು ಸರ್ವದಾ ಸ್ವಾರ್ಥತೆಗೆ ದೂರನಾಗಿ, ಅನ್ಯಾಯವಾಗಿ ಸಂಪಾದನೆಯಾಗುವಂತಿದ್ದರೆ ಸುವರ್ಣರಾಶಿಯನ್ನಾದರೂ ಕಡೆಗಣ್ಣಿನಿಂದಲೂ ನೋಡದಂತಹ ನಿಸ್ಪೃಹಿಯಾಗಿದ್ದುದರಿಂದ ಅವರಿಗೆ ಅವನನ್ನು ಕಂಡರೆ ತಕ್ಕಷ್ಟು ಭಯಭೀತಿಗಳೂ ಇದ್ದುವು. ಬೆಂಜಮಿನ್ನನ ಮತ್ತು ಅವನ ಅನುಯಾಯಿಗಳಾದ ಕೆಲಮಂದಿ ಶ್ರದ್ಧಾವಂತರ ನಿಸ್ವಾರ್ಥಕಾರ್ಯತತ್ಪರತೆಯಿಂದ ಸಭೆಯ ಕಾರ್ಯಗಳು ಸುಸೂತ್ರವಾಗಿ ನಡೆಯತೊಡಗಿದುವು. ಜಮೀನುದಾರರ ಕಾಟವು ದಿನದಿನಕ್ಕೆ ಪ್ರಬಲಿಸಿ, ಅವರ ಹಿಂಸೆಯನ್ನು ಸಹಿಸುವುದು ಪ್ರಜಾಸಾಮಾನ್ಯಕ್ಕೆ ಅಸಾಧ್ಯವಾಗತೊಡಗಿತು. ರಾಜ್ಯಾಧಿಕಾರಿಗಳಾದ ಗವರ್ನರುಗಳು ಅವರನ್ನು ಹದ್ದಿನಲ್ಲಿಟ್ಟು ಪ್ರಜೆಗಳ ಹಿತವನ್ನು ಗಮನಿಸಲು ಅಸಮರ್ಥರಾದರು. ಆದುದರಿಂದ ಸಭೆಯವರು ತಮ್ಮ ಪ್ರತಿನಿಧಿಯನ್ನು ಇಂಗ್ಲೆಂಡಿಗೇ ಕಳುಹಿಸಿ, ಅಲ್ಲಿಯ ಪ್ರಧಾನ ಸರ್ಕಾರದ ಸುಮ್ಮುಖದಲ್ಲೇ ತಮ್ಮ ಕಷ್ಟನಷ್ಟಗಳನ್ನು ನಿವೇದಿಸಬೇಕೆಂದು ತೀರ್ಮಾನಿಸಿಕೊಂಡರು. ಬೆಂಜಮಿನ್ನನೇ ಪ್ರಜಾಪ್ರತಿನಿಧಿಯಾಗಿ ಹೋಗಬೇಕೆಂದು ಸಭೆಯವರಿಂದ ಆರಿಸಲ್ಪಟ್ಟನು. ಆದರೆ ಅವನು ಹೊರಡಬೇಕೆಂದು ಏರ್ಪಟ್ಟಿದ್ದ ಹಡಗಿನಲ್ಲಿ ಅವನಿಗೆ ಸರಿಯಾಗಿ ಸ್ಥಳಸಿಕ್ಕದಂತೆಯೂ, ಸಿಕ್ಕಿದರೂ ಆ ಹಡಗು ಸಕಾಲದಲ್ಲಿ ಪ್ರಯಾಣಮಾಡದಂತೆಯೂ ಅನಾವಶ್ಯಕವಾದ ಹಲವು ಕಿರುಕುಳಗಳನ್ನು ತಂದೊಡ್ಡಿ ಅವನ ಪ್ರಯಾಣಕ್ಕೆ ಆಲಸ್ಯವನ್ನುಂಟುಮಾಡುತ್ತಿದ್ದರು. ಇಷ್ಟು ವಿಘ್ನ ಪರಂಪರೆಗಳನ್ನು ಎದುರಿಸಿ ಹೊರಟ ಹಡಗೂ ಭದ್ರವಾದುದಾಗಿರಲಿಲ್ಲ. ಆ ಹಡಗಿನ ಅವ್ಯವಸ್ಥೆಯನ್ನು ಕಂಡ ಆತನ ಮನಸ್ಸಿನಲ್ಲಿ,- ಹಡಗು ಕಟ್ಟುವ ಕಲೆಯನ್ನು ಅಭಿವೃದ್ಧಿಪಡಿಸಬೇಕು. ಶಾಸ್ತ್ರೀಯವಾಗಿ ಪರೀಕ್ಷೆ ನಡಿಸಿ, ಸಮುದ್ರವಾಸಿಗಳಿಗೆ ಅತಿ ಮುಖ್ಯ ವೃತ್ತಿಯಾಗಿರುವ ಇದನ್ನು ಸುಸ್ಥಿತಿಗೆ ತರುವುದಾದರೆ ಅದರಿಂದ ಪ್ರಜೋಪಕಾರವಾಗದಿರದು, ಎಂದು ತೋರಿತು. ಇದೇ ಪ್ರಯಾಣದಲ್ಲೇ, ಹಡಗು ಇಂಗ್ಲೀಷ್ ಕಾಲುವೆಯನ್ನು ಪ್ರವೇಶಿಸಿದಾಗ, ಅದಕ್ಕೊಂದು ಅಪಾಯವುಂಟಾಗಿ ನಡಿಸುವವರ ಅಜಾಗರೂಕತೆಯಿಂದ ಹಡಗು ಒಡೆದು ನಾಶವಾಗಬೇಕಾಗಿದ್ದಿತು. ಅಷ್ಟರಲ್ಲಿ ಬೆಳಕಿನ ಗೂಡು ದೃಷ್ಟಿಗೋಚರವಾಗಿ ಅವರು ಜಾಗ್ರತರಾಗಲು ಅವಕಾಶವಾಯಿತು. ಆ ಮಹದಪಾಯವು ತಪ್ಪಿ ಆತನು

ಸುರಕ್ಷಿತವಾಗಿ ೧೭೫೭ ನೆಯ ಜೂಲೈ ೨೭ ನೆಯ ದಿನ ಇಂಗ್ಲೆಂಡಿನ ರೇವಿನಲ್ಲಿಳಿದನು.

ಬೆಂಜಮಿನ್ ಫ್ರಾಂಕ್‌ಲಿನ್ನನು ಇಂಗ್ಲೆಂಡಿನಲ್ಲೇ ಮುಂದೆ ಐದುವರ್ಷ ಕಾಲ ವಾಸಿಸಿ, ಆ ಕಾಲವನ್ನೆಲ್ಲ ತಮ್ಮ ದೇಶೀಯರ ಹಿತಚಿಂತನೆಯ ಕಾರ್ಯಗಳಲ್ಲೇ ಕಳೆದನು. ಅಲ್ಲಿಯ ಸರ್ಕಾರಿಯ ಅಧಿಕಾರಿಗಳ ಸ್ನೇಹ ಪ್ರೀತಿಗಳನ್ನು ಸಂಪಾದಿಸಿ, ತಮ್ಮಲ್ಲಿಯ ಜಮೀನುದಾರರ ಅನ್ಯಾಯ ಕಾರ್ಯಗಳನ್ನೂ ಪ್ರಜಾವರ್ಗಕ್ಕೆ ಅವರಿಂದ ಉಂಟಾಗುತ್ತಿದ್ದ ಕಿರುಕುಳಗಳನ್ನೂ ಅವರಿಗೆ ತಿಳಿವಂತೆ ವಿಶದಗೊಳಿಸಿ ನ್ಯಾಯವನ್ನು ಬೇಡಿದನು. ಇಂಗ್ಲೆಂಡು ಸರ್ಕಾರದವರು, ಅಮೆರಿಕದ ಸ್ಥಳ ವಿದ್ಯಮಾನಗಳನ್ನೂ ಅಲ್ಲಿಯ ಸ್ಥಿತಿಗತಿಗಳನ್ನೂ ತಿಳಿಯದೆ, ಅಲ್ಲಿಯವರ ಪಾಲನೆಗೆಂದು ಇಲ್ಲಿದ್ದು ನ್ಯಾಯ ನಿಬಂಧನೆಯ ಕಾನೂನುಗಳನ್ನು ನಿಯಮಿಸುವುದು ಸಮಂಜಸವಲ್ಲವೆಂದು ವಾದಿಸಿದನು. ಜಮೀನುದಾರರ ಹಿಡುವಳಿಯಲ್ಲಿದ್ದ ಭೂಮಿಗೆ ಕಂದಾಯವನ್ನು ವಿಧಿಸುವ ಅಧಿಕಾರವು ರಾಷ್ಟ್ರಸಭೆಯವರಿಗೇ ಇರತಕ್ಕದೆಂದೂ, ಜಮೀನುದಾರರೆಲ್ಲರೂ ತಮ್ಮ ಸ್ಥಾನಮಾನಪ್ರತಿಷ್ಠೆಗಳ ಗಣನೆಯಿಲ್ಲದಂತೆ, ಎಲ್ಲರೂ ತಮ್ಮ ಸ್ವಾಧೀನದಲ್ಲಿರುವ ಜಮೀನಿಗೆ ಸಭೆಯವರು ನಿರ್ಣಯಿಸುವ ಕಂದಾಯವನ್ನು ಕೊಟ್ಟೇತೀರಬೇಕೆಂದೂ ಅನುಮತಿ ಪಡೆದು ೧೭೬೨ ರಲ್ಲಿ ಸ್ವದೇಶಕ್ಕೆ ಹಿಂದಿರುಗಿದನು.

ಮುಂದೆ ರಾಜಕೀಯ ವ್ಯವಹಾರದಿಂದ ವಿಶ್ರಾಂತಿಹೊಂದಿ, ತನ್ನ ಕಾಲವನ್ನು ವಿಜ್ಞಾನಶಾಸ್ತ್ರ ವಿಚಾರಗಳಿಗೆ ವಿನಿಯೋಗಿಸಬೇಕೆಂದು ನಿಶ್ಚಯಿಸಿದ್ದನಾದರೂ ದೇಶಸ್ಥಿತಿಯು, ಆತನು ಎಣಿಸಿದ್ದಂತೆ ಆತನಿಗೆ ವಿರಾಮ ಕೊಡುವುದಾಗಲಿಲ್ಲ. ಪ್ರಜಾನೆಮ್ಮದಿಗೆ ಭಂಗವುಂಟಾದ ಮತ್ತೊಂದು ಸಂದರ್ಭದಲ್ಲಿ ತಾಮ್ರವರ್ಣದವರೊಂದಿಗೆ ಕರಾರು ಮಾಡಿಕೊಳ್ಳಬೇಕಾಗಲು, ಗವರ್ನರು ಪುನಃ ಆತನ ಸಹಾಯವನ್ನು ಪ್ರಾರ್ಥಿಸಿದನು. ಇಂಗ್ಲೆಂಡಿಗೆ ರಾಯಭಾರ ನಡೆಸಲು ಹೋಗಿ, ಅಲ್ಲಿ ಐದುವರ್ಷ ವಾಸಿಸಿ ಇತ್ಯರ್ಥ ಮಾಡಿಕೊಂಡು ಬಂದ ಜಮೀನುದಾರರ ಕಂದಾಯದ ಪ್ರಶ್ನೆಯು ಪುನಃ ತಲೆಯೆತ್ತಿತು. ಸರ್ಕಾರವು ಜಮೀನುದಾರರ ಪಕ್ಷವನ್ನು ಹಿಡಿದಿರಲು, ರಾಷ್ಟ್ರಸಭೆಯು ಪ್ರಜಾಪಕ್ಷವನ್ನು ಹಿಡಿದು ವ್ಯವಹಾರ ನಡೆಯಿಸತೊಡಗಿತು.

ಬೆಂಜಮಿನ್ನನು ಸಭೆಯು ಪರವಾಗಿ ಬೆಂಬಲವಾಗಿದ್ದನೆಂದು ಹೇಳಬೇಕಾದು ದಿಲ್ಲವಷ್ಟೆ! ಇದು ಜಮೀನುದಾರರಿಗೆ ಅವನ ವಿಷಯದಲ್ಲಿ ಕೋಪಹುಟ್ಟಿಸಲು ಕಾರಣವಾಯಿತು. ಅವರು ಹಲವು ಕುಹಕ ತಂತ್ರಗಳಿಂದ ಆತನಿಗೆ ಆ ವರ್ಷದ ಚುನಾವಣೆಯಲ್ಲಿ ಪ್ರಾತಿನಿಧ್ಯಸ್ಥಾನವು ದೊರೆಯದಂತೆ ಮಾಡಿಬಿಟ್ಟರು. ಆದರೂ, ಹೊಸದಾಗಿ ಆರಿಸಲ್ಪಟ್ಟ ಸಭಾಸದರು ಆತನ ಸಹಾಯವಿಲ್ಲದೆ ಕೆಲಸಮಾಡಲು ಸಾಧ್ಯವಾಗಲೇ ಇಲ್ಲ. ಅವರ ಪ್ರಾರ್ಥನಾನುಸಾರ ಆತನು ಮತ್ತೊಮ್ಮೆ ೧೭೬೪ ನೆಯ ಸಂವತ್ಸರದಲ್ಲಿ ಇಂಗ್ಲೆಂಡಿಗೆ ಪ್ರಯಾಣಮಾಡಿದನು.

ಈ ಬಾರಿ ಆತನು ನೂತನವಾಗಿ ಪ್ರಾಪ್ತವಾದ ಇತರ ಕೆಲವು ತೊಂದರೆಗಳನ್ನು ಎದುರಿಸಿ ಕೆಲಸಮಾಡಬೇಕಾಯಿತು. ಇಂಗ್ಲೆಂಡಿನ ಸರಕಾರವು ಏಳುವರ್ಷ ಕಾಲ ತಮಗೆ ಫ್ರೆಂಚರೊಡನೆ ನಡೆದ ಕದನದಲ್ಲಿ ಆದ ವೆಚ್ಚವನ್ನು ಅಮೆರಿಕಾದೇಶ ನಿವಾಸಿಗಳಿಂದ ಸಂಪಾದಿಸಬೇಕೆಂದು ಯೋಚಿಸಿ, ೧೭೬೫ರಲ್ಲಿ ಸ್ಟಾಂಪ್ ಆಕ್ಟ್ ಎಂಬ ಕಾಯಿದೆಯನ್ನು ಮಂಜೂರುಮಾಡಿದರು. ಅದನ್ನನುಸರಿಸಿ, ಅಮೆರಿಕದಲ್ಲಿ ನಡೆವ ವ್ಯಾವಹಾರಿಕ ಕಾಗದಪತ್ರಗಳೆಲ್ಲ ಇಂಗ್ಲೆಂಡಿನಲ್ಲಿ ಮುದ್ರಿತವಾದ ಛಾಪಾಕಾಗದಗಳಮೇಲೆಯೇ ಆಗಿ ಅದರಿಂದ ಉತ್ಪತ್ತಿಯಾದ ದ್ರವ್ಯವೆಲ್ಲ ಇಂಗ್ಲೆಂಡಿನ ಸರ್ಕಾರಕ್ಕೇ ಸೇರತಕ್ಕದ್ದಾಯಿತು. ಅಮೆರಿಕೆಯು ಹೊರದೇಶದೊಡನೆ ನಡೆಸುತ್ತಿದ್ದ ವ್ಯಾಪಾರವೆಲ್ಲವೂ ಇಂಗ್ಲೀಷರ ಸ್ವಾಧೀನವಾಗಿತ್ತು. ಅಮೆರಿಕದವರ ವ್ಯಾಪಾರ ಕೈಗಾರಿಕೆಗಳು ಹೆಚ್ಚಿದರೆ ತಮ್ಮ ಲಾಭಕ್ಕೆ ಲೋಪವುಂಟಾಗುವುದೆಂಬ ಸ್ವಾರ್ಥತೆಯಿಂದ, ಅನಾವಶ್ಯಕವಾಗಿ ತೆರಿಗೆಗಳನ್ನು ಹೆಚ್ಚಿಸಿ, ಅಮೆರಿಕದ ವ್ಯಾಪಾರವೂ ಕೈಗಾರಿಕೆಯೂ ತಲೆಯೆತ್ತದಂತೆ ಮಾಡಿಬಿಟ್ಟರು. ಸ್ಟಾಂಪ್ ಆಕ್ಟನ್ನು ರಚಿಸಿದುದರಲ್ಲೂ, ತೆರಿಗೆಗಳನ್ನು ಹೆಚ್ಚಿಸಿದುದರಲ್ಲೂ ಆ ದೇಶೀಯರ ಅನುಮತಿಯನ್ನು ಪಡೆಯಬೇಕಾದುದು ಆವಶ್ಯಕವಾಗಿದ್ದರೂ ಹಾಗೆ ಮಾಡಲಿಲ್ಲ. ಇದು ಅಮೆರಿಕಾದೇಶೀಯರಿಗೆ ವಿಶೇಷ ಅಸಮಾಧಾನವನ್ನುಂಟುಮಾಡಿತು. ಬೆಂಜಮಿನ್ ಫ್ರ್ಯಾಂಕ್‌ಲಿನ್ನನು ಇಂಗ್ಲೆಂಡಿನ ನಿಯಮನಿರ್ಮಾಪಕ ಸಭೆಯಲ್ಲಿ ಕುಳಿತು, ಈ ಅನ್ಯಾಯ ಕೃತ್ಯಗಳಿಂದ ಅಮೆರಿಕದ ಪ್ರಜೆಗಳ ಮನಸ್ಸು ಎಷ್ಟುಮಟ್ಟಿಗೆ ಪ್ರಕ್ಷುಬ್ಧವಾಗಿದೆ ಯೆಂಬುದನ್ನು

ವಿವರಿಸಿ ಧೈರ್ಯದಿಂದ ಪ್ರಸಂಗಮಾಡಿದನು. ಆತನ ಯುಕ್ತಿಯುಕ್ತವೂ, ನಿಶೇಷ ವ್ಯವಹಾರಜ್ಞಾನಪ್ರದರ್ಶಕವೂ ಆದ ಉಪನ್ಯಾಸವು ಎಲ್ಲರನ್ನೂ ತಲೆದೂಗಿಸಿತು. ಆತನ ಖಂಡಿತೋಕ್ತಿಯು ಪ್ರಾರಂಭಕ್ಕೆ ಎಲ್ಲರಿಗೂ ರುಚಿಕರವಾಗಿರಲಿಲ್ಲವಾದರೂ, ಕೊನೆಯಲ್ಲಿ ಆತನ ಈ ಪರಿಶ್ರಮದ ಫಲವಾಗಿಯೇ ಆ ಸ್ಟ್ಯಾಂಪ್ ಕಾಯಿದೆಯು ವಜಾ ಮಾಡಲ್ಪಟ್ಟಿತು. ಇದರೊಂದಿಗೇ ಬೆಂಜಮಿನ್ನನು ಮತ್ತೊಂದು ಅತಿ ಮುಖ್ಯ ವಿಚಾರವನ್ನೂ ಹಿಡಿದು ವಾದಿಸಿದ್ದನು. ಇಂಗ್ಲೆಂಡಿಗೆ ಅಮೆರಿಕದವರಿಗೋಸ್ಕರ ಕಾಯಿದೆಗಳನ್ನು ನಿರ್ಮಿಸುವ ಅಧಿಕಾರವುಂಟೇ ಎಂಬುದೇ ಈ ಪ್ರಶ್ನೆ. ಇಂಗ್ಲೆಂಡಿನ ಮಂತ್ರಿಮಂಡಲದವರು ಅಂತಹ ಅಧಿಕಾರವಿದೆಯೆಂದೂ, ಅಮೆರಿಕದ ರಾಷ್ಟ್ರಸಭೆಯವರು ಇಲ್ಲವೆಂದೂ ವಾದಿಸುತ್ತಿದ್ದರು. ಇಂಗ್ಲೆಂಡಿನವರು ತಮಗಿರುವ ಆ ಅಧಿಕಾರವನ್ನು ಸ್ಥಿರಪಡಿಸಿಕೊಳ್ಳಲಿಕ್ಕಾಗಿಯೋ ಎಂಬಂತೆ ಟೀ ಸೊಪ್ಪಿನಮೇಲೆ ತೆರಿಗೆಯನ್ನು ಹೇರಿದರು. ಅಮೆರಿಕದವರು ಅದನ್ನು ಬದ್ಧದ್ವೇಷದಿಂದ ವಿರೋಧಿಸಿ, ಬೋಸ್ಟನ್ ನಗರದ ರೇವಿನಲ್ಲಿ ಬಂದು ನಿಂತಿದ್ದ ಹಡಗಿನಲ್ಲಿದ್ದ ಟೀ ಸೊಪ್ಪನ್ನೆಲ್ಲ ಸಮುದ್ರಕ್ಕೆ ಎಸೆದುಬಿಟ್ಟರು. ಇದರಿಂದಲಂತೂ ಇಂಗ್ಲೆಂಡು ಅಮೆರಿಕಾ ದೇಶಗಳಿಗೆ ದ್ವೇಷವು ಮತ್ತಷ್ಟು ದೃಢವಾಯಿತು. ಈ ಮಧ್ಯೆ ಅನೇಕಸಾರಿ ಸಂಧಾನಗಳು ನಡೆದು ಬೆಂಜಮಿನ್ನನು ಸಾಮೋಕ್ತಿಗಳಿಂದ ಹೇಳಿದ ಹಿತವಚನಗಳೂ ಇಂಗ್ಲೆಂಡು ಸರ್ಕಾರದ ಲಕ್ಷ್ಯಕ್ಕೆ ಬರಲಿಲ್ಲ. ಕೊನೆಗೆ ೧೭೭೫ನೆಯ ಮಾರ್ಚಿ ೨೧ ರಲ್ಲಿ ಈ ವೈಮನಸ್ಯವನ್ನು ಪರಿಹರಿಸಿಕೊಳ್ಳಲು, ಯುದ್ಧವಲ್ಲದೆ ಬೇರೊಂದು ಉಪಾಯವೇ ಇಲ್ಲವೆಂದು ನಿರ್ಧರವಾಯಿತು.

ಅಮೆರಿಕದ ಎಲ್ಲಾ ರಾಷ್ಟ್ರಗಳೂ ಸ್ವಾತಂತ್ರ್ಯಸಾಧಕವಾದ ಈ ಯುದ್ಧದಲ್ಲಿ ಭಾಗವಹಿಸಲು ಸಿದ್ಧವಾದುವು. ಅಮೆರಿಕಾದ ರಾಷ್ಟ್ರಗಳಲ್ಲಿ ಯಾವುದು ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಸಹಾಯಮಾಡುವುದೋ ಆ ರಾಷ್ಟ್ರದವರು ಈ ಹೊಸ ತೆರಿಗೆಯನ್ನು ಕೊಡಬೇಕಾಗಿಲ್ಲವೆಂದು ಭೇದೋಪಾಯವನ್ನು ಆಚರಿಸಲು ಇಂಗ್ಲೆಂಡಿನ ರಾಜತಂತ್ರಜ್ಞರು ಯೋಚಿಸಿದರು. ಆದರೆ ಅದರಿಂದಲೂ ಏನೂ ಪ್ರಯೋಜನವಾಗಲಿಲ್ಲ. ಸಂಪೂರ್ಣಸ್ವಾತಂತ್ರ್ಯವೇ ತಮ್ಮ ಧ್ಯೇಯವೆಂದು ಸಕಲ ರಾಷ್ಟ್ರಗಳೂ ಒಮ್ಮನಸ್ಕತೆಯಿಂದ ನಿರ್ಧ

ರಿಸಿ, ಯುದ್ಧವನ್ನು ಪ್ರಾರಂಭಿಸಿಯೇಬಿಟ್ಟರು. ಈತನು ಯುದ್ಧಕಾರ್ಯಕ್ಕೆ ಸಂಬಂಧಿಸಿದ ಸಭೆ ಸಮಿತಿಗಳಲ್ಲಿದ್ದು ಮಂತ್ರಾಲೋಚನೆಯನ್ನಿತ್ತು ಶ್ರಮಿಸುತ್ತಿರಲು, ಅತ್ತ ಜಾರ್ಜ್ ವಾಷಿಂಗ್‌ಟನ್ ಎಂಬ ವೀರನು ಯುದ್ಧರಂಗವನ್ನು ಪ್ರವೇಶಿಸಿ, ಸೈನಿಕರಿಗೆ ನವಸ್ಫೂರ್ತಿಯನ್ನು ತಂದಿತ್ತು ಹೋದೆಡೆಯಲ್ಲೆಲ್ಲ ಜಯಸಂಪಾದನೆ ಮಾಡುತ್ತಿದ್ದನು. ಶತ್ರು ಸೈನ್ಯಗಳಿಗೆ ಎಲ್ಲೆಲ್ಲೂ ಅಪಜಯವಾಗಿ, ಹಿಮ್ಮೆಟ್ಟುತ್ತಿದ್ದುವು. ಕೊನೆಗೆ ಸ್ವಾತಂತ್ರ್ಯಸ್ಥಾಪನೆಯ ಪ್ರಸಿದ್ಧ ಪತ್ರಿಕೆಯನ್ನು ಸಿದ್ಧಪಡಿಸುವ ಬಹು ಮುಖ್ಯವಾದ ಕಾರ್ಯವೂ ಬೆಂಜಮಿನ್ನನ ಪಾಲಿಗೇ ಬಂದಿತು. ರಾಜ್ಯವ್ಯವಸ್ಥಾಸಮಿತಿಯು ಪೆನ್ಸಿಲ್ವೇನಿಯಾ ರಾಷ್ಟ್ರದಲ್ಲಿ ತನ್ನ ಕಾರ್ಯವನ್ನು ಪ್ರಾರಂಭಿಸಿತು. ಆ ಸಮಿತಿಗೆ, ಸ್ವಾತಂತ್ರ್ಯಸಾಧನೆಗಾಗಿ ಅನಿವಾರ್ಯ ಕಷ್ಟ ಸಂಕಟಗಳನ್ನನುಭವಿಸಿದ ಬೆಂಜಮಿನ್ನನೇ ಅಧ್ಯಕ್ಷನಾಗಿ ಆರಿಸಲ್ಪಟ್ಟನು.

೧೭೭೬ ನೆಯ ಜೂಲೈ ೪ ನೆಯ ದಿನವು ಅಮೆರಿಕಾದೇಶೀಯರಿಗೆ ಸ್ವಾತಂತ್ರ್ಯ ಸೂರ್ಯೋದಯದ ಪ್ರಥಮ ಕಿರಣಗಳನ್ನು ಪ್ರಸಾದಿಸಿದ ಸುದಿನ. ಆ ದಿನವೇ, ಅಮೆರಿಕಾದೇಶವು ಇನ್ನು ಮುಂದೆ ಇಂಗ್ಲೆಂಡಿಗೆ ಅಧೀನವಾದುದಲ್ಲ ಎಂಬ ನಿರ್ಣಯವನ್ನು, ಅಮೆರಿಕದ ಎಲ್ಲಾ ರಾಷ್ಟ್ರಗಳ ಪರವಾಗಿ ಫಿಲಡೆಲ್‌ಫಿಯದ ಮಹಾ ಸಮ್ಮೇಳನವು ಉದ್ಘೋಷಿಸಿ, ಪ್ರಸಿದ್ಧ ಪತ್ರಿಕೆಯನ್ನು ಹೊರಡಿಸಿತು. ಅಮೆರಿಕದ ಸಂಯುಕ್ತಸಂಸ್ಥಾನವು ಆ ದಿನವೇ ಉದಯಹೊಂದಿತು. ಸಂಪೂರ್ಣ ಸ್ವಾತಂತ್ರ್ಯವು ಪ್ರಾಪ್ತವಾದುದರಿಂದಲೇ ಆ ದೇಶವು, ವಿದ್ಯೆ, ವ್ಯಾಪಾರ, ಕೈಗಾರಿಕೆ, ಕಲಾಕೌಶಲ್ಯ ಮುಂತಾದ ಸಮಸ್ತ ವಿಷಯಗಳಲ್ಲೂ, ಲೋಕದಲ್ಲಿ ಅದ್ವಿತೀಯವೆನ್ನಿಸಿ, ದಿನದಿನಕ್ಕೆ ಅಭಿವೃದ್ಧಿಸ್ಥಿತಿಗೆ ಬಂದು, ಇಂದು ಕುಬೇರನ ನಿವಾಸಸ್ಥಾನವೋ ಎಂಬಂತೆ ಸಂಪತ್ಸಮೃದ್ಧವಾಗಿದೆ. ಸ್ವಾತಂತ್ರ್ಯವೇ ಸಂಪತ್ತು!



ಅಧ್ಯಾಯ ೫ 'ವಿಜ್ಞಾನಶಾಸ್ತ್ರವೇತ್ತ'

ಇಂದು ಪ್ರಪಂಚವಿರುವ ಸ್ಥಿತಿಗೆ ಭೌತಿಕವಿಜ್ಞಾನಶಾಸ್ತ್ರ ಜ್ಞಾನವೇ ಮುಖ್ಯ ಕಾರಣವೆಂದರೆ ಅದರಲ್ಲಿ ಅತಿಶಯೋಕ್ತಿಯಿಲ್ಲ. ಮನುಷ್ಯನು ಪ್ರತಿಯೊಂದು ಕಾರ್ಯವನ್ನೂ ತನ್ನ ಕರಪರಿಶ್ರಮದಿಂದಲೇ ಮಾಡಬೇಕಾಗಿದ್ದ ಕಾಲವು ಕಳೆದು, ಈಗಿನ ಯಂತ್ರಯುಗವು ಸ್ಥಾಪಿತವಾದುದಕ್ಕೆ ಮೂಲಕಾರಣವು ಈ ವಿಜ್ಞಾನಶಾಸ್ತ್ರ ಜ್ಞಾನವೇ! ಋಷಿ ಮುನಿಗಳ ಕಾಲದಲ್ಲಿ ಭಾರತದೇಶದಲ್ಲಿ ಜನಿಸಿ ಪ್ರಯೋಗಕ್ಕೆ ಬಾರದೆ ಸುಪ್ತವಾಗಿದ್ದ, ಈ ಶಾಸ್ತ್ರಜ್ಞಾನವನ್ನು ಪ್ರಯೋಗಕ್ಕೆ ತಂದು ಪಾಶ್ಚಾತ್ಯರು ಇಂದು ಲೋಕದ ಸ್ವರೂಪವನ್ನೇ ಬದಲಾಯಿಸಿದ್ದಾರೆ.

ನಮ್ಮ ಕಥಾನಾಯಕನ ಕಾಲದಲ್ಲಿ ಇನ್ನೂ ಈ ಶಾಸ್ತ್ರಕ್ಕೆ ಅಷ್ಟು ಪ್ರಾಶಸ್ತ್ಯವುಂಟಾಗಿರಲಿಲ್ಲ. ಎಲ್ಲೋ ಒಬ್ಬರಿಬ್ಬರು ಪಾಠಶಾಲಾ ಪಂಡಿತರು ಮಾತ್ರ ಈ ಶಾಸ್ತ್ರತತ್ವಗಳನ್ನು ಕುರಿತು ಪ್ರಯೋಗ ನಡಿಸುತ್ತಿದ್ದರು. ಜನಸಾಮಾನ್ಯಕ್ಕಂತೂ ಇದರ ಗಂಧವೇ ಇರಲಿಲ್ಲ. ಬೆಂಜಮಿನ್ನನು ಚಿಕ್ಕಂದಿನಿಂದಲೇ ಈ ಶಾಸ್ತ್ರಕ್ಕೆ ಸಂಬಂಧಿಸಿದ ಹಲಕೆಲವು ಗ್ರಂಥಗಳನ್ನು ಓದಿ ಈ ವಿಚಾರದಲ್ಲಿ ಸ್ವಲ್ಪ ಆಸಕ್ತಿಗೊಂಡಿದ್ದನು. ಅಲ್ಲದೆ, ಯಾವುದೊಂದು ಕೆಲಸವನ್ನೂ ಅಚ್ಚುಕಟ್ಟಾಗಿಯೂ ಅಪೂರ್ವವಾಗಿ ಕಳೆಗಟ್ಟುವಂತೆಯೂ ಮಾಡುವ ಒಂದು ಬಗೆಯ ಶ್ರದ್ಧೆಯು ಬಾಲ್ಯದಿಂದಲೂ ಅವನಲ್ಲಿ ನೆಲೆಗೊಂಡಿದ್ದಿತು. ಅವನು ಹಿಂದೆ ನ್ಯೂಜರ್ಸಿಯ ಕರೆನ್ಸಿನೋಟುಗಳ ನಕಾಶೆಯನ್ನು ನವೀನ ರೀತಿಯಲ್ಲಿ ಚಿತ್ರಿಸಿ ಮುದ್ರಿಸಿದಾಗಲೇ ಹೊಸ ಮಾದರಿಗಳನ್ನು ಕಂಡುಹಿಡಿವುದರಲ್ಲಿ ಅವನ ಸಾಮರ್ಥ್ಯವೆಷ್ಟಿರುವುದೆಂಬುದು ಎಲ್ಲರಿಗೂ ತಿಳಿದಿದ್ದಿತು. ವಯಸ್ಸಾಗುತ್ತ ಬಂದಹಾಗೆಲ್ಲ ಆತನು ತನಗೆ ದೊರೆತ ವಿರಾಮಕಾಲವನ್ನೆಲ್ಲ ಅದರ ವ್ಯಾಸಂಗ ಪ್ರಯೋಗಗಳಿಗಾಗಿಯೇ ವಿನಿಯೋಗಿಸುತ್ತಲಿದ್ದನು. ಇತರ ಹಲವು ಕಾರ್ಯಗಳ ಗೊಂದಲದಲ್ಲಿ ಅವನಿಗೆ ವಿಜ್ಞಾನಶಾಸ್ತ್ರ ಪರಿಶೋಧನೆಗೆ ಹೆಚ್ಚು ವಿರಾಮ ದೊರೆಯಲಿಲ್ಲವಾದರೂ ದೊರೆತ ಅಲ್ಪಸ್ವಲ್ಪ ವೇಳೆಯನ್ನೇ ಈ ಉಪಯುಕ್ತ ಕಾರ್ಯಕ್ಕಾಗಿ ವಿನಿಯೋಗಿಸಿ ಆತನು ವಿದ್ವನ್ಮಂಡಲಿಯಲ್ಲೊಂದು ಗಣ್ಯಸ್ಥಾನವನ್ನು ಗಳಿಸಿಕೊಂಡನು.

ಲೋಕದಲ್ಲಿ ಶಾಸ್ತ್ರಪರಿಶೋಧನೆಗೆಂದು ವಿಶ್ವವಿದ್ಯಾನಿಲಯಗಳಲ್ಲಿ ನಿಯಾಮಕರಾಗಿರುವ ಪಂಡಿತರು ಕಂಡುಹಿಡಿದಿರುವ ವಸ್ತು ಸಮುದಾಯ ಕ್ಕಿಂತಲೂ, ನಮ್ಮ ಕಥಾನಾಯಕನಂತೆ ಅದನ್ನು ವಿರಾಮಕಾಲದ ಉ ದ್ಯೋಗ (Hobby)ವಾಗಿ ಕೈಕೊಂಡು ಮಾಡುತ್ತಿದ್ದ ಶ್ರದ್ಧಾವಂತರಿಂದ ಕಂಡುಹಿಡಿಯಲ್ಪಟ್ಟ ವಸ್ತುಸಮುದಾಯವೇ ಹೆಚ್ಚಾಗಿದೆ. ಬೆಂಜಮಿನ್ನನು ತನ್ನ ವ್ಯಾಸಂಗದಿಂದ ತನಗೆ ತಿಳಿಯಬಂದಷ್ಟು ವೈಜ್ಞಾನಿಕ ವಿಚಾರ ಗಳನ್ನೇ ಪರಸ್ಪರ ಚರ್ಚೆಜಿಜ್ಞಾಸೆಗಳಿಂದ ಅಭಿವೃದ್ಧಿಪಡಿಸಿಕೊಳ್ಳಲೋ ಸುಗ ೧೭೪೩ನೆಯ ಸಂವತ್ಸರದಲ್ಲಿ ತನ್ನ ಮಿತ್ರಮಂಡಲಿಯಲ್ಲೇ ಒಂದು ಚಿಕ್ಕ ಸಂಘವನ್ನು ಏರ್ಪಡಿಸಿದನು. ಅದು ಕ್ರಮಕ್ರಮವಾಗಿ ಬೆಳೆದುಬಂದು ಈಗ 'ಫ್ರಾಂಕ್ಲಿನ್ ಇನ್‌ಸ್ಟಿಟ್ಯೂಟ್' ಅಥವ 'ಅಮೆರಿಕದ ವೈಜ್ಞಾನಿಕ ಪರಿ ಷತ್ತು' ಎಂಬ ಹೆಸರನ್ನು ಹೊಂದಿದೆ. ಪ್ರಾರಂಭದಲ್ಲಿ ಆತನು ವೈಜ್ಞಾನಿಕ ವಿಚಾರದಲ್ಲಿ ಮಾಡಿದ ಕೆಲಸಗಳೆಂದರೆ ಈ ಸಂಘದ ಸಭೆಗಳಲ್ಲಿ ಭೂಕಂಪ ಗಳು, ಅಗ್ನಿಪರ್ವತಗಳು, ಗ್ರಹಣಗಳಾಗುವ ಬಗೆ, ಚಂಡಮಾರುತ, ಭೂಮಿ ಯ ಆಕಾರ-ಸ್ವರೂಪ ಮುಂತಾದ ವಿಚಾರ ಈ ಬಗೆಯ ವಿಷಯಗಳನ್ನು ಕುರಿತು ಉಪನ್ಯಾಸಗಳನ್ನು ಬರೆದು ಓದುತ್ತಿದ್ದುವೇ! ಬರೀ ಇಷ್ಟರಲ್ಲೇ ನಿಂತಿದ್ದ ಈ ಕಾರ್ಯವು ೧೭೪೬ರಲ್ಲಿ ಬೇರೊಂದು ಸ್ವರೂಪವನ್ನು ಹೊಂದಿತು. ಆಗ ಬಾಸ್ಟನ್ ಪಟ್ಟಣಕ್ಕೆ ಬಂದಿದ್ದ ಡಾಕ್ಟರ್ ಸ್ಪೆನ್ಸ್ ಎಂಬಾತನು, ಗಾಜಿನ ಕೊಳವೆಗಳನ್ನು ಪಯೋಗಿಸಿ ರಸಾಯನಾದಿ ಶಾಸ್ತ್ರಗಳಲ್ಲಿ ಕೆಲವು ಪ್ರಯೋಗ ಗಳನ್ನು ಮಾಡಿ ತೋರಿಸಿದನು. ಆಗ ಅವುಗಳನ್ನು ನೋಡಿದ ಇತರ ಅನೇಕರಿಂದ ಅದು ಕೇವಲ ವಿನೋದವೆಂದು ಪರಿಗಣಿತವಾಯಿತು. ಆದರೆ ಫ್ರಾಂಕ್ಲಿನ್ನನ ಮನಸ್ಸಿನಮೇಲೆ ಅದು ಶಾಶ್ವತವಾದ ಒಂದು ನೂತನವೂ ವಿಚಿತ್ರವೂ ಆದ ಪರಿಣಾಮವನ್ನುಂಟುಮಾಡಿತು. ಅವನು ಮುಂದೆ ಇಂ ಗ್ಲೆಂಡಿನಲ್ಲಿದ್ದ ತನ್ನ ಮಿತ್ರನಾದ ಕಾಲಿನ್ಸನ್ ಎಂಬಾತನ ಮೂಲಕ ಅಂತಹ ಕೆಲವು ಕೊಳವೆಗಳನ್ನು ತರಿಸಿಕೊಂಡು ಶಾಸ್ತ್ರತತ್ವಗಳನ್ನನುಸರಿಸಿ, ತನ್ನ ಮನೆಯಲ್ಲೇ ಹಲವು ಪ್ರಯೋಗಗಳನ್ನು ನಡೆಸತೊಡಗಿದನು. ಜನರಿಗೆ ಅವು ಕೇವಲ ನೂತನವಾಗಿದ್ದುದರಿಂದ ಆತನ ಪ್ರಯೋಗಶಾಲೆಯು ಹಲವು ವೇಳೆ ಊರ ಜನರಿಂದ ಕಿಕ್ಕಿರಿದುಹೋಗುತ್ತಿದ್ದಿತು. ತನ್ನಾ ಪರೀಕ್ಷೆಗಳ

ವಿಷಯದಲ್ಲಿ ನಂಬಿಕೆಯುಂಟಾದ ತರುವಾಯ ಆತನು ಒಬ್ಬ ಮನುಷ್ಯನನ್ನು ಗೊತ್ತುಮಾಡಿ, ಆತನ ಮೂಲಕ ಆಗ ತಿಳಿದಿದ್ದಷ್ಟು ವಿಚಾರಗಳನ್ನೇ ಜನಸಾಮಾನ್ಯರಲ್ಲಿ ಉಪನ್ಯಾಸಗಳ ಮೂಲಕವೂ- ಬಹಿರಂಗ ಪ್ರದರ್ಶನಗಳ ಮೂಲಕವೂ ತಿಳಿಸುವಂತೆ ತಕ್ಕ ಅನುಕೂಲತೆಗಳನ್ನು ಒದಗಿಸಿಕೊಟ್ಟು-ಕಳುಹಿಸಿದನು.

ಅಷ್ಟರಿಂದಲೇ ಆತನು ತೃಪ್ತನಾಗಲಿಲ್ಲ. ವಿಜ್ಞಾನಶಾಸ್ತ್ರ ವಿಚಾರದಲ್ಲಿ ತನಗೆ ತೋರುತ್ತಿದ್ದ ನೂತನ ವಿಚಾರ ಸರಣಿಯನ್ನು ಪ್ರಬಂಧಗಳನ್ನಾಗಿ ಬರೆದು ಇಂಗ್ಲೆಂಡಿನಲ್ಲಿದ್ದ ತನ್ನ ಮಿತ್ರರುಗಳಿಗೆ ಕಳುಹುತ್ತಿದ್ದನು. ಅವರು ಅವುಗಳನ್ನು ರಾಯಲ್ ಸೊಸೈಟಿಯೆಂಬ ವಿಜ್ಞಾನಶಾಸ್ತ್ರವೇತ್ತರ ಸಂಘದ ಸಭೆಗಳಲ್ಲಿ ಓದುತ್ತಿದ್ದರು. ಆದರೆ ಶಾಸ್ತ್ರಸಿದ್ಧವೆನಿಸದಿದ್ದ ಆ ನೂತನ ವಿಚಾರಗಳ ಕಡೆಗೆ ಆ ಪಂಡಿತ ಮಂಡಲಿಯವರು ಗಮನವನ್ನೇ ಕೊಡುತ್ತಿರಲಿಲ್ಲ. ಬೆಂಜಮಿನ್ನನ ಮಿತ್ರನಾದ ಕಾಲಿನ್‌ಸನ್ ಎಂಬಾತನ ಸಹಾಯವು ಈ ವಿಚಾರದಲ್ಲಿ ವಿಶೇಷವಾಗಿದ್ದಿತು ಆತನ ಪರಿಶ್ರಮದಿಂದ ಅವು ಸಭೆಗಳಲ್ಲಿ ಓದಲ್ಪಡುತ್ತಿದ್ದುವಾದರೂ ಅವು ಅಲ್ಲಿಗೇ ಮುಕ್ತಾಯಗೊಳ್ಳುತ್ತಿದ್ದುವು. ಸಂಘದಿಂದ ಹೊರಡುತ್ತಿದ್ದ ಪತ್ರಿಕೆಯಲ್ಲಿ ಅವುಗಳನ್ನು ಛಾಪಿಸಿ ಪ್ರಕಟಿಸಲು ಅವು ಅಷ್ಟು ಯೋಗ್ಯವಾದುವೆಂಬ ಅಭಿಪ್ರಾಯವು ಅವರಿಗಿರಲಿಲ್ಲ. ಅಲ್ಲದೆ ಮೇಘಮಾಲೆಯಲ್ಲಿ ಗೋಚರವಾಗುವ ಮಿಂಚಿಗೂ ಈಚೆಗೆ ಲೋಕದಲ್ಲಿ ಕಂಡುಹಿಡಿಯಲ್ಪಟ್ಟಿರುವ ವಿದ್ಯುಚ್ಛಕ್ತಿಗೂ ಸಂಬಂಧವಿದೆಯೆಂದು ಆತನು ಸೂಚಿಸಿ ಬರೆದ ವ್ಯಾಸವನ್ನು ಕೇಳಿಯಂತೂ ಹಲವರು ಪರಿಹಾಸ್ಯಮಾಡಿ ನಕ್ಕುಬಿಟ್ಟರಂತೆ! ಡಾ. ಮಿಛೆಲ್ ಎಂಬ ಬೆಂಜಮಿನ್ನನ ಮಿತ್ರನು ಈ ಸಂಗತಿಯನ್ನು ಆತನಿಗೆ ಬರೆದು ತಿಳಿಸಿದನಾದರೂ, ಅದು ಆ ಶ್ರದ್ಧಾವಂತನನ್ನು ನಿರುತ್ಸಾಹಗೊಳಿಸಲಿಲ್ಲ. ತನ್ನ ಪ್ರಯೋಗಗಳನ್ನೂ ಪರೀಕ್ಷೆಗಳನ್ನೂ ಎಂದಿನಂತೆ ಮುಂದರಿಸಿಕೊಂಡೇಹೋದನು. ಮುಂದೆ ಕೆಲವು ದಿನಗಳ ತರುವಾಯ, ಡಾಕ್ಟರ್ ಫೋದರ್‌ಜಿಲ್ ಎಂಬಾತನು ಆ ಲೇಖನಗಳನ್ನು ನೋಡಿ, ಅವುಗಳ ನಿಜವಾದ ಯೋಗ್ಯತೆಯನ್ನು ಕಂಡುಹಿಡಿದು, ಅವುಗಳನ್ನು ಛಾಪಿಸಿ ರಕ್ಷಿಸಬೇಕೆಂದು ಸೂಚಿಸಿ, ಅವುಗಳಿಗೆ ಉಪೋದ್ಘಾತವನ್ನು ಬರೆದುಕೊಡಲು, ಕಾಲಿನ್‌ಸನ್‌ನು ಕೇವ್ ಎಂಬಾತನ

ಮೂಲಕ ಅವುಗಳನ್ನು ಒಂದು ಪುಸ್ತಕ ರೂಪದಲ್ಲಿ ಪ್ರಕಟಿಸಿದನು. ಆ ಗ್ರಂಥವೇ ತರುವಾಯ ಐದು ವೇಳೆ ಮುದ್ರಣವಾಗಿ ಅದರ ಸಾವಿರಾರು ಪ್ರತಿಗಳು ಹಲವು ಸ್ಥಳಗಳಲ್ಲಿ ಪ್ರಚಾರವಾದುವು. ಅವುಗಳಲ್ಲೊಂದು, ಆಗ ಫ್ರಾನ್ಸ್‌ದೇಶದ ಪ್ಯಾರಿಸ್‌ನಗರದಲ್ಲಿ ಸುಪ್ರಸಿದ್ಧ ವೈಜ್ಞಾನಿಕನೆನ್ನಿಸಿ ಕೊಂಡಿದ್ದ ಒಬ್ಬ ಪಂಡಿತನ ಕೈಗೆ ಸಿಕ್ಕಿತು. ಆತನ ವೈಜ್ಞಾನಿಕ ಪರೀಕ್ಷೆ ಗಳಿಂದ ಕಂಡುಹಿಡಿಯಲ್ಪಟ್ಟ ಸಿದ್ಧಾಂತಗಳೇ ತ್ರಿಕಾಲಾಬಾಧಿತಗಳೆಂದು ಆಗ ಯೂರೋಪಿನಲ್ಲೆಲ್ಲ ಪಂಡಿತರ ಅಭಿಪ್ರಾಯವಿತ್ತು. ಆ ಪಂಡಿತನು ಬೆಂಜಮಿನ್ನನ ಈ ನವೀನ ವಿಚಾರಗಳನ್ನು ಕಂಡು ಚಕಿತನಾಗಿ ಇವೆಲ್ಲವೂ ಕುಹಕವೆಂದು ಸಾರಿದನು. ಮಾತ್ರವಲ್ಲ- ಅವುಗಳನ್ನು ಆಕ್ಷೇಪಿಸಿ ಬೆಂಜ ಮಿನ್ನನಿಗೆ ಹಲವು ಕಾಗದಗಳನ್ನು ಬರೆದನು. ಆದರೆ ಬೆಂಜಮಿನ್ನನು ಭಾಷಾಭೇದದಿಂದ ಭಿನ್ನಾಭಿಪ್ರಾಯಗಳುಂಟಾಗಬಹುದೆಂದು ತಿಳಿದು ಕೆಲ ದಿನಗಳ ಮಟ್ಟಿಗೆ ಸುಮ್ಮನಿದ್ದನಾದರೂ ಆತನ ಸ್ನೇಹಿತನೊಬ್ಬನು ಆ ಆಕ್ಷೇಪಗಳಿಗೆಲ್ಲ ಪ್ರತ್ಯುತ್ತರಗಳನ್ನು ಬರೆದು ಕಳುಹಿಸಿದನು.

ಬೆಂಜಮಿನ್ನನ ಲೇಖನಗಳನ್ನೊಳಗೊಂಡ ಮೇಲ್ಕಂಡ ಗ್ರಂಥವು ತರುವಾಯ ಯೂರೋಪಿನ ಫ್ರೆಂಚ್, ಇಟಾಲಿಯನ್, ಜರ್ಮನ್ ಮುಂತಾದ ಭಾಷೆಗಳಿಗೆಲ್ಲ ಪರಿವರ್ತಿತವಾಯಿತು. ಫ್ರಾನ್ಸಿನ ಪಂಡಿತರು ಕೆಲವರು ಅವನು ಕೇವಲ ಊಹೆಗಳ ಮೂಲಕ ಸಿದ್ಧಾಂತಗೊಳಿಸಿದ್ದ ವಿಚಾರಗಳನ್ನು ಫಿಲಡೆಲ್‌ಫಿಯ ಪ್ರಯೋಗ (Philadelphia experiments) ಗಳೆಂದು ಕರೆದು ತಮ್ಮಲ್ಲಿದ್ದ ಉಪಕರಣಗಳ ಮೂಲಕ ಪ್ರಯೋಗ ಮಾಡಿ ನಿಸ್ಸಂದೇಹವಾದ ರೀತಿಯಲ್ಲಿ ಸ್ಥಾಪಿಸಿದರು. 'ಅದನ್ನು ಫ್ರಾನ್ಸಿನ ರಾಜರಾ ಣಿಯರೂ, ಅವರ ಪರಿವಾರದವರೂ, ಆಸ್ಥಾನಪಂಡಿತರೂ ಅತಿಶಯ ಕೌತು ಕಾದರಗಳಿಂದ ನೋಡಿ ವಿಸ್ಮಯಗೊಂಡು ಶ್ಲಾಘಿಸಿದರು. ಬೆಂಜಮಿನ್ನನ ಕೀರ್ತಿಯು ದೇಶದೇಶಾಂತರಗಳಲ್ಲೂ ಹಬ್ಬಿತು. ಈ ವಾರ್ತೆಯನ್ನು ಕೇಳಿದ ಬೆಂಜಮಿನ್ನನ ಸಂತೋಷವು ಉಕ್ಕೇರಿತೆಂದು ಹೇಳಬೇಕಾದು ದೇನು! ಈ ಉತ್ಸಾಹ ಜನಕ ವಾರ್ತೆಯನ್ನು ಕೇಳಿದಮೇಲೆ ಆತನು ಮೇಘಮಾಲೆಯಲ್ಲಿನ ಮಿಂಚಿಗೂ ಈ ವಿದ್ಯುಚ್ಛಕ್ತಿಗೂ ಸಂಬಂಧವಿದೆಯೋ ಎಂಬುದನ್ನು ಪ್ರತ್ಯಕ್ಷವಾಗಿ ಕಂಡುಹಿಡಿಯಲು ಒಂದು ವಿಶೇಷ ಪ್ರಯೋಗ

ವನ್ನು ಕೈಕೊಂಡನು. ಭಯಂಕರ ಗುಡುಗು ಮಿಂಚುಗಳಿಂದ ಕೂಡಿ ಪ್ರಚಂಡವೃಷ್ಟಿಯಾಗುವುದೆಂದು ಕಂಡು ಬಂದ ಒಂದು ದಿನ ಮೊದಲೇ ಸಿದ್ಧಪಡಿಸಿಟ್ಟುಕೊಂಡಿದ್ದ ಒಂದು ಗಾಳಿಯ ಪಟವನ್ನು ತೆಗೆದುಕೊಂಡು ವಿಸ್ತಾರವಾದ ಒಂದು ಬಯಲಿಗೆ ಹೋದನು. ಗಾಳಿಯ ಪಟಕ್ಕೆ ರೇಷ್ಮೆಯ ದಾರವು ಕಟ್ಟಲ್ಪಟ್ಟಿತ್ತು. ಅಲ್ಲದೆ ಅದಕ್ಕೊಂದು ಲೋಹದ ಉಂಗುರವನ್ನೂ ತಗುಲಿಸಿದ್ದನು. ಪಟವು ಬಲವಾಗಿ ಬೀಸುತ್ತಿದ್ದ ಗಾಳಿಯ ಮೂಲಕ ಬಹು ದೂರಕ್ಕೆ ಎಂದರೆ ಮೇಘಪಙ್ಕ್ತಿಯನ್ನೂ ಮೀರಿ ಹಾರಿಹೋಯಿತು. ಆಗ ಅದಕ್ಕೆ ಕಟ್ಟಿದ್ದ ಲೋಹದ ಉಂಗುರಕ್ಕೆ ಆಗುತ್ತಿದ್ದ ವಿದ್ಯುತ್ಸಂಬಂಧದಿಂದ ಶಕ್ತಿಯು ರೇಷ್ಮೆಯ ದಾರದಮೂಲಕ ಪ್ರವಹಿಸಿ ಅವನ ಕೈಗೂ ಸೋಕಿದಂತಾಯಿತು. ಒಡನೆ ಅದನ್ನು ಪಕ್ಕದಲ್ಲಿದ್ದ ಒಂದು ಮರಕ್ಕೆ ಕಟ್ಟಿಬಿಟ್ಟು, ಆ ಬಿರುಮಳೆಯಲ್ಲಿ ಅಲ್ಲೇ ಕುಳಿತು, ಕೂಲಂಕುಷವಾಗಿ ಪರಿಶೀಲಿಸಿದನು.

ಪ್ಯಾರಿಸ್ ನಗರದಲ್ಲಿ ಮೇಲ್ಕಂಡಂತೆ ನಡೆದ ವಿಜ್ಞಾನಶಾಸ್ತ್ರ ಪ್ರಯೋಗಗಳನ್ನು ಪ್ರತ್ಯಕ್ಷ ನೋಡಿದ ಒಬ್ಬ ಇಂಗ್ಲಿಷ್ ಪಂಡಿತನು ಇಂಗ್ಲೆಂಡಿಗೆ ಹೋಗಿ ಫ್ರಾಂಕ್ಲಿನ್ನನ ಪ್ರತಿಭೆಯನ್ನು ಕುರಿತು ಅಲ್ಲಿ ವಿವರಿಸಿದನು. ಅದನ್ನು ಕೇಳಿದ ರಾಯಲ್ ಸೊಸೈಟಿಯ ಪಂಡಿತಮಂಡಳಿಯವರು ಆಗ ಕಣ್ಣು ತೆರೆದು, ತಮ್ಮವನೇ ಆದ ಆತನನ್ನು ತಾವೂ ಉಚಿತ ರೀತಿಯಿಂದ ಗೌರವಿಸತಕ್ಕದು ಕರ್ತವ್ಯವೆಂದುಕೊಂಡು, ಆತನನ್ನು ತಮ್ಮ ಸಂಘಕ್ಕೆ ಗೌರವಸಭಾಸದನನ್ನಾಗಿ ಮಾಡಿಕೊಂಡು, ತಮ್ಮಿಂದ ಪ್ರಕಟವಾಗುತ್ತಿದ್ದ ವೈಜ್ಞಾನಿಕ ವಾರ್ತಾ ಪತ್ರವನ್ನು ಆತನಿಗೆ ಉಚಿತವಾಗಿ ಕಳುಹಿಸತೊಡಗಿದರು. ಈ ಸ್ಥಾನವು ಅಪ್ರಾರ್ಥಿತವಾಗಿ ಆವರೆಗೂ ಯಾರಿಗೂ ಲಭ್ಯವಾದುದಿಲ್ಲವಂತೆ! ಇದಲ್ಲದೆ ತಮ್ಮ ಸಂಘದಿಂದ ಪ್ರತಿವರ್ಷವೂ ಸುಪ್ರಸಿದ್ಧ ವಿಜ್ಞಾನಶಾಸ್ತ್ರವೇತ್ತನೊಬ್ಬನಿಗೆ ಸಲ್ಲುತ್ತಿದ್ದ ಬಂಗಾರದ ಪದಕವನ್ನು ೧೭೫೩ನೆಯ ಸಾಲದಲ್ಲಿ ಆತನಿಗೆ ಒಪ್ಪಿಸಿ ಗೌರವಿಸಿದರು. ಆ ಬಿರುದು ಬಿಲ್ಲೆಯು ಆತನಿಗೆ ದೊರಕಿದುದಕ್ಕಾಗಿ ಫಿಲಡೆಲ್ಫಿಯದ ನಾಗರಿಕರು ಪರಮಾನಂದಪಟ್ಟರು. ಗೌವರ್ನರ್ ಡೆನ್ನಿ ಎಂಬಾತನು, ಬೆಂಜಮಿನ್ನನು ವಿಜ್ಞಾನಶಾಸ್ತ್ರಾಭಿವೃದ್ಧಿಗಾಗಿ ಮಾಡಿದ ಮಹಾ ಪ್ರಯತ್ನಗಳನ್ನು ವರ್ಣಿಸಿ

ಭಾಷಣಮಾಡಿ, ಅಮೆರಿಕದ ಮಹಾಜನಗಳ ಸಮ್ಮುಖದಲ್ಲಿ ಆತನಿಗೆ ಆ ಬಿರುದುಬಿಲ್ಲೆಯನ್ನು ಒಪ್ಪಿಸಿದನು.

ಹೀಗೆ ಒಂದು ವಿದ್ವತ್ಸಂಸ್ಥೆಯು ಆತನ ಪ್ರಜ್ಞಾತಿಶಯವನ್ನು ಮೆಚ್ಚಿಕೊಂಡು ಗೌರವಿಸಿದೊಡನೆಯೇ, ಮಿಕ್ಕ ಅನೇಕ ಸಂಸ್ಥೆಗಳವರೂ ವಿಶ್ವವಿದ್ಯಾನಿಲಯಗಳವರೂ ಮುಂದೆ ಬಂದು ಆತನನ್ನು ವಿಶೇಷ ರೀತಿಯಿಂದ ಗೌರವಿಸತೊಡಗಿದರು. ಯೂರೋಪಿನ ಹಲವು ರಾಜ್ಯಗಳ ರಾಜರೂ ರಾಜ್ಯಾಧಿಕಾರಿಗಳೂ, ಸುಪ್ರಸಿದ್ಧ ವಿದ್ವಾಂಸರೂ ಆತನ ಸಂದರ್ಶನ, ಸಂಭಾಷಣ, ಸಮಾಗಮಗಳನ್ನು ಉತ್ಸುಕತೆಯಿಂದ ಎದುರುನೋಡಿಕೊಂಡಿದ್ದು ಆತನನ್ನು ಗೌರವಿಸಿದರು. ಸ್ಕಾಟ್ಲೆಂಡಿನ ಎಡಿಂಬರೋ ವಿಶ್ವವಿದ್ಯಾನಿಲಯದವರು ಆತನನ್ನು ಆಹ್ವಾನಿಸಿ ಅಭೂತಪೂರ್ವರೀತಿಯಿಂದ ಗೌರವಮಾಡಿದರು. ಸೆಂಟ್ ಆಂಡ್ರ್ಯೂಸ್ ಎಂಬ ವಿಶ್ವವಿದ್ಯಾನಿಲಯದವರು ಆತನಿಗೆ ಡಾಕ್ಟರ್ ಆಫ್ ಲಾಸ್ ಎಂಬ ಘನತರವಾದ ಬಿರುದನ್ನು ಕೊಟ್ಟು ಮನ್ನಿಸಿದರು. ಆತನು ಫ್ರಾನ್ಸ್‌ದೇಶವನ್ನು ಸಂದರ್ಶಿಸಿದಾಗ್ಗೆ ನಡೆದ ಗೌರವಾದರಗಳಂತೂ ಅಪರಿಮಿತವೆನ್ನಿಸಿದ್ದುವು. ತರುವಾಯ ಒಂದೆರಡೆಂದಲ್ಲ, ಶಾಸ್ತ್ರಾನ್ವೇಷಣೆಗಾಗಿ ಏರ್ಪಟ್ಟಿದ್ದ ಸಕಲ ಸಂಸ್ಥೆಗಳವರೂ ಆತನನ್ನು ತಮ್ಮ ಗೌರವ ಸಭಾಸದನನ್ನಾಗಿ ಸ್ವೀಕರಿಸಿ, ತಮ್ಮ ಸಂಸ್ಥೆಯ ಗೌರವವನ್ನು ಹೆಚ್ಚಿಸಿಕೊಳ್ಳತೊಡಗಿದರು. ಆ ಕಾಲದಲ್ಲಿ ಆತನ ಸಂಬಂಧವಿಲ್ಲದ ಒಂದು ಮಹತ್ಕಾರ್ಯವೂ ಇಲ್ಲದಂತಹ ಪ್ರಶಸ್ತಿಯು ಆತನಿಗೆ ಪ್ರಾಪ್ತವಾಯಿತು.

ಇನ್ನು ಅಮೆರಿಕಾ ದೇಶೀಯರಿಂದಲೂ ಆತನಿಗೆ ಯೋಗ್ಯಮನ್ನಣೆ ದೊರೆಯಿತೆಂದು ಹೇಳಬೇಕಾದುದೇನು! ಚಿಕ್ಕತನದಲ್ಲಿ ಕ್ರಮವಿದ್ಯಾಭ್ಯಾಸಮಾಡಲು ಅನುಕೂಲತೆಯಿಲ್ಲದೆ, ಕೇವಲ ಹತ್ತುವರ್ಷ ವಯಸ್ಸಿನಲ್ಲೇ ಪಾಠಶಾಲಾ ವಿದ್ಯಾಭ್ಯಾಸಕ್ಕೆ ಶರಣು ಹೊಡೆದು ಮನೆಯಲ್ಲಿ ನಿಂತು, ಕೈಕೆಲಸಕ್ಕೆ ತೊಡಗಿದ ಈ ಬಡ ಬಾಲಕನು, ಸ್ವಪರಿಶ್ರಮದಿಂದ ಆದ್ಯಂತ ವಿದ್ವಾಲ್ಲೋಕದಿಂದ ಅಲೌಕಿಕ ಗೌರವಾದರಗಳನ್ನು ಪಡೆದು ತನ್ನ ಶಾಸ್ತ್ರಜ್ಞಾನದಿಂದ ಶಾಸ್ತ್ರವೇತ್ತನೆಂದು ಆಚಂದ್ರಾರ್ಕ ಸ್ಥಾಪಿತವಾದ ಕೀರ್ತಿಪ್ರತಿಷ್ಠೆಗಳನ್ನು ಗಳಿಸಿದನೆಂಬುದು ಈ ಪ್ರತ್ಯಕ್ಷ ಪ್ರಮಾಣದಿಂದ ಸಿದ್ಧವಾಗಿರುವಲ್ಲಿ, ಮಹದುದ್ದೇಶವನ್ನು ಮನಸ್ಸಿನಲ್ಲಿಟ್ಟು, ವ್ಯರ್ಥಕಾಲಕ್ಷೇಪಮಾಡದೆ, ಪ್ರಯ

ತ್ನಿಸತೊಡಗುವವನು ಎಂತಹ ಕಡು ಬಡವನಾದರೂ ಅವನಿಗೆ ಭಾಗ್ಯಲಕ್ಷ್ಮಿ ಯು ಒಲಿದು, ಐಶ್ವರ್ಯ, ಕೀರ್ತಿಪ್ರತಿಷ್ಠೆ ಆದರ ಗೌರವಗಳನ್ನು ಒದಗಿಸಿ, ಅವನ ನಾಮಧೇಯವನ್ನು ಚಿರಸ್ಥಾಯಿಯನ್ನಾಗಿಸುವಳೆಂಬುದರಲ್ಲಿ ಸಂಶಯವೇನು?



## ಉ ಪ ಸ ಂ ಹಾ ರ

ಅಮೆರಿಕಾದವರು ತಾವು ಇಂಗ್ಲೆಂಡಿಗೆ ಅಧೀನರಲ್ಲವೆಂಬಂಶವನ್ನು ಪ್ರಸಿದ್ಧಪತ್ರಿಕೆಯ ಮೂಲಕ ಪ್ರಕಟಿಸಿದರೆಂಬ ಸಂಗತಿಯನ್ನು ಈ ಮೊದಲೇ ತಿಳಿಸಿದೆಯಲ್ಲವೆ! ಆದರೂ ಮಾತೃದೇಶದ ಸಂಬಂಧವನ್ನು ಒಮ್ಮೆಗೇ ತೊರೆಯಲಾರದೆ, ಸಂಧಿಗೋಸ್ಕರ ಪುನಃ ಪ್ರಯತ್ನ ನಡೆಸಿದರು. ಆಗಲೂ ಬೆಂಜಮಿನ್ ಫ್ರಾಂಕ್ಲಿನ್ನನೇ ಮುಂದೆ ನಿಲ್ಲಬೇಕಾಯಿತು ಪರರಾಷ್ಟ್ರಗಳನ್ನು ತುಳಿದು, ಪರಕೀಯರನ್ನು ಗುಲಾಮರಂತೆ ಕಂಡು ಹೆಮ್ಮೆಗೊಂಡಿದ್ದ ಇಂಗ್ಲಿಷ್ ರಾಜಕಾರಣ ಧುರೀಣರಿಗೆ ಬೆಂಜಮಿನ್ನನ ಹಿತೋಕ್ತಿಗಳು ಒಗ್ಗಲಿಲ್ಲ. ಇದನ್ನು ಅನುಭವದಿಂದ ಕಂಡುಹಿಡಿದ ಆತನು ಇಂಗ್ಲೆಂಡಿನೊಂದಿಗೆ ಎಂದಿಗೂ ಸಂಧಿ ಕುದುರದೆಂದೂ ಅವರು ಎಂದಿಗಿದ್ದರೂ ದಂಡಸಾಧ್ಯರಲ್ಲದೆ ಸಾಮೋಪಾಯವು ಅವರಲ್ಲಿ ಸರಿಬೀಳದೆಂದೂ ತಿಳಿದು, ಫ್ರೆಂಚರೊಡನೆ ಸಂಧಿಮಾಡಿಕೊಂಡು ತನ್ಮೂಲಕ ಇಂಗ್ಲೆಂಡಿನ ದುರಹಂಕಾರವನ್ನು ಅಣಗಿಸಬಹುದೆಂದು ಆತನು ಯೋಚಿಸಿದನು. ಫ್ರೆಂಚರಿಗೆ ಬೆಂಜಮಿನ್ನನಲ್ಲಿ ಅತಿಶಯ ಪ್ರೀತಿ ವಿಶ್ವಾಸಗಳಿದ್ದುವು. ಆತನಿಗಿಂತ ಮುಂಚೆಯೇ ಆತನ ಕೀರ್ತಿಯು ಆ ದೇಶವನ್ನು ತಲುಪಿ ವ್ಯಾಪಿಸಿತ್ತು. ಆಗಿನ ಕಾಲದಲ್ಲಿ ಆತನ ಕೀರ್ತಿ ವೈಭವ, ಪ್ರಜ್ಞಾ, ನಿಸ್ವಾರ್ಥತೆ, ಪರೋಪಕೃತಿ ಮುಂತಾದುವುಗಳನ್ನು ಕುರಿತು ಹೊಗಳದ ಪತ್ರಿಕೆಯೇ ಯೂರೋಪುಖಂಡದಲ್ಲಿರಲಿಲ್ಲ. ಫ್ರಾನ್ಸಿನಲ್ಲಂತೂ ಆತನ ಚಿತ್ರಪಟಗಳನ್ನು ಬೀದಿಬೀದಿಗಳಲ್ಲಿ ಹಂಚತೊಡಗಿ, ಆತನ ರೂಪವೂ ಚರಿತ್ರೆಯೂ ಗುಣಗಳೂ ಪ್ರಕಾಶಕ್ಕೆ ಬರಲು ಅಗಾಧ ಪ್ರಯತ್ನಗಳನ್ನು ಮಾಡಿದರು. ಬೆಂಜಮಿನ್ನನು ತನ್ನ ಈ ಪ್ರಖ್ಯಾತಿಯ ಪ್ರಯೋಜನಪಡೆದು, ಅಲ್ಲಿಯ ರಾಜಕಾರಣ ಪಟುಗಳೊಂ

ದಿಗೆ ಚರ್ಚಿಸಿ ತನ್ನ ಮಾತೃದೇಶಕ್ಕೂ ಆ ದೇಶಕ್ಕೂ ಸ್ನೇಹ ಪ್ರೇಮಗಳು ಬೆಳೆದುಬರುವಂತೆಯೂ, ವ್ಯಾಪಾರ ಮುಂತಾದುವುಗಳು ಪರಸ್ಪರರಿಗೆ ಲಾಭದಾಯಕಗಳಾಗುವಂತೆಯೂ ವ್ಯವಹಾರಕ್ಕೆ ಅನುಕೂಲಿಸುವಂತೆ ಸಂಧಿಗಳನ್ನು ಮಾಡಿಕೊಂಡನು ರಾಯಭಾರಿಯಾಗಿ ಕೇವಲ ವಾಕ್ಚಮತ್ಕೃತಿಯನ್ನು ಮೆರಸುವಿಕೆ ಮಾತ್ರವಲ್ಲ - ಆತನ ಆಗಿನ ಜವಾಬುದಾರಿಯು ಅತಿಶಯ ಮಹತ್ವದ್ದಾಗಿತ್ತು. ಯುದ್ಧದ ಹಡಗುಗಳಿಗೂ, ಸೆರೆಮನೆಗಳಲ್ಲಿದ್ದ ಶತ್ರುಸೈನಿಕರ ಖರ್ಚಿಗೂ, ಬೇಕಾಗುತ್ತಿದ್ದ ಅಪಾರ ಹಣವನ್ನು ಒದಗಿಸುವ ಕೆಲಸವೂ ಅವನ ಪಾಲಿಗೇ ಬಿದ್ದಿತು. ಆದಕ್ಕೂ ಆತನು ಹಿಂಜರಿಯದೆ ರಾಷ್ಟ್ರಸಭೆಯು ಪರವಾಗಿ ತನ್ನ ಹೆಸರಿಗೆ ಬರುವ ಹುಂಡಿಗಳಿಗೆಲ್ಲಾ ಅಲ್ಲಿಯ ವರ್ತಕರಲ್ಲೂ, ಧನಾಗಾರಗಳಲ್ಲೂ ದ್ರವ್ಯವು ದೊರೆತು ವ್ಯವಹಾರವು ಸಾಗಲು ಅವಕಾಶಮಾಡುತ್ತಿದ್ದನು. ಈಗ ಅಮೆರಿಕವು ಪೃಥ್ವಿಯ ಇತರ ಎಲ್ಲಾ ರಾಷ್ಟ್ರಗಳಿಗಿಂತಲೂ ಧನಸಂಪನ್ನವಾಗಿ, ಫ್ರಾನ್ಸು ಜರ್ಮನಿ, ಇಂಗ್ಲೆಂಡು ಮುಂತಾದ ಸಕಲ ಐರೋಪ್ಯ ರಾಷ್ಟ್ರಗಳಿಗೂ ಸಾಲಕೊಟ್ಟು ಮೂರ್ಧನ್ಯವೆನ್ನಿಸಿದೆಯಾದರೂ, ಆಗ ಆ ದೇಶದ ವ್ಯಾಪಾರ ಉದ್ಯೋಗಗಳು ಹೆಚ್ಚಿರದಿದ್ದುದರಿಂದ ಅದು ಧನಾಭಾವದಿಂದ ಪರರಾಷ್ಟ್ರದ ಸಹಾಯವನ್ನು ಯಾಚಿಸಬೇಕಾಗಿತ್ತು. ಅಂತಹ ವಿಷಮ ವೇಳೆಯಲ್ಲಿ ಫ್ರಾನ್ಸುದೇಶವೊಂದೇ ಹತ್ತುಕೋಟಿ ರೂಪಾಯಿಗಳಿಗಿಂತ ಹೆಚ್ಚಾದ ದ್ರವ್ಯವನ್ನು ಒದಗಿಸಿತು. ಅಮೆರಿಕಾದೇಶಕ್ಕೆ ಫ್ರಾನ್ಸುದೇಶದ ಬೆಂಬಲವಿದೆಯೆಂದು ತಿಳಿದಮೇಲೆ ಇಂಗ್ಲೆಂಡಿನ ರಾಜಕಾರಣಧುರೀಣರು ಸ್ವಲ್ಪಮೆತ್ತಗಾಗಿ ಸಂಧಿಗೆ ಒಪ್ಪಿದರು. ೧೭೮೨ನೆಯ ನವಂಬರು ೩೦ಲ್ಲಿ ಉಭಯ ದೇಶೀಯರಿಗೂ ಸಂಧಿಯಾಯಿತು. ಸಂಧಿಗಾಗಿ ಬಂದಿದ್ದ ಬೆಂಜಮಿನ್ನನೇ ಮುಂತಾದ ರಾಯಭಾರಿಗಳಿಗೆ ಅಪೂರ್ವ ವೈಭವಗಳಿಂದ ರಾಜಯೋಗ್ಯವಾದ ಮರ್ಯಾದೆಗಳು ನಡೆದುವು. ಈಗ ನಡೆದ ಈ ಸಂಧಾನದಿಂದ ಅಮೆರಿಕದ ಸ್ವಾತಂತ್ರ್ಯವು ಸ್ಥಿರವೆನ್ನಿಸಿತು ಲಕ್ಷಾಂತರ – ಕೋಟ್ಯಾಂತರ ಪ್ರಜೆಗಳ ನಿವಾಸ ಭೂಮಿಯಾದ ಒಂದು ಮಹಾ ರಾಷ್ಟ್ರವು ಪರಾಧೀನತೆಯ ಶೃಂಖಲೆಯನ್ನು ಕಿತ್ತೊಗೆದು ಸ್ವಾತಂತ್ರ್ಯಸೌಭಾಗ್ಯವನ್ನು ಪಡೆಯಿ

ತೆಂದರೆ ಆ ವೈಭವವನ್ನು ಏನೆಂದು ಹೊಗಳಬಹುದು! ಅದಕ್ಕಾಗಿ ಎಷ್ಟು ಮಟ್ಟಿಗೆ ಆನಂದಿಸಬಹುದು!

ಬೆಂಜಮಿನ್ ಫ್ರಾಂಕ್ಲಿನ್ನನು ಈ ಮಹಾ ಕಾರ್ಯವನ್ನು ನೆರವೇರಿಸಿದ ತರುವಾಯ ಪುನಃ ಎರಡುಮೂರು ವರ್ಷಕಾಲ ಅಲ್ಲೇ ವಾಸಿಸಿದ್ದು, ಅಗತ್ಯವಾದ ಇತರ ಹಲವು ಸಣ್ಣ ಪುಟ್ಟ ಕಾರ್ಯಗಳನ್ನೂ ಸುಗಮಗೊಳಿಸಿ ೧೭೮೫ನೆಯ ಸಂವತ್ಸರದಲ್ಲಿ ತನ್ನ ಮಾತೃದೇಶಕ್ಕೆ ಹಿಂದಿರುಗಿದನು. ಆಗ ಆತನಿಗೆ ಅಮೆರಿಕಾದೇಶೀಯರು ಮಾಡಿದ ಆದರೋಪಚಾರಗಳು ಅಭೂತಪೂರ್ವವಾದುವು. ಅಮೆರಿಕಾದಲ್ಲಿ ನವರಾಷ್ಟ್ರಸ್ಥಾಪನೆಯ ಕಾರ್ಯಗಳು ಭರದಿಂದ ನಡೆಯುತ್ತಿದ್ದಾಗ, ಎಂಭತ್ತು ವರ್ಷಗಳ ವೃದ್ಧನಾಗಿದ್ದರೂ ಆತನು ನವತರುಣನಂತೆ ಉತ್ಸಾಹಿಯಾಗಿ ತನ್ನ ಪಾಲಿಗೆ ಬಂದ ಕಾರ್ಯಗಳನ್ನು ಶ್ರದ್ಧೆ ಚಟುವಟಿಕೆಗಳಿಂದ ನೆರವೇರಿಸುತ್ತಿದ್ದನು. ಸ್ವಾತಂತ್ರ್ಯಪ್ರಿಯನಾದ ಆತನು, ರಾಷ್ಟ್ರಸಭೆಯವರು ವಹಿಸಿದ್ದ ದೇಶಪಾಲನಾಕಾರ್ಯವು, ಪ್ರಜಾಸಮ್ಮತವಾದುದಾಗಿ ಸಕಲರಿಗೂ ಸುಖದಾಯಕವಾಗಿರಬೇಕೆಂದು ನಿಶ್ಚಯಿಸಿ ಆವಶ್ಯಕವೆನ್ನಿಸಿದ ಸಕಲ ಸುಧಾರಣೆಗಳನ್ನೂ ಮಾಡಲು ಕಾರಣವೆನ್ನಿಸಿದನು. ಅಂತಹ ವೃದ್ಧಾಪ್ಯದಲ್ಲೂ ಹಲವು ಸಂಸ್ಥೆಗಳಿಗೆ ಅಧ್ಯಕ್ಷನಾಗಿ, ತನ್ನ ಪಕ್ವಾನುಭವಗಳ ಮೂಲಕ ಅನೇಕಾನೇಕ ಕಾರ್ಯಗಳನ್ನು ಸಫಲಗೊಳಿಸುತ್ತಿದ್ದನು. ಆತನನ್ನು ಅಮೆರಿಕದ ಪ್ರೆಸಿಡೆಂಟ್ ಪದವಿಗೆ ಚುನಾಯಿಸಲೂ ಪ್ರಜೆಗಳು ಸಮ್ಮತಿಸಿದ್ದರು. ಆದರೆ ಆತನ ವೃದ್ಧಾಪ್ಯವೂ, ಜಾರ್ಜ್ ವಾಷಿಂಗ್‌ಟನ್ ಎಂಬ ರಣವೀರನಮೇಲೆ ಜನರಿಗಿದ್ದ ಅಗಾಧ ಪ್ರೀತಿವಿಶ್ವಾಸಗಳೂ ಅದನ್ನು ತಪ್ಪಿಸಿದುವು. ಸ್ವಾತಂತ್ರ್ಯಸಾಧನೆಗಾಗಿಯೇ ದೇಹವನ್ನು ತೇಯ್ದಿದ್ದ ಆತನಿಗೆ ಅಮೆರಿಕಾದೇಶೀಯರ ಹೃದಯಪೀಠದಲ್ಲೇ ಅಧ್ಯಕ್ಷಸ್ಥಾನವೇರ್ಪಟ್ಟಿದ್ದಿತು.

ಪರೋಪಕಾರವನ್ನೇ ಜನ್ಮದ ಅತಿಮುಖ್ಯ ಕಾರ್ಯವೆಂದು ತಿಳಿದಿದ್ದ ಆ ಮಹನೀಯನು, ಅಮೆರಿಕಾದೇಶದಲ್ಲಿ ಆಗ ವಿಶೇಷವಾಗಿದ್ದ ಗುಲಾಮರ ವ್ಯಾಪಾರವನ್ನು ನಿಲ್ಲಿಸಲೂ ಪ್ರಯತ್ನಿಸಿದ್ದನು. ಆದರೆ ಆ ಕಾಲದಲ್ಲಿ

ಲೋಕಮತವು ಇನ್ನೂ ಸಿದ್ಧಗೊಳಿಸಲ್ಪಟ್ಟಿರಲಿಲ್ಲವಾದುದರಿಂದ ಅದು ಸಫಲವಾಗಲಿಲ್ಲ. ಹೀಗೆ ಪರೋಪಕೃತಿಯಲ್ಲೇ ತನ್ನ ಆಯುಃಕಾಲವನ್ನೆಲ್ಲ ಕಳೆದು ತನ್ನ ದೇಶೀಯರಿಗೆ ಮಹೋಪಕಾರಮಾಡಿದ ಈ ಮಹಾಶಯನು ವೃದ್ಧಾಪ್ಯದಲ್ಲಿ ದೇಹದಲ್ಲಿ ವ್ಯಾಪಿಸಿದ ವಾತರೋಗಾದಿಗಳಿಂದ ಕೆಲಕಾಲ ನರಳಿ ೧೭೯೦ನೆಯ ಏಪ್ರಿಲ್ ೧೭ನೆಯ ದಿನದಲ್ಲಿ ತನ್ನ ಸ್ವಗೃಹದಲ್ಲಿ ಭೌತಿಕ ಕಳೇಬರವನ್ನು ತ್ಯಜಿಸಿ ಪುಣ್ಯಲೋಕಗಳನ್ನು ಕುರಿತು ಗಮಿಸಿದನು.

ಭವ್ಯಾಕೃತಿಯ ಬೆಂಜಮಿನ್ನನ ಆಜಾನುಬಾಹು ದೇಹವು ಆತನ ಕಷ್ಟ ಸಹಿಷ್ಣುತೆ, ಪರೋಪಕಾರ, ನಿಷ್ಕಲ್ಮಷ ಜೀವನ ಮುಂತಾದುವುಗಳಿಗೆ ಯೋಗ್ಯ ಉದಾಹರಣೆಯೆನ್ನಿಸಿರಲು, ಆತನ ವಿಶಾಲವೂ ದಯಾಸೂಚಕವೂ ಆದ ಮುಖವು ಆತನ ನಿಷ್ಕಾಪಟ್ಯ ಶಾಂತಿ, ಸ್ನೇಹಪರತೆ, ವಿಚಾರ ಪೂರ್ಣಭಾವ ಮುಂತಾದುವನ್ನು ಪ್ರದರ್ಶಿಸಲು ಕೈಗನ್ನಡಿಯಂತಿದ್ದಿತು. ಮಿತಭಾಷಿಯೂ ಉಚಿತಜ್ಞನೂ, ಪ್ರಾಜ್ಞನೂ ಆದ ಆ ಮಹನೀಯನು ವೃದ್ಧಾಪ್ಯದಲ್ಲೂ ತನ್ನ ತೀಕ್ಷ್ಣಮತಿ, ಚಿತ್ತಶಾಂತತೆ, ಸೌಜನ್ಯ, ಅವ್ಯಾಕುಲಿತಚಿತ್ತ ಮುಂತಾದ ಸೌಭಾಗ್ಯಗಳನ್ನು ಗಳಿಸಿದ್ದು, ನಿಷ್ಕಲ್ಮಷ ಚರಿತ್ರೆಯನ್ನು ಕಾಪಾಡಿಕೊಂಡು ಜೀವಿಸಿದವರಿಗೆ ಮರಣಕಾಲವು ಎಷ್ಟು ಭಯರಹಿತವಾಗಿರಬಲ್ಲದು ಎಂಬುದನ್ನು ಪ್ರದರ್ಶಿಸುವಂತಿದ್ದನು.

ಯಾವ ಮಹನೀಯನು ದರಿದ್ರನಾಗಿ ಜನಿಸಿ, ಚಿಕ್ಕಂದಿನಲ್ಲೇ ಕ್ರಮವಿದ್ಯಾಭ್ಯಾಸದ ಯೋಗವಿಲ್ಲದಿದ್ದಾಗ್ಯೂ ಸ್ವಪರಿಶ್ರಮ, ಕಷ್ಟಸಹಿಷ್ಣುತೆ, ಸೌಜನ್ಯ, ಮೃದುಭಾಷಣ, ಸತ್ಯಧರ್ಮನ್ಯಾಯಪರತೆ, ಸದಾ ಪರೋಪಕಾರತತ್ಪರತೆ, ನಿಷ್ಕಾಪಟ್ಯ, ದಯಾಮಮತೆಗಳು, ದೇಶಾಭಿಮಾನ, ಭಕ್ತಿಶ್ರದ್ಧಾದಿಗಳು, ಪ್ರತ್ಯುತ್ಪನ್ನಮತಿ ಮುಂತಾದ ಅಮೌಲ್ಯ ಗುಣನಡತೆಗಳ ಫಲವಾಗಿ ತನ್ನ ಜೀವಿತಕಾಲದಲ್ಲಿ ಅದ್ವಿತೀಯ ವ್ಯಕ್ತಿಯೆನ್ನಿಸಿ ದೇಶಾಂತರ ಖಂಡಾಂತರಗಳಲ್ಲೂ ಶಾಶ್ವತವಾದ ಯಶಸ್ಸಂಪದವನ್ನು ಗಳಿಸಿದನೋ, ಆ ಬೆಂಜಮಿನ್ ಫ್ರಾಂಕ್ಲಿನ್ನನ ಈ ಜೀವಿತವೂ ಆತನ ಗುಣನಡತೆಗಳೂ ಭಾರತೀಯ ಬಾಲಕರಿಗೂ ಆದರ್ಶಗಳಾಗಿದ್ದು ಅವರಲ್ಲೂ ಮೇಲ್ಕಂಡ

ಸದ್ಗುಣ ಸನ್ನಡತೆಗಳೂ ಮಾಡಿ, ಅವರೂ ಸುಗುಣಶಿರೋಮಣಿಗಳೂ, ದೇಶೋದ್ಧಾರಕರೂ, ಸ್ವಾತಂತ್ರ್ಯಪ್ರಿಯರೂ ಆಗುವಂತೆ ಸರ್ವಲೋಕೇಶ್ವರನಾದ ಪರಮೇಶ್ವರನು ಅನುಗ್ರಹಿಸಲಿ—

ತಥಾಸ್ತು.



|| ಶ್ರೀರಾಮಸಹಾಯಂ ||

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

ಮಹಾನುಭಾವರಾದ ಪಾಂಡವರ ವಂಶದಲ್ಲಿ ಜನಿಸಿ ಪರಮಧಾರ್ಮಿಕನಾಗಿ ರಾಜ್ಯಭಾರಮಾಡಿದ ಪುಣ್ಯಶೀಲನು ನಮ್ಮ ಪ್ರಕೃತ ಕಥಾನಾಯಕನಾದ ಜನಮೇಜಯಮಹಾರಾಯನು. ಈತನ ತಂದೆಯಾದ ಪರೀಕ್ಷಿನ್ಮಹಾರಾಜನು ಋಷಿಶಾಪದಿಂದ ಸರ್ಪದಷ್ಟನಾಗಿ ಮೃತನಾಗಲು, ಮಹಾದಾರುಣವಾದ ಆ ವೃತ್ತಾಂತವನ್ನು ಕೇಳಿ ಕೋಪಾಕ್ರಾಂತನಾದ ಈತನು, ಅನ್ಯಾಯವಾಗಿ ಛಲಗೊಂಡು, ತನ್ನ ತಂದೆಯನ್ನು ಸಂಹರಿಸಿದ ತಕ್ಷಕನನ್ನೂ ಅವನ ವಂಶವನ್ನೂ ನಿರ್ಮೂಲಗೊಳಿಸಬೇಕೆಂದು ಹಟತೊಟ್ಟು ಸರ್ಪಯಾಗವೆಂಬೊಂದು ಅಭೂತಪೂರ್ವಯಾಗವನ್ನು ರಚಿಸಿ, ಅದರ ಮೂಲಕ ಅನೇಕ ಸರ್ಪಕುಲಗಳನ್ನೇ ಅಗ್ನಿಗೆ ಆಹುತಿಯನ್ನಾಗಿಸಿದನು. ಸರ್ಪಯಾಗ ಕಥಾನಕವೂ ಅದಕ್ಕೆ ಕಾರಣಗಳೂ, ಶ್ರೀಮನ್ಮಹಾಭಾರತದಲ್ಲಿ ವಿಪುಲವಾಗಿ ಹೇಳಲ್ಪಟ್ಟಿವೆ. ಅವುಗಳನ್ನು ಆದ್ಯಂತವಾಗಿ ಹೇಳಲು ಇಲ್ಲಿ ಎಡೆಯಿಲ್ಲವಾದರೂ, ಕಥೆಗೆ ಸಂಬಂಧಪಟ್ಟಷ್ಟುಮಟ್ಟಿಗೆ ಸಂಗ್ರಹವಾಗಿ ಕೊಡಲಾಗುತ್ತದೆ.

'ಜನಮೇಜಯಮಹಾರಾಜನು ಶಪಥಪೂರ್ವಕವಾಗಿ ಪ್ರಯತ್ನಿಸಿ ಮಾಡಿದ ಸರ್ಪಯಾಗದಿಂದ ಸರ್ಪಕುಲವು ಹಾಗೆ ನಾಶವಾಗಿದ್ದರೆ, ಏಕೆ, ಈಗಲೂ ಸರ್ಪಬಾಧೆಯು ಲೋಕದಲ್ಲಿ ತಪ್ಪಿಲ್ಲವಲ್ಲ: ಇನ್ನೂ ಅಸಂಖ್ಯ ಸಂಖ್ಯೆಯ ಸರ್ಪಗಳಿಂದ ಮೃತರಾದವರ ಶೋಚನೀಯ ಕಥೆಗಳನ್ನು ಕೇಳುತ್ತಿರುವೆವಲ್ಲ – ಆದುದರಿಂದ ಈ ಪೌರಾಣಿಕ ಕಥೆಯು ಕಲ್ಪಿತವಾದುದಾಗಿರಬೇಕು, ಆದುದರಿಂದ ನಂಬಲನರ್ಹವಾದುದು' ಎಂದು ಹಲವರಿಗೆ ತೋರ

ಬಹುದು. ಆದರೆ ಈಗಲೂ ಸರ್ಪಗಳಿವೆಯೆಂಬ ಕಾರಣದಿಂದ - ಭಾರತೋಕ್ತವಾದ ಸರ್ಪಯಾಗವೇ ಸುಳ್ಳೆಂದು ಹೇಳಲಾಗದು. ಸರ್ಪಕುಲವು ಈಗಲೂ ದೃಷ್ಟಿಗೋಚರವಾಗುತ್ತಿರುವುದಕ್ಕೆ ಕಾರಣವೂ ಯಾಗ ನಡೆಯುತ್ತಿದ್ದ ಆ ಕಾಲದಲ್ಲೇ ಹುಟ್ಟಿತೆಂದು ಹೇಳಲ್ಪಟ್ಟಿದೆ. ತಕ್ಷಕನ ಬಂಧುವಾದ ಆಸ್ತಿಕನೆಂಬೊಬ್ಬ ಬ್ರಾಹ್ಮಣ ವಟುವು ತಕ್ಷಕನು ಪೂರ್ಣಾಹುತಿಯಾಗಿ ಬೀಳುವುದಕ್ಕೆ ಸ್ವಲ್ಪಕಾಲ ಮುಂಚಿತವಾಗಿಯೇ ಯಾಗಶಾಲೆಯನ್ನು ಹೊಕ್ಕು ಜನಮೇಜಯನನ್ನು ಪ್ರಾರ್ಥಿಸಿ ಸರ್ಪಯಾಗವನ್ನು ಅಷ್ಟಕ್ಕೇ ನಿಲ್ಲಿಸುವಂತೆ ವರಪಡೆದಿದ್ದನು. ಆವರೆಗೆ ಹೋಮಾಗ್ನಿಗೆ ಆಹುತಿಯಾಗಿ ಅಳಿದ ಸರ್ಪಗಳು ಹೋಗಲಾಗಿ ಮಿಕ್ಕವುಗಳು ವೃದ್ಧಿಯಾಗಿ ಬೆಳೆದು ಬಂದು, ಇಂದು ಸರ್ಪಗಳು ಅಧಿಕ ಸಂಖ್ಯೆಯಿಂದ ಕಾಣುತ್ತಿದ್ದರೆ ಅವರಲ್ಲಿ ಆಶ್ಚರ್ಯವೇನಿದೆ?

ಜನಮೇಜಯರಾಯನು ಸರ್ಪಯಾಗ ನಡೆಸಿ ಅಧಿಕಾಧಿಕವಾಗಿದ್ದ ಸರ್ಪಕುಲಗಳನ್ನು ಯಥಾಯೋಗ್ಯ ನಾಶಗೊಳಿಸಿ, ಅವುಗಳ ಬಾಧೆಯಿಂದ ಲೋಕಕ್ಕೆ ಉಂಟಾಗುತ್ತಿದ್ದ ಆಪತ್ತನ್ನು ಕಡಮೆಮಾಡಿದ ಉಪಕಾರಕ್ಕಿಂತಲೂ ಮತ್ತೊಂದು ಮಹೋಪಕಾರವು ಆತನಿಂದ ಲೋಕಕ್ಕೆ ಆಗಿದೆ ಈ ಸರ್ಪಯಾಗ ನಡೆದ ಸಂದರ್ಭದಲ್ಲೇ, ಶ್ರೀ ವೇದವ್ಯಾಸರು ತಾವು ರಚಿಸಿದ್ದ ಶ್ರೀಮನ್ಮಹಾಭಾರತ ಗ್ರಂಥವನ್ನು ತಮ್ಮ ಶಿಷ್ಯರಾದ ವೈಶಂಪಾಯನ ಮುನೀಶ್ವರರ ಮೂಲಕ ಈತನನ್ನುದ್ದೇಶಿಸಿ ಲೋಕಕ್ಕೆ ಬೋಧಿಸಿದ್ದಾರೆ. ಸರ್ಪದಷ್ಟನಾಗಿ ಏಳುದಿನಗಳಲ್ಲಿ ಮೃತನಾಗಲೆಂದು ಶಾಪಹೊಂದಿದ ಜನಮೇಜಯನ ತಂದೆಯಾದ ಪರೀಕ್ಷಿದ್ರಾಜನು ಶ್ರೀ ಶುಕಾಚಾರ್ಯರಿಂದ ಶ್ರವಣಮಾಡಿದ ವ್ಯಾಜದಿಂದ ಶ್ರೀಮದ್ಭಾಗವತ ಸುಧಾರಸವೂ, ಸರ್ಪಯಾಗವನ್ನು ನಿಲ್ಲಿಸಿದ ತರುವಾಯ, ಬಂದು ತನಗೆ ದರ್ಶನವನ್ನಿತ್ತ ಶ್ರೀ ವೇದವ್ಯಾಸರನ್ನು ಕುರಿತು ಜನಮೇಜಯಮಹಾರಾಜನು ತನ್ನ ಮುತ್ತಾತಂದಿರಾದ ಪಾಂಡವರ ಪುಣ್ಯಚರಿ[illegible] ತಿಳಿಸಬೇಕೆಂದು ಪ್ರಾರ್ಥಿಸಿದ ವ್ಯಾಜದಿಂದ ಶ್ರೀಮನ್ಮಹಾಭಾರತ ಕಥಾಸುಧಾರಸವೂ ಭಾರತ ಜನಾಂಗಕ್ಕೆ ಲಭ್ಯವಾಗಲು ಅವಕಾಶವಾಯಿತು.

ಶ್ರೀಮನ್ಮಹಾಭಾರತವು ಪುರಾಣ ರೀತಿಯಲ್ಲಿ, ಭಾರತೀಯರಿಗೆ ಆಸ್ತಿಕತೆ, ಭಕ್ತಿಜ್ಞಾನವೈರಾಗ್ಯಾದಿಗಳು, ಧರ್ಮಸೂಕ್ಷ್ಮಗಳು, ನೀತಿನಡತೆಗಳು ಮುಂತಾದವುಗಳನ್ನು ಬೋಧಿಸತಕ್ಕುದಾಗಿದ್ದರೂ, ಅದರ ಪ್ರಯೋಜನವು ಅಷ್ಟುಮಾತ್ರವೆಂದೇ ತಿಳಿಯಬಾರದು. ಅದು ಹಲವು ವಿಧ ರಾಜನೀತಿಗಳು. ಲೋಕನೀತಿಗಳು, ಅರ್ಥಶಾಸ್ತ್ರವಿಚಾರಗಳು, ಆಗಿದ್ದ ರಾಜ್ಯಭಾರಸ್ಥಿತಿ, ಜನಾಂಗದ ನಾಗರಿಕತೆ ಮುಂತಾದ ಸಕಲ ವಿಷಯಗಳನ್ನೂ ತಿಳಿಸುವಲ್ಲಿ ಕೈಗನ್ನಡಿಯಂತಿದೆ. ಈ ರೂಪದಿಂದ ಅದನ್ನು ಅದ್ವಿತೀಯ ಐತಿಹಾಸಿಕ ಗ್ರಂಥವೆಂದರೆ ಅದರಲ್ಲಿ ಅತಿಶಯೋಕ್ತಿಯಿಲ್ಲ. ಧಾರ್ಮಿಕ ದೃಷ್ಟಿಯಿಂದ ಆ ಗ್ರಂಥರತ್ನವನ್ನು 'ಭಾರತಃ ಪಂಚಮೋವೇದಃ' ಎಂದು ಪ್ರಾಜ್ಞರು ಗೌರವಿಸಿದ್ದಾರೆ. ಆದ್ಯಂತ ಜನಾಂಗಕ್ಕೇ ಸಕಲ ಪ್ರಾಪಂಚಿಕ ಪಾರಮಾರ್ಥಿಕ ವಿಚಾರಗಳಲ್ಲೂ ಅದ್ವಿತೀಯ ಬೋಧಪ್ರದಸಾಧನವೆಂದರೆ, ಶ್ರೀಮನ್ಮಹಾಭಾರತವನ್ನು ಬಿಟ್ಟರೆ ಮತ್ತೊಂದು ಶ್ರೇಷ್ಠಗ್ರಂಥವು ದೊರೆಯಲಾರದು. ನವರಸಭರಿತವಾದ ವರ್ಣನೆಗಳಿಂದಲೂ, ಸಕಲ ವಿಧ ಲೌಕಿಕಾನುಭವಗಳನ್ನೂ ವಿಸ್ತರಿಸಿ ವಿವರಿಸಿರುವ ನೂರಾರು ಕಥೋಪಕಥೆಗಳಿಂದಲೂ ಮಹಾಭಾರತ ಗ್ರಂಥವು ಸರ್ವಮಾನ್ಯವೆನ್ನಿಸಿರುವುದು.

ಈ ಮಹಾ ಗ್ರಂಥದಲ್ಲಿ ವಿಸ್ತಾರವಾಗಿ ಹೇಳಿರುವ ಸರ್ಪಯಾಗ ಕಥಾವೃತ್ತಾಂತವನ್ನೂ, ತತ್ಕರ್ತೃವಾದ ಜನಮೇಜಯಮಹಾರಾಜನ ವೃತ್ತಾಂತವನ್ನೂ ಈ ಮುಂದಿನ ಪುಟಗಳಲ್ಲಿ ಯಥಾಯೋಗ್ಯವಾಗಿ ಸಂಗ್ರಹಿಸಿ ಕೊಡಲಾಗುತ್ತದೆ. ಗ್ರಂಥಮಾಲಾಭಿಮಾನಿಗಳು, ಎಂದಿನಂತೆಯೇ ಇದನ್ನೂ ಸ್ವೀಕರಿಸಿ ಗ್ರಂಥಮಾಲೆಯನ್ನು ಪ್ರೋತ್ಸಾಹಿಸಬೇಕಾಗಿ ಪ್ರಾರ್ಥನೆ.

ತಾ. ೨೯—೮—೩೨
ಬೆಂಗಳೂರು ನಗರ

ಇತಿ ಸುಜನ ವಿಧೇಯ



ಶ್ಲೋ॥ ಜರಾತ್ಕಾರೋಜರಾತ್ಕಾರ್ವಾಂ ಸಮುತ್ಪನ್ನೋ ಮಹಾಯಶಾಃ ।
ಆಸ್ತೀಕಸ್ಸತ್ಯಸಂಧೋ ಮಾಂ ಪನ್ನಗೇಭ್ಯೋಭಿರಕ್ಷತು ॥೧॥

,, ಸರ್ಪಾಪಸರ್ಪಭದ್ರಂತೆ ಗಚ್ಛ ಸರ್ಪವನಾಂತರಂ ॥
ಜನಮೇಜಯಸ್ಯ ಯಜ್ಞಾಂತೆ ಆಸ್ತೀಕವಚನ ಸ್ಮರಾಃ ॥೨॥

,, ಆಸ್ತೀಕವಚನಂಶ್ರುತ್ವಾ ಯಸ್ಸರ್ಪೋನನಿವರ್ತತೆ ॥
ಶತಧಾಭಿದ್ಯತೇಮೂರ್ಧಾ ಶಿಂಶುವೃಕ್ಷಫಲಂಯಥಾ ॥೩॥

,, ಅಸಿತಂಚಾರ್ತಿಮಂತಂಚ ಸುಸಿದ್ಧಂವಾಪಿಯಸ್ಸ್ಮರೇತ್ ॥
ದಿವಾವಾಯು ದಿವಾರಾತ್ರೌ ನಾಸ್ತ್ಯಸರ್ಪಭಯಂ ಭವೇತ್ ॥೪॥

ಆದಿಪರ್ವ—(ಮಹಾಭಾರತ)

|| ಶ್ರೀರಾಮ ಸಹಾಯಂ ||

## ಸರ್ಪಯಾಗ ಧುರೀಣನಾದ

# ಶ್ರೀ ಜನಮೇಜಯ ಮಹಾರಾಜ

## ಅಧ್ಯಾಯ ೧ 'ಪರೀಕ್ಷಿನ್ಮಹಾರಾಜನ ದುರಂತಶಾಪ'

ನಮ್ಮ ಮಾತೃಭೂಮಿಯಾದ ಈ ಭಾರತದೇಶದ ಸುಕೃತವಿಶೇಷವನ್ನು ಎಷ್ಟೆಂದು ವರ್ಣಿಸಬಹುದು! ಪುರಾಣಕಾಲದಲ್ಲಿ ಈ ಪುಣ್ಯಭೂಮಿಯನ್ನು ಅನೇಕಮಂದಿ ನರವೀರರು ಧರ್ಮದಿಂದ ಪಾಲಿಸಿ, ಪೃಥ್ವಿಯಲ್ಲಿ ಇದಕ್ಕೆ ಧರ್ಮಕ್ಷೇತ್ರವೆಂಬ ಕೀರ್ತಿಯನ್ನು ದೊರಕಿಸಿಕೊಟ್ಟಿರುವರು. ಹಾಗೆ ಧರ್ಮದಿಂದ ರಾಜ್ಯಪಾಲನೆ ಮಾಡಿದ ರಾಜಶ್ರೇಷ್ಠರಲ್ಲಿ ಪಾಂಡುಪುತ್ರನಾದ ಯುಧಿಷ್ಠಿರನೂ ಒಬ್ಬಾತನು. ಈ ರಾಜವರೇಣ್ಯನು, ಅಸಹಾಯಶೂರರಾದ ಭೀಮ ಅರ್ಜುನ ನಕುಲ ಸಹದೇವರೆಂಬ ನಾಲ್ಕುಮಂದಿ ತಮ್ಮಂದಿರಿಂದಲೂ ಸತೀ ಶಿರೋಮಣಿಯಾದ ದ್ರೌಪದೀದೇವಿಯಿಂದಲೂ ಕೂಡಿ, ದಾಯಾದಿಗಳಾದ ಕೌರವರಿಂದ ಕಪಟದ್ಯೂತ, ಅರಣ್ಯವಾಸ, ಅಜ್ಞಾತವಾಸ ಮುಂತಾದ ಹೇಳಗಲಾಗದ ಅಗಾಧ ಕಷ್ಟನಷ್ಟಗಳನ್ನನುಭವಿಸಿ, ಕೊನೆಗೆ ಆ ದುರುಳನು ಭಗವಾನ್ ಶ್ರೀ ಕೃಷ್ಣನ ಮತ್ತು ಭೀಷ್ಮ ದ್ರೋಣಾದಿ ಇತರ ಸತ್ಪುರುಷರ ಸಾಮವಾಕ್ಯಗಳನ್ನು ನಿರಾಕರಿಸಿ ಯುದ್ಧದಿಂದಲ್ಲದೆ ಪಾಂಡವರಿಗೆ ಸೂಜೀ ಮೊನೆಯನ್ನೂರುವಷ್ಟು ಭೂಮಿಯನ್ನೂ ಕೊಡಲಾರೆನೆಂದು ಹಟವನ್ನು ಸಾಧಿಸಲಾಗಿ, ಯುದ್ಧಕ್ಕೆ ಸಿದ್ಧನಾದನು. ಕೌರವ ಪಾಂಡವರಿಗೆ ಕುರುಕ್ಷೇತ್ರದಲ್ಲಿ ನಡೆದ ಯುದ್ಧವು ಭಯಂಕರವಾದುದು. ಆ ಯುದ್ಧದಲ್ಲಿ ಭರತಖಂಡದ ಸಕಲ ರಾಜಲೋಕವೂ ಭಾಗವಹಿಸಿದ್ದಿತು. ಪಾಂಡವರ ಪಕ್ಷದಲ್ಲಿ ಏಳು *ಅಕ್ಷೋಹಿಣೀ ಸೇನೆಯೂ,

* ಒಂದು ರಥ ಒಂದು ಆನೆ ಮೂರು ಕುದುರೆಗಳು ಐದು ಕಾಲಾಳುಗಳು ಸೇರಿದರೆ ಅದಕ್ಕೆ ಪತ್ತಿ ಎಂದು ಹೆಸರು. ಪತ್ತಿಯು ಮುಮ್ಮಡಿ

ಕೌರವರ ಪಕ್ಷದಲ್ಲಿ ಹನ್ನೊಂದು ಅಕ್ಷೋಹಿಣೀ ಸೇನೆಯೂ ನೆರೆಯಿತು. ಪಾಂಡವರ ಸೇನೆಗೆ ದ್ರುಪದತನುಜನಾದ ಧೃಷ್ಟದ್ಯುಮ್ನನೂ ಕೌರವ ಸೈನ್ಯಕ್ಕೆ ಭೀಷ್ಮಾಚಾರ್ಯರೂ ನಾಯಕರಾಗಿ ನಿಯಮಿತರಾದರು. ಹೀಗೆ ಭಯಂಕರವಾಗಿ ಆರಂಭವಾದ ಯುದ್ಧವು ಮಹಾ ಭೀಕರವಾಗಿ ನಡೆದು ಹದಿನೆಂಟು ದಿನಗಳೊಳಗಾಗಿ ಅಂತ್ಯವಾಯಿತು. ಅಷ್ಟು ಸ್ವಲ್ಪ ಕಾಲದೊಳಗಾಗಿಯೇ ಮೇಲ್ಕಂಡಂತೆ ಭೂಮಿ ಹಿಡಿಸದಂತೆ ಬಂದು ನೆರೆದಿದ್ದ

ಯಾದರೆ ಅದಕ್ಕೆ ಸೇನಾಮುಖವೆಂದು ಹೆಸರು. ಮೂರು ಸೇನಾಮುಖಗಳಿಗೆ ಗುಲ್ಮವೆಂದೂ, ಮೂರು ಗುಲ್ಮಗಳಿಗೆ ಗಣವೆಂದೂ ಸಂಜ್ಞೆಯಿರುವುದು. ಇಂತಹ ಮೂರು ಗಣಗಳು ವಾಹಿನಿಯೆಂದೂ, ವಾಹಿನಿಯು ಮುಮ್ಮಡಿಯಾದರೆ ಪೃತನೆಯೆಂದೂ ಅಂತಹ ಮೂರು ಪೃತನೆಗಳಿಗೆ ಚಮೂ ಎಂದೂ ಹೇಳುವರು. ಚಮೂ ಎಂಬುವುದು ಮುಮ್ಮಡಿಯಾದರೆ ಅನೀಕಿನಿಯೆಂದೂ, ಅಂತಹ ಅನೀಕಿನಿಯುನ್ನು ಹತ್ತುಮಡಿ ಹೆಚ್ಚಿಸಿದರೆ ಅದಕ್ಕೆ ಅಕ್ಷೋಹಿಣೀ ಎಂದೂ ವ್ಯವಹಾರವಿರುವುದು. ಒಟ್ಟಿನಲ್ಲಿ ಒಂದು ಅಕ್ಷೋಹಿಣಿಯಲ್ಲಿ ಇಪ್ಪತ್ತೊಂದು ಸಾವಿರದ ಎಂಟುನೂರ ಎಪ್ಪತ್ತು ರಥಗಳು, ಅಷ್ಟೇ ಆನೆಗಳು, ಅರವತ್ತೈದು ಸಾವಿರದ ಆರುನೂರ ಹತ್ತು ಕುದುರೆಗಳು, ಮತ್ತು ಒಂದು ಲಕ್ಷ ಒಂಬತ್ತುಸಾವಿರದ ಮುನ್ನೂರ ಐವತ್ತು ಕಾಲಾಳುಗಳು. ಹೀಗೆ ಸೇರಿದ ಎರಡು ಲಕ್ಷದ ಹದಿನೆಂಟು ಸಾವಿರದ ಏಳುನೂರು ಚತುರಂಗಬಲಕ್ಕೆ ಅಕ್ಷೋಹಿಣೀ ಎಂಬ ಹೆಸರಿದ್ದಿತು. ಒಟ್ಟು ಭಾರತ ಯುದ್ಧದಲ್ಲಿ ನೆರೆದ ಚತುರ್ಬಲವು ಈ ಕೆಳಗೆ ಬರೆವಂತೆ ಇದ್ದಿತು.

| | ಕೌರವರ ಕಡೆ | ಪಾಂಡವರ ಕಡೆ | ಮೊತ್ತ |
|---|---|---|---|
| ರಥಗಳು | ೨೪೦೫೭೦ | ೧೫೩೦೯೦ | ೩೯೩೬೬೦ |
| ಆನೆಗಳು | ೨೪೦೫೭೦ | ೧೫೩೦೯೦ | ೩೯೩೬೬೦ |
| ಕುದುರೆಗಳು | ೭೨೧೭೧೦ | ೪೫೯೨೭೦ | ೧೧೮೦೯೮೦ |
| ಕಾಲಾಳುಗಳು | ೧೨೦೨೮೫೦ | ೭೬೫೪೫೦ | ೧೯೬೮೩೦೦ |
| | ೨೪೦೫೭೦೦ | ೧೫೩೦೯೦೦ | ೩೯೩೬೬೦೦ |

ಅಗಾಧ ಚತುರ್ಬಲವು ಭೂಗತವಾಗಿ, ಯುದ್ಧವು ಕೊನೆಗಂಡಿತು. ರಕ್ತವು ಕುರುಕ್ಷೇತ್ರದಲ್ಲಿ ಹೊಳೆಯಾಗಿ ಹರಿಯಿತು. ಹಸ್ತಿ ಅಶ್ವ ಪದಾತಿಗಳ ಶವಗಳು ಪರ್ವತೋಪಮವಾಗಿ ಬಿದ್ದು ರಣಭೂಮಿಯು ನೋಡಲು ಭಯಂಕರವೆನ್ನಿಸಿತು. ಮಜ್ಜೆಮಾಂಸ ನೆಣರಕ್ತಾದಿಗಳಿಂದ ಕುರುಕ್ಷೇತ್ರದ ನೆಲವು ಕೆಸರಾಯಿತು ಛಲಗಾರನಾಗಿ, ಯಾವ ವಿಧವಾದ ಸಾಮೋಪಾಯಕ್ಕೂ ಬಗ್ಗದೆ ಸಾತ್ವಿಕರಾದ ಪಾಂಡವರನ್ನು ಅತಿಶಯವಾಗಿ ದ್ವೇಷಿಸಿದ ದುರ್ಯೋಧನನು ಪುತ್ರಮಿತ್ರ ಬಾಂಧವರೊಂದಿಗೂ ಪರಿವಾರದೊಂದಿಗೂ ಮಡಿದು ರಣಭೂಮಿಯಲ್ಲಿ ಬಿದ್ದನು. ಧರ್ಮಾತ್ಮನಾದ ಯುಧಿಷ್ಠಿರನಿಗೆ ಈ ದೃಶ್ಯವು ವಿಶೇಷ ಪಾಶ್ಚಾತ್ತಾಪವನ್ನುಂಟುಮಾಡಿತು. ಆದರೆ ಮಾಡತಕ್ಕುದೇನು ? ಆತನು ಭೂಭಾರಹರಣೋದ್ದೇಶದಿಂದಲೇ ಅವತಾರಮಾಡಿದ ಭಗವಾನ್ ಶ್ರೀ ಕೃಷ್ಣನ ಕೈ ಬೊಂಬೆಯಾಗಿ, ಕ್ಷಾತ್ರಧರ್ಮಪರಿಪಾಲನೆಗಾಗಿ ಯುದ್ಧಮಾಡಬೇಕಾಗಿ ಬಂದುದರಿಂದ ವಿಧಿಯಿಲ್ಲದೆ, ಈ ದುರಂತ ಕರ್ಮವನ್ನು ಮಾಡಿಯೇ ತೀರಬೇಕಾಯಿತು. ಯುದ್ಧವು ಮುಗಿದ ತರುವಾಯ, ಧರ್ಮಜನು ಶ್ರೀ ಕೃಷ್ಣಸ್ವಾಮಿಯ ಆಜ್ಞೆಯಿಂದ ಹಸ್ತಿನಾವತಿಗೆ ಪ್ರಯಾಣಮಾಡಿ, ಅಲ್ಲಿ ಪರಂಪರಾಗತವಾದ ರಾಜಸಿಂಹಾಸನವನ್ನೇರಿ ನಾಲ್ವರು ತಮ್ಮಂದಿರೂ ಓಲಗಿಸಲು ದ್ರೌಪದೀದೇವಿಯೊಂದಿಗೆ ಪಟ್ಟಾಭಿಷಿಕ್ತನಾದನು. ಅಸಹಾಯಶೂರರೂ, ಲೋಕೈಕವೀರರೂ ಆದ ಭೀಮಾರ್ಜುನಾದಿ ತಮ್ಮಂದಿರು ಸಹಾಯಕರಾಗಿರಲು ಧರ್ಮರಾಜನು ಮುಂದೆ ಮೂವತ್ತಾರು ವರ್ಷಕಾಲ ಧರ್ಮದಿಂದ ರಾಜ್ಯಭಾರಮಾಡಿ, ದೇಶದಲ್ಲಿ ಸರ್ವತ್ರ ಶಾಂತಿಸ್ಥಾಪನೆ ಮಾಡಿದನು. *ಯುಧಿಷ್ಠಿರ ನರೇಶ್ವರನಾಳುತ್ತಿದ್ದ ಆ ಕಾಲದಲ್ಲಿ

---

* ಬಳಿಕ ನೃಪವರ ಯುಧಿಷ್ಠಿರನಾಳ್ವ ದೇಶದೊ
ಳ್ಕಳವು ಕೊಲೆ ಪಾದರಂ ಪುಸಿನುಸುಳು ವೈರಮ
ಟ್ಟುಳಿ ತೋಹು ಬೆದರು ಬೆಜ್ಜರ ಕಪ್ಪುನಿಷ್ಠುರಂ ಗಜರುಗಾವಳಿ ವಿವಾದ
ಮುಳಿಸು ಪೊಲೆಗಲಸು ಮೊರೆ ಸೆರೆ ಕೃತಕ ಕಾರ್ಪಣ್ಯ
ಮಳಿವು ಪಳಿವನ್ಯಾಯ ಮರೆಮೋಸವಾಸಿತ
ಲ್ಲಳ ತಳ ವಿಯೋಗ ಮಲಸಿಕೆ ಕರ್ಕಶಂಗಳಿವು ಮೊಳೆದೋರವೇವೇಳ್ವೆನು

ಆತನ ಆಳ್ವಿಕೆಗೊಳಪಟ್ಟಿದ್ದ ಈ ಭಾರತದೇಶವು ಸಕಲ ಸೌಭಾಗ್ಯಗಳಿಂದಲೂ ಕೂಡಿ ಮನೋಹರವೆನ್ನಿಸಿದ್ದಿತೆಂದು ಮಹಾಕವಿಗಳನೇಕರು ಮುಕ್ತ ಕಂಠದಿಂದ ವರ್ಣಿಸಿದ್ದಾರೆ.

ವೀರ ಕ್ಷತ್ರಿಯ ವಂಶಸಂಭೂತನಾದ ತಾನು, ತನ್ನ ವರ್ಣಧರ್ಮವನ್ನನುಸರಿಸಿ ನ್ಯಾಯ್ಯರೀತಿಯಿಂದ ಪ್ರಾಪ್ತವಾದ ಧರ್ಮಯುದ್ಧದಲ್ಲಿ ಹಿಂದೆಗೆಯದೆ ಕಾದಿ, ದುರುಳರಾದ ಭೂಭಾರಕರನ್ನು ನಿಗ್ರಹಿಸಿ, ತರುವಾಯ ಶಿಷ್ಟರಕ್ಷಣೆಗಾಗಿ ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದುದು ಧರ್ಮಸಮ್ಮತವಾದ ಕಾರ್ಯವಾಗಿದ್ದಿತಾದರೂ, ಅಜಾತ ಶತ್ರುವೆನ್ನಿಸಿದ ಯುಧಿಷ್ಠಿರ ಮಹಾರಾಜನ ಕೋಮಲಾಂತಃಕರಣವು ಮಾತ್ರ, ಭ್ರಾತೃಗಳನ್ನೂ ಸ್ವಜನರನ್ನೂ ಬಾಂಧವರನ್ನೂ ವಧಿಸಿ ಈ ರಾಜ್ಯವನ್ನು ಗಳಿಸಿದೆನಲ್ಲಾ ; ನನ್ನಂತಹ ಪಾಪಾತ್ಮನಾರು, ಎಂದು ಸದಾ ಬೆಂದು ಬೆಂಡಾಗುತ್ತಿದ್ದಿತು. ಹೀಗೆ ಪಶ್ಚಾತ್ತಾಪಾಗ್ನಿಯಲ್ಲಿ ದಹಿಸಲ್ಪಟ್ಟು ನಿರ್ವಿಣ್ಣನಾಗಿದ್ದ ಯುಧಿಷ್ಠಿರ ಮಹಾರಾಜನ ಮನಶ್ಶಾಂತಿಗಾಗಿ ವೇದವ್ಯಾಸರೇ ಮುಂತಾದ ಮುನಿಪುಂಗವರೂ, ಶ್ರೀಕೃಷ್ಣಸ್ವಾಮಿಯೇ ಮುಂತಾದ ಆಪ್ತರೂ, ಅಶ್ವಮೇಧ ಮಹಾಯಾಗಮಾಡಿದರೆ ಭ್ರಾತೃವಧಾ ದೋಷವು ನಿವೃತ್ತಿಯಾಗುತ್ತದೆಂದು ಆತನಿಗೆ ಸಲಹೆಕೊಟ್ಟರು. ಆ ಸಲಹೆಗೆ ಭೀಮಾರ್ಜುನಾದಿ ತಮ್ಮಂದಿರು ಸಕಲ ವಿಧದಿಂದಲೂ ಬೆಂಬಲವಿತ್ತು ಸಹಾಯಮಾಡುವುದಾಗಿ ಪ್ರೋತ್ಸಾಹಗೊಳಿಸಿದರು. ಒಡನೆ ಆ ಸಂಬಂಧ ಕಾರ್ಯಕಲಾಪಗಳು ನಡೆಯಲಾ

---

ನೀತಿಚತುರತೆ ಕೀರ್ತಿಕಲ್ಯಾಣ ಭೋಗ ಸಂ
ಪ್ರೀತಿ ಪರಹಿತ ವಿನಯ ಶುಭ ವಿಭವ ವಿಜಯ ವಿ
ಖ್ಯಾತಿ ಕಳೆಸೌಭಾಗ್ಯ ಮಾರೋಗ್ಯ ಸೌಖ್ಯಮುನ್ನತ ಸತ್ಯ ನಿತ್ಯಭಕ್ತಿ
ಜಾತಿ ಧರ್ಮಾಚಾರ ನಿಷ್ಠೆ ಧರ್ಮಜ್ಞತೆ ವಿ
ಭೂತಿ ಶಮದಮ ದಾನದಾಕ್ಷಿಣ್ಯಮೆಂಬಿವು ಮ
ಹಾತಿಶಯಮೆನೆಪೆರ್ಚಿದುವು ಯುಧಿಷ್ಠಿರ ನರೇಶ್ವರನಾಳ್ವ ಭೂತಳದೊಳು

'ಶ್ರೀ ಲಕ್ಷ್ಮೀಶಕೃತ ಜೈಮಿನೀಭಾರತ'

ರಂಭವಾದುವು. ಯಾಗಕ್ಕೆ ಆವಶ್ಯಕವಾದ ಸಕಲ ವಸ್ತು ಸಾಮಗ್ರಿಗಳೂ ಸಂಗ್ರಹಿಸಲ್ಪಟ್ಟುವು. ಮಹಾಮುನಿಗಳನೇಕರೂ, ಸಾಮಂತರಾದ ಸಕಲ ದೇಶಗಳ ರಾಜರೂ ದೇಶದೇಶಗಳಿಂದ ಬಂದ ಲಕ್ಷಾವಧಿ ಪ್ರಜೆಗಳೂ ನೆರೆದಿರಲು ಯುಧಿಷ್ಠಿರ ಮಹಾರಾಜನು ಶ್ರೀಕೃಷ್ಣಸ್ವಾಮಿಯ ಸನ್ನಿಧಿಯಲ್ಲಿ ಸಕಲ ಪಾಪ ನಿವಾರಕವಾದ ಅಶ್ವಮೇಧ ಮಹಾಯಾಗವನ್ನು ಸಂಪೂರ್ತಿಗೊಳಿಸಿ, ಪತ್ನಿಯೊಂದಿಗೂ ಭ್ರಾತೃಗಳೊಂದಿಗೂ ಅವಭೃತಸ್ನಾನವಮಾಡಿ ಪರಿಶುದ್ಧನಾದನು. ಯಾಗಕ್ಕಾಗಿ ಬಂದಿದ್ದ ಋಷಿಮುನಿಗಳೂ ಭೂಸುರೋತ್ತಮರೂ ದಿವ್ಯಭೋಜನಗಳಿಂದಲೂ ದಕ್ಷಿಣೆ ದಾನಾದಿಗಳಿಂದಲೂ ಸಂತುಷ್ಟರಾಗಿ ತಮ್ಮ ತಮ್ಮ ಸ್ಥಳಗಳನ್ನು ಕುರಿತು ನಡೆದರು. ಶ್ರೀ ಕೃಷ್ಣಪರಮಾತ್ಮನೂ, ತನ್ನ ಭಕ್ತೋತ್ತಮರಾದ ಪಾಂಡುಪುತ್ರರಿಂದ ವಿಶೇಷರೀತಿಯಿಂದ ಪೂಜಿತನಾಗಿ ತನ್ನ ರಾಜಧಾನಿಯಾದ ದ್ವಾರಕೆಯನ್ನು ಕುರಿತು ಪ್ರಯಾಣ ಮಾಡಿದನು.

ತರುವಾಯ ಶ್ರೀಕೃಷ್ಣನು ತನ್ನ ಅವತಾರಕಾರ್ಯವಾದ ಭೂಭಾರ ಹರಣೋದ್ದೇಶವು ಸಂಪೂರ್ಣವಾಗಿ, ಪಾಂಡವ ಪ್ರತಿಷ್ಠಾಪನೆಯಿಂದ ದುಷ್ಟ ಶಿಕ್ಷಣೆ ಶಿಷ್ಟ ರಕ್ಷಣೆ ಧರ್ಮಸ್ಥಾಪನಾದಿಗಳು ಯೋಗ್ಯರೀತಿಯಿಂದ ನಡೆದುವೆಂಬುದನ್ನು ತಿಳಿದವನಾಗಿ ಇನ್ನು ತನ್ನ ಅವತಾರವನ್ನು ಉಪಸಂಹರಿಸಬಹುದೆಂದು ಯೋಚಿಸಿದನು. ಭಾರತಯುದ್ಧ ಪ್ರಯುಕ್ತ ನೆರೆದ ಸೈನ್ಯಸಾಗರದಲ್ಲಿ ಸಕಲ ದುಷ್ಟ ಕ್ಷತ್ರಿಯ ವಂಶಗಳೂ ನಿರ್ನಾಮವಾಗಿದ್ದುವಾದರೂ, ಶ್ರೀ ಕೃಷ್ಣನ ಸ್ವಂತ ಪರಿವಾರವಾಗಿದ್ದ ಯಾದವಸೈನ್ಯವೊಂದು ಇನ್ನೂ ಹಾಗೆಯೇ ಇದ್ದಿತು. ಯಾದವರು ತಮ್ಮ ಸಮಾನ ಬಲ ಶೌರ್ಯ ಧುರ್ಯರು ಮತ್ತಾರೂ ಇಲ್ಲವೆಂದು ಕೊಬ್ಬಿ, ದಿನದಿನಕ್ಕೆ ಲೋಕಹಿಂಸಕರಾಗುತ್ತ ಸಾಗಿದ್ದರಾದುದರಿಂದ ಅವರನ್ನೂ ನಿರ್ಮೂಲಗೊಳಿಸತಕ್ಕುದು ಆವಶ್ಯಕವೆಂದೂ, ಹಾಗಾಗಲ್ಲದಿದ್ದಲ್ಲಿ, ತನ್ನ ತರುವಾಯ ಅವರು ಲೋಕಕಂಟಕರಾಗದಿರರೆಂದೂ ತೋರಲು, ಸ್ವಯೂಥಕಲಹವನ್ನು ಅವರಲ್ಲಿ ಕಲ್ಪಿಸಿ, ಅವರ ನಾಶಕ್ಕೆ ಅವರವರೇ ಕಾರಣರಾಗುವಂತೆ ಉಪಾಯಮಾಡಿದನು. ಹೀಗೆ ಯಾದವರೆಲ್ಲರೂ ನಾಶವಾಗಲು, ಶ್ರೀಕೃಷ್ಣನು, ತಾನೂ ಬಲರಾಮನು ತಮ್ಮ ಅವತಾರಗಳನ್ನು ಉಪಸಂಹರಿಸಿಕೊಂಡು ಕಾರಣಾಂತರಗಳಿಂದ ತಮ್ಮ ಪಾಂಚ

ಭೌತಿಕ ದೇಹಗಳನ್ನು ತ್ಯಾಗಮಾಡಿದರು ಶ್ರೀಕೃಷ್ಣಸ್ವಾಮಿಯು ಭೂಲೋಕವನ್ನು ಬಿಟ್ಟು ವೈಕುಂಠಾಭಿಮುಖನಾಗಿ ಪ್ರಯಾಣಮಾಡಿದನೆಂಬ ವಾರ್ತೆಯನ್ನು ಅರ್ಜುನನಿಂದ ಕೇಳಿದ ಯುಧಿಷ್ಠಿರ ಮಹಾರಾಜನು ಕಲಿಬಾಧೆಗೀಡಾದ ಭೂಲೋಕದಲ್ಲಿ ಇನ್ನು ವಾಸಮಾಡತಕ್ಕುದು ಅನುಚಿತವೆಂದು ತಿಳಿದು, ತನ್ನ ತಮ್ಮಂದಿರೊಂದಿಗೂ ಪತ್ನಿಯಾದ ದ್ರೌಪದಿಯೊಂದಿಗೂ, ಉತ್ತರಾಭಿಮುಖವಾಗಿ ಪ್ರಯಾಣಮಾಡಿ ಹಿಮಾಚಲದ ಬೇರೆ ಬೇರೆ ಭಾಗಗಳಲ್ಲಿ ತಮ್ಮಂದಿರೂ ಪತ್ನಿಯೂ ತಮ್ಮ ತಮ್ಮ ದೇಹತ್ಯಾಗಮಾಡಲು, ಧರ್ಮಾತ್ಮನಾದ ತಾನು ಸಶರೀರಿಯಾಗಿ ಸ್ವರ್ಗಪ್ರವೇಶಮಾಡಿ ಅಲ್ಲಿ ದೇವತೆಗಳಿಂದ ಗೌರವಿಸಲ್ಪಟ್ಟನು.

ಯುಧಿಷ್ಠಿರನರೇಂದ್ರನು ಮಹಾಪ್ರಸ್ಥಾನ ಮಾಡುವುದಕ್ಕೆ ಪೂರ್ವದಲ್ಲಿ, ಹಸ್ತಿನಾವತಿಯಲ್ಲಿ ಅರ್ಜುನ ಪುತ್ರನಾದ ಅಭಿಮನ್ಯುವಿಗೆ ಉತ್ತರಾದೇವಿಯ ಉದರದಲ್ಲಿ ಸಂಜನಿಸಿದ್ದ ಪರೀಕ್ಷಿದ್ರಾಜನಿಗೆ ಪಟ್ಟಾಭಿಷೇಕಮಾಡಿ ರಾಜ್ಯವನ್ನೊಪ್ಪಿಸಿ, ಧರ್ಮದಿಂದ ರಾಜ್ಯವಾಳಿಕೊಂಡಿರೆಂದು ಆಶೀರ್ವದಿಸಿ ಹೊರಟಿದ್ದನು. ಪರೀಕ್ಷಿದ್ರಾಜನಾದರೋ ಯುಧಿಷ್ಠಿರನಂತೆಯೇ ಮಹಾಧರ್ಮಾತ್ಮನು. ಧೀರನು. ಅದ್ವಿತೀಯ ಪರಾಕ್ರಮಿ. ಶ್ರೀ ಕೃಷ್ಣಪರಮಾತ್ಮನೂ ಧರ್ಮಸ್ವರೂಪಿಗಳಾದ ಧರ್ಮಜಾದಿ ಪಾಂಡವರೂ ಭೂಲೋಕವನ್ನು ಬಿಟ್ಟು ಹೊರಟನಂತರ, ಪ್ರತ್ಯಕ್ಷವಾಗಿ ಲೋಕವನ್ನು ಪ್ರವೇಶಿಸಿ-ತನ್ನ ಪ್ರತಾಪವನ್ನು ಹಬ್ಬಿಸಲು ಹವಣಿಸುತ್ತಿದ್ದ ಕಲಿಪುರುಷನ ಕೊಬ್ಬನ್ನು ಅಡಗಿಸಿ ಒಂದೆಡೆಯಲ್ಲಿ ಸೆರೆಗೊಳಿಸಿ ಅರವತ್ತು ಸಂವತ್ಸರಗಳ ಕಾಲ ರಾಜ್ಯಭಾರಮಾಡಿದ ಮಹಾ ವೀರಶಿರೋಮಣಿ. ವಿಷ್ಣುಭಕ್ತಾಗ್ರೇಸರನು. ಮಾತೃಗರ್ಭದಲ್ಲಿದ್ದಾಗಲೇ, ದುರಾಗ್ರಹಿಯೂ ಶಿಶುಘಾತಕಿಯೂ ಪಾಂಡವ ವಂಶವನ್ನು ನಿಸ್ಸಂತಾನವನ್ನಾಗಿಸುವೆನೆಂದು ಕೃತಪ್ರತಿಜ್ಞನೂ ಆಗಿದ್ದ ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ಬಾಧಿಸಲ್ಪಟ್ಟಾಗ್ಯೂ, ಶ್ರೀಕೃಷ್ಣ ಪರಮಾತ್ಮನ ಕೃಪಾಕಟಾಕ್ಷದಿಂದ ಪರಿಪೋಷಿತನಾದ ಪುಣ್ಯದೇಹಿ ಆ ಕಾರಣದಿಂದಲೇ ವಿಷ್ಣುರಾತನೆಂದು ಪ್ರಸಿದ್ಧನಾದವನು. ಈ ರಾಜೇಂದ್ರನು ಹೀಗೆ ಧರ್ಮಪ್ರಭುವೆನಿಸಿ ಅನೇಕ ಕಾಲ ರಾಜ್ಯವಾಳಿದ ತರುವಾಯ: ಒಂದಾ

ನೊಂದು ದಿನ ಮೃಗಯಾವಿಹಾರಕ್ಕೆಂದು ಅರಣ್ಯವನ್ನು ಹೊಕ್ಕು ಸಂಚರಿಸುತ್ತಾ, ಅನೇಕ ಮೃಗಗಳನ್ನು ಕೊಂದು ಬಳಲಿ, ಮಧ್ಯಾಹ್ನವಾಗುತ್ತಿರುವ ಕಾಲದಲ್ಲಿ ಅಕಸ್ಮಾತ್ತಾಗಿ ಒಂದು ಮೃಗವನ್ನು ಕಂಡು ಬೆನ್ನಟ್ಟಿ, ತನ್ನ ಪರಿಜನಗಳಿಂದ ಅಗಲಿ ಬಹುದೂರ ಪ್ರಯಾಣಮಾಡಿಬಿಟ್ಟನು. ಮಧ್ಯಾಹ್ನದ ಚಂಡ ಸೂರ್ಯನ ಕಿರಣಗಳ ಬಾಧೆಯಿಂದ ವಿಶೇಷ ಬಳಲಿಕೆಯೂ, ಬಾಯಾರಿಕೆಯೂ ಉಂಟಾಗತೊಡಗಿತು. ಸಮೀಪದಲ್ಲೆಲ್ಲೂ ಜಲವಿರುವ ಚಿನ್ಹೆಯೂ ಕಾಣಿಸಲಿಲ್ಲ. ಆ ವೇಳೆಯಲ್ಲಿ ಅಲ್ಲೇ ಸಮೀಪದ ಮರದ ಬುಡದಲ್ಲಿ ಒಂದು ಚಿಕ್ಕ ಋಷ್ಯಾಶ್ರಮವು ದೃಷ್ಟಿಗೋಚರವಾಯಿತು. ಒಡನೆ ಅಲ್ಲಿಗೆ ಬಂದು 'ಯಾರಿಲ್ಲಿ' ಎಂದು ಅಧಿಕಾರ ವಾಣಿಯಿಂದ ಎರಡುಮೂರು ಸಾರಿ ಕೂಗಿದನು. ಒಳಗೆ ಒಬ್ಬ ಮನುಷ್ಯನು ಕುಳಿತಿರುವುದು ಕಾಣಿಸಿತು. ಆದರೆ ರಾಜನ ಮಾತಿಗೆ ಯಾವ ಪ್ರತ್ಯುತ್ತರವೂ ಬರಲಿಲ್ಲ. ರಾಜರಾಜೇಶ್ವರನಾದ ತಾನು ಬಂದು ಬಾಗಿಲಲ್ಲಿ ನಿಂತು ಕೂಗಿದರೂ, ಸೆಟೆದು ಸುಮ್ಮನೆ ಕುಳಿತಿದ್ದು ಪ್ರತ್ಯುತ್ತರ ಕೊಡದಿದ್ದ ಅಲ್ಲಿದ್ದ ಆ ಮುನಿಯನ್ನು ಕಂಡು, ಬಿಸಿಲಿನಲ್ಲಿ ಬಹುದೂರದಿಂದ ದಣಿದು ಬಂದು ಬಾಯಾರಿಕೆಯಿಂದ ಬಳಲಿದ್ದ ರಾಜನಿಗೆ ಮನಸ್ಸಿನಲ್ಲಿ ಕ್ರೋಧವು ಉತ್ಪನ್ನವಾಯಿತು. ಕ್ರೋಧಸಂತಪ್ತನಾದ ಆತನಿಗೆ ಅದು ಋಷ್ಯಾಶ್ರಮವೆಂಬುದೂ, ಆ ಮುನಿಯು ಧ್ಯಾನಮಗ್ನನಾಗಿ ಸಮಾಧಿಯಲ್ಲಿ ಕುಳಿತಿರುವನೆಂಬುದೂ, ಆ ಸಂದರ್ಭದಲ್ಲಿ ಆ ವ್ಯಕ್ತಿಯ ವಿಷಯದಲ್ಲಿ ಕೋಪಗೊಳ್ಳತಕ್ಕುದು ಅನುಚಿತವೆಂಬುದೂ ಸ್ಮೃತಿಗೆ ಬರಲಿಲ್ಲ. ರೋಷಾಕ್ರಾಂತನಾದ ಆತನಿಗೆ ಯುಕ್ತಾಯುಕ್ತ ಪ್ರಜ್ಞೆಯು ಹಾರಿಹೋಗಲಾಗಿ ಪರೀಕ್ಷಿತನು – 'ಏನಿದು, ಮಹಾರಾಜನಾದ ನನ್ನ ವಿಷಯದಲ್ಲೂ ಇಂತಹ ಅಪಚಾರವೇ, ಇಂತಹ ಅನಾದರಣೆಯೇ, ಎಂದು ಆಕ್ಷೇಪಿಸಿ, ಕಾಲಪ್ರೇರಿತನಾಗಿಯೋ ಎಂಬಂತೆ, ಅಲ್ಲೇ ಸಮೀಪದಲ್ಲೇ ಸತ್ತು ಬಿದ್ದಿದ್ದ ಒಂದು ಸರ್ಪವನ್ನು ಬಿಲ್ಲಿನ ತುದಿಯಿಂದಲೆತ್ತಿ, ಅದನ್ನು ನಿರ್ವಿಕಲ್ಪ ಸಮಾಧಿಯಲ್ಲಿ ಒಡಲು ತಿಳಿಯದೆ ಕುಳಿತಿದ್ದ ಆ ಮುನೀಶ್ವರನ ಕೊರಳಿನ ಸುತ್ತಲೂ ಹಾರದಂತೆ ಹಾಕಿ, ಆ ತನ್ನ ಕುಚೇಷ್ಟೆಯಿಂದ ತತ್ಕಾಲಕ್ಕೆ ವಿನೋದಗೊಂಡು – ತನಗೆ ಆ ಮೌನಿಯು ಮಾಡಿದ ಅಪಚಾರಕ್ಕೆ ತಕ್ಕ ಪ್ರತೀಕಾರಮಾಡಿದೆನೆಂದು ಸಂತುಷ್ಟನಾಗಿ, ಮುಂದೆ ಹೊರಟನು. ಆ ವೇಳೆಗೆ

ಪರಿವಾರದವರೂ ಬಂದು ಸೇರಲು ಎಲ್ಲರೊಂದಿಗೆ ಪ್ರಯಾಣಮಾಡಿ ನಗರ ವನ್ನು ಸೇರಿದನು.

ಇತ್ತ ತಪಸ್ಸಿಗಾಗಿ ಕುಳಿತಿದ್ದ ಮಹಾ ಸಾಧುಸ್ವಭಾವದ ಶಮೀಕ ನೆಂಬ ಆ ಮುನಿವರ್ಯನ ಪುತ್ರನಾದ ಶೃಂಗಿಯೆಂಬ ಬಾಲಕನು ತನ್ನ ಸಮ ವಯಸ್ಕರೊಂದಿಗೆ ಸಮಿತ್ತು ಪುಷ್ಪಾದಿಗಳಿಗಾಗಿ ಅರಣ್ಯಕ್ಕೆ ಹೋಗಿದ್ದು ಹಿಂದಿರುಗಿ ಬರುತ್ತಿದ್ದ ವೇಳೆಯಲ್ಲಿ, ಅವನನ್ನು ಕಂಡು ಕೆಲಮಂದಿ ಬಾಲ ಕರು, ಅವನ ತಂದೆಯ ಕೊರಳಲ್ಲಿ ಯಾರೋ ಮೃತಸರ್ಪವನ್ನು ಮಾಲೆ ಯಾಗಿ ಹಾಕಿ ಹೋಗಿದ್ದಾರೆಂದು ತಿಳಿಸಿದರು. ಆ ಮಾತುಗಳು ಕಿವಿಗೆ ಬಿದ್ದೊಡನೆಯೇ ಆ ತೇಜಸ್ವಿ ಬ್ರಹ್ಮಚಾರಿಯು ಕ್ರೋಧಸಂತಪ್ತನಾಗಿ.- ಅಕ್ಕಟಾ ಈ ಕಾರ್ಯವು, ಬೇಟೆಗೆಬಂದ ಯಾವನೋ ಒಬ್ಬ ಮದಾಂಧ ಕ್ಷತ್ರಿಯನಿಂದಲೇ ನಡೆದುದಾಗಿರಬೇಕು, ಎಂದು ತರ್ಕಿಸಿ ಕಟಕಟನೆ ಹಲ್ಲು ಕಡಿಯುತ್ತಾ, ಆ ನೀಚ ಕ್ಷತ್ರಿಯನ ಈ ಕುಚೇಷ್ಟೆಯ ಕಾರ್ಯಕ್ಕೆ ತಕ್ಕ ಶಿಕ್ಷೆಯನ್ನು ಮಾಡಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ.-'ಸಮಾಧಿಸ್ಥನಾಗಿ ಕುಳಿತಿದ್ದ ನಿರಪರಾಧಿಯಾದ ನಮ್ಮ ತಂದೆಯ ವಿಷಯದಲ್ಲಿ ಯಾವ ನೀಚಾ ತ್ಮನು ಈ ದುಷ್ಕೃತ್ಯವನ್ನು ಆಚರಿಸಿದನೋ ಆ ಪಾಪಿಯು ಇಂದಿನಿಂದ ಏಳು ದಿನಗಳಲ್ಲಿ ಸರ್ಪದಷ್ಟನಾಗಿ ಮೃತನಾಗಲಿ - ತಕ್ಷಕನು ತನ್ನ ವಿಷಜ್ವಾ ಲೆಯಿಂದ ಆತನ ಪ್ರಾಣಾಪಹರಣಮಾಡಲಿ' ಎಂದು ಶಪಿಸಿಬಿಟ್ಟನು.



## ಅಧ್ಯಾಯ ೨ 'ಜನಮೇಜಯನಿಗೆ ರಾಜ್ಯಪ್ರಾಪ್ತಿ'

ಮಹಾಮಹಿಮರಾದ ತಪಸ್ವಿಗಳ ವಿಷಯದಲ್ಲಿ ಆಚರಿಸಿದ ಸತ್ಕಾರ ವಾಗಲಿ ಅಪಚಾರವಾಗಲಿ ವ್ಯರ್ಥವಾಗುವುದೆ? ಪರೀಕ್ಷಿದ್ರಾಜನು ಆ ಮಹಾ ನುಭಾವರ ವಿಷಯದಲ್ಲಿ ಅಂತಹ ದುಷ್ಕಾರ್ಯವನ್ನಾಚರಿಸಿ ನಗರಾಭಿಮುಖ ವಾಗಿ ಪ್ರಯಾಣಮಾಡಿದ ತರವಾಯ ಮಾರ್ಗದಲ್ಲೇ ಆತನಿಗೆ ತನ್ನ ಕೇಡಿಗತನದ ವಿಷಯದಲ್ಲಿ ಪಶ್ಚಾತ್ತಾಪವುಂಟಾಗದಿರಲಿಲ್ಲ. ರಾಜಧಾನಿ

ಯನ್ನು ಸೇರಿದಮೇಲೂ ಸಹ ಮನಸ್ಸು ಸ್ವಸ್ಥವಾಗಲೇ ಇಲ್ಲ. ಮೌನ ಧಾರಣೆಯಿಂದ ಸಮಾಧಿಸ್ಥರಾಗಿದ್ದ ಆ ತಪೋನಿಧಿಗಳು ಬಹಿರ್ಮುಖರಾದ ಮೇಲೆ ತನ್ನ ಅಕೃತ್ಯಕ್ಕಾಗಿ ಕೋಪಿಸಿಕೊಂಡು ಎಂತಹ ಉಗ್ರತರವಾದ ಶಾಪವನ್ನೀಯುವರೋ, ಈ ಕುಚೇಷ್ಟೆಯ ಫಲವಾಗಿ ಮತ್ತೆಂತಹ ಕಷ್ಟಾನುಭವಮಾಡುವುದು ತನ್ನ ಪಾಲಿಗಿದೆಯೋ ಎಂದು ಚಿಂತಾಮಗ್ನನಾಗಿ, ಏನು ಮಾಡಲೂ ತೋರದೆ ಕೆಲಹೊತ್ತು ಕಳೆದಿದ್ದನು. ಅಷ್ಟರಲ್ಲಿ ಇತ್ತ, ತನ್ನ ತಂದೆಗೆ ಕ್ಷತ್ರಿಯನೊಬ್ಬನು ಮಾಡಿದ ಅಪಮಾನಕ್ಕಾಗಿ ರೇಗಿ ಶಾಪಕೊಟ್ಟ ತರುವಾಯ ಶೃಂಗಿಯು ಆಶ್ರಮದ ಸಮೀಪಕ್ಕೆ ಬಂದು ತನ್ನ ತಂದೆಯ ಕೊರಳಲ್ಲಿದ್ದ ಸತ್ತ ಹಾವನ್ನು ಕಂಡು, 'ಹೋ' ಎಂದು ರೋದಿಸತೊಡಗಿದನು. ಇದು ಆತನ ಸಮಾಧಿಯನ್ನು ಭಂಗಗೊಳಿಸಲು ಬಹಿರ್ಮುಖನಾದ ಶಮೀಕಮುನೀಶ್ವರನು, ತನ್ನ ಕಂಠದಲ್ಲಿದ್ದ ಹಾವನ್ನೂ, ಎದುರಿನಲ್ಲಿ ತನ್ನ ಏಕಮಾತ್ರಪುತ್ರನು ಅಳುತ್ತಾ ನಿಂತಿದ್ದುದನ್ನೂ ಕಂಡು ಆ ವೃತ್ತಾಂತವನ್ನೆಲ್ಲ ಅವನ ಮುಖದಿಂದ ತಿಳಿದು,— 'ಮಗೂ, ನಮ್ಮನ್ನೆಲ್ಲ ಧರ್ಮದಿಂದ ಪಾಲಿಸುತ್ತಿರುವ ಪೃಥ್ವೀಶ್ವರನನ್ನು ಹಾಗೆ ಶಪಿಸಿದುದು ತಪ್ಪು. ರಾಜನು ಬಂದಾಗ್ಗ ಯುಕ್ತರೀತಿಯಿಂದ ಗೌರವಿಸತಕ್ಕುದು ನಮ್ಮ ಕರ್ತವ್ಯ. ಪ್ರಜೆಗಳಾದ ನಾವು ಹಾಗೆ ಮಾಡದಿದ್ದುದು ಆತನಿಗೆ ಕೋಪವನ್ನುಂಟುಮಾಡಿದ್ದರೆ, ಅದು ಸಹಜನೇ ಆಗಿದೆ. ಆದಕ್ಕಾಗಿ ನಾವು ಆತನನ್ನು ಶಪಿಸಿಬಿಟ್ಟುದರಿಂದ ಲೋಕಕ್ಕೆ ಎಷ್ಟು ಅಪಕಾರಮಾಡಿದಂತಾಯಿತು ಯೋಚಿಸಿದೆಯಾ? ಇಂದು ಪುನಃ ಅಷ್ಟುಮಾತ್ರ ಶಕ್ತನಾದ ಮತ್ತೊಬ್ಬ ರಾಜನನ್ನು ರಾಜ್ಯಪಾಲನೆಗೆ ಒದಗಿಸಲು ನಮಗೆ ಸಾಧ್ಯವುಂಟೆ? ಶಕ್ತನಾದ ರಾಜನಿಲ್ಲದ ರಾಜ್ಯದಲ್ಲಿ ಎಂತಹ ಅನಾಯಕತ್ವವು ಪ್ರಾರಂಭಿಸಿ ಪ್ರಜೆಗಳು ಎಷ್ಟು ಕಷ್ಟನಷ್ಟಗಳ ಪಾಲಾಗುವರೆಂಬುದನ್ನು ಯೋಚಿಸಿರುವೆಯಾ? ಮಗನೇ, ನೀನು ದುಡುಕಿ ಬಹು ಅಕಾರ್ಯಮಾಡಿಬಿಟ್ಟೆ! ಅಕಟಾ ನಮ್ಮಿಂದ ಈ ಚಂದ್ರವಂಶದ ರಾಜಶ್ರೇಷ್ಠನಿಗೆ ಎಂತಹ ದುರ್ದೆಶೆಯೊದಗಿತಲ್ಲಾ! ಹಾ, ವಿಧಿಯೇ ಈಗೇನು ಮಾಡಲು ಸಾಧ್ಯ! ನಿಯತ ಬ್ರಹ್ಮಚರ್ಯನಿಷ್ಠೆಯಿಂದಲೂ ತಪಸ್ಸಿನಿಂದಲೂ ತೇಜಸ್ವಿಯಾಗಿರುವ ಈ ವಟುವಿನ ಶಾಪವು ಫಲಕಾರಿಯಾಗುವುದರಲ್ಲಿ ಸಂಶಯವಿಲ್ಲ ಧರ್ಮಾತ್ಮನಾದ ಆ ರಾಜವರೇಣ್ಯನು, ಸರ್ಪದಷ

ನಾಗಿ ದುರ್ಮರಣಕ್ಕೆ ಒಳಗಾಗುವುದಲ್ಲದೆ, ಪರಲೋಕದಲ್ಲೂ ದುರ್ಗತಿಗೆ ಈಡಾಗದಂತೆ ಈಗಲೇ ಎಚ್ಚರಿಸುವುದಾದರೂ ಮೇಲು. ರಾಜನು ತನ್ನ ಮರಣಕ್ಕೆ ಅವಧಿಯಿರುವ ಈ ಆರೇಳು ದಿನಗಳಲ್ಲಿ ದಾನಧರ್ಮಾದಿಗಳನ್ನು ಆಚರಿಸಿ, ಯೋಗ್ಯಪಾರತ್ರಿಕ ಸಾಧನವನ್ನಾದರೂ ಮಾಡಿಕೊಳ್ಳಲಿ! ಅಶ್ರುತವಾದ ಅಪಕಾರವು ನಡೆದುಹೋಗಿರುವ ನಮ್ಮಿಂದ ಇಷ್ಟುಮಟ್ಟಿನ ಸಹಾಯವಾದರೂ ಕೊನೆಗಾಲದಲ್ಲಿ ಆತನಿಗೆ ಒದಗಲಿ, ಎಂದು ಚಿಂತಿಸಿ. ಒಡನೆ ಒಬ್ಬ ಶಿಷ್ಯನನ್ನು ಕರೆದು ಅವನೊಂದಿಗೆ ಶಾಪವೃತ್ತಾಂತವನ್ನೂ ಅದಕ್ಕೆ ಯುಕ್ತ ಪರಿಹಾರೋಪಾಯವನ್ನು ಆಚರಿಸಿ ಸದ್ಗತಿಯನ್ನು ಸಾಧಿಸಿಕೊಳ್ಳೆಂದೂ ಹೇಳಿ ಕಳುಹಿಸಿದನು. ಆ ಶಿಷ್ಯನು ಗುರುವಿನ ಆಜ್ಞೆಯಿಂದ ಹೊರಟು ಒಂದು ಕ್ಷಣವನ್ನೂ ವ್ಯರ್ಥಮಾಡದೆ ಪ್ರಯಾಣಮಾಡಿ, ಹಸ್ತಿನಾವತಿ ರಾಜಧಾನಿಯನ್ನು ಸೇರಿ, ಈ ದುರಂತ ವೃತ್ತಾಂತವನ್ನು ರಾಜನಿಗೆ ತಿಳಿಸಿ, - ಸಾವಕಾಶಮಾಡದೆ ನಿನ್ನ ಮುಂದಿನ ಮಾರ್ಗವನ್ನು ನೋಡಿಕೊಳ್ಳೆಂದೂ, ಅಕಸ್ಮಾತ್ತಾಗಿ ನಡೆದುಹೋದ ಈ ಅಚಾತುರ್ಯದಿಂದ ಶಮೀಕ ಮುನೀಶ್ವರರು ವಿಶೇಷ ಸಂತಾಪಗೊಂಡಿರುವರೆಂದೂ ವಿಜ್ಞಾಪಿಸಿ ಹಿಂದಿರುಗಿದನು.

ಮುನಿಕುಮಾರನು ನುಡಿದ ಶಾಪವಾರ್ತೆಯನ್ನು ಕೇಳಿದೊಡನೆಯೇ ಪರೀಕ್ಷಿದ್ರಾಜನು ಸಿಡಿಲುಬಡಿದವನಂತೆ ನಿಶ್ಚೇಷ್ಟಿತನಾಗಿ, ಸ್ವಲ್ಪಹೊತ್ತಿನ ಮೇಲೆ ಚೇತರಿಸಿಕೊಂಡು, ತಾನು ಯೋಚಿಸಿದ್ದಂತೆಯೇ ತನ್ನ ಕುಚೇಷ್ಟೆಗೆ ತಕ್ಕ ಪ್ರತಿಫಲವು ಲಭ್ಯವಾಯಿತೆಂದುಕೊಂಡು, ಇನ್ನು ಮರುಗುವುದರಿಂದ ಫಲವಿಲ್ಲವೆಂದು ತಿಳಿದು ಮುಂದಿನ ಕಾರ್ಯವನ್ನು ಕುರಿತು ಆಲೋಚಿಸತ್ತೊಡಗಿದನು. ಆತನ ಮಂತ್ರಿಗಳೂ ಆಪ್ತರಾದ ಸಾಮಂತರೂ ಈ ದುರಂತ ವೃತ್ತಾಂತವನ್ನು ಕೇಳಿ ಹಿಂದು ಮುಂದು ತೋರದಂತಾಗಿ, ಕೊನೆಗೆ ಆತನನ್ನು ತಕ್ಷಕನು ಬಂದು ಸೋಂಕಲು ಆಸ್ಪದವಿಲ್ಲದಂತಹ ಒಂದು ಸುರಕ್ಷಿತ ಸ್ಥಳದಲ್ಲಿಟ್ಟು ರಕ್ಷಿಸಬೇಕೆಂದು ನಿರ್ಧರಿಸಿಕೊಂಡರು. ರಾಜನಾದರೋ, ತನಗೆ ಅವಕಾಶವಿರುವ ಆ ಏಳು ದಿನಗಳೂ ಆಪದುದ್ಧಾರಕನಾದ ಪರಮಾತ್ಮನ ಚರಿತ್ರಶ್ರವಣ, ಆತನ ನಾಮಸ್ಮರಣ ಮುಂತಾದುವುಗಳಲ್ಲೇ ಕಾಲಕಳೆಯಬೇಕೆಂದು ನಿಶ್ಚಯಮಾಡಿಕೊಂಡು ತನ್ನ ರಾಜ್ಯವನ್ನು ಮಗನಾದ

ಜನಮೇಜಯನಿಗೆ ವಹಿಸಿ ನಿಶ್ಚಿಂತನಾದನು. ಮಂತ್ರಿಗಳೂ ರಾಜನ ಆಪ್ತರೂ ಗಂಗೆಯ ನಡುಗಡ್ಡೆಯಲ್ಲಿ ಒಂದೇ ಕಂಭದಮೇಲೆ ರಚಿಸಲ್ಪಟ್ಟ ಗೋಪುರವೊಂದರಲ್ಲಿ, ರಾಜನು ತನ್ನ ಋಷಿಮುನಿಗಳ ಪರಿವಾರದೊಂದಿಗೆ ಕುಳಿತಿರಲು ಏರ್ಪಡಿಸಿದ್ದರು ರಾಜನು ಸ್ನಾನಾದಿಗಳಿಂದ ಶುದ್ಧನಾಗಿ ಆ ಮಂಟಪವನ್ನು ಪ್ರವೇಶಿಸಿ, ಅಲ್ಲಿ ಪ್ರಾಯೋಪವೇಶ ನಿಯಮವನ್ನು ಕೈಕೊಂಡು, ಪೂರ್ವಾಭಿಮುಖವಾಗಿ ದರ್ಭೆಗಳನ್ನು ಹಾಸಿಕೊಂಡು ಪದ್ಮಾಸನಾಸೀನನಾಗಿ, ಹರಿಸ್ಮರಣಾತತ್ಪರನಾದನು. ಮಹಾ ರಾಜಾಧಿರಾಜನೂ, ಹಸ್ತಿನಾವತಿಯ ಸಾರ್ವಭೌಮನೂ ಆದ ಪರೀಕ್ಷಿದ್ರಾಜನಿಗೆ ಈ ಬಗೆಯ ಅಕಾಲಮೃತ್ಯುಯೋಗವು ಒದಗಿತೆಂದು ತಿಳಿದ ಮುನಿವೃಂದವು, ಕೊನೆಗಾಲದಲ್ಲಿ ಆ ರಾಜೇಂದ್ರನಿಗೆ ದರ್ಶನವನ್ನೀಯಬೇಕೆಂಬ ಕುತೂಹಲಾವಿಷ್ಟರಾಗಿ ಅಲ್ಲಿಗೆ ಬಂದು ಸೇರಿದರು. ಆ ಸಂದರ್ಭದಲ್ಲೇ ಶ್ರೀ ವೇದವ್ಯಾಸರ ಪುತ್ರರಾದ ಶ್ರೀ ಶುಕಾಚಾರ್ಯರೂ ದೈವಪ್ರೇರಣೆಯಿಂದಲೋ ಎಂಬಂತೆ ಅಲ್ಲಿಗೆ ಬಂದು ಅವರಿಂದ ಸತ್ಕೃತರಾಗಿ ಕುಳಿತುಕೊಂಡರು. ಪರೀಕ್ಷಿದ್ರಾಜನು ತನ್ನ ಶ್ರೇಯಶ್ಚಿಂತನೆಯಿಂದ ಅಪ್ರಾರ್ಥಿತರಾಗಿ ಬಂದು ಒದಗಿದ ಅಷ್ಟು ಮಂದಿ ಮುನೀಶ್ವರರನ್ನೂ, ಯಥೋಚಿತವಾಗಿ ಪೂಜಿಸಿ, ಶ್ರೀ ವ್ಯಾಸಪುತ್ರರಾದ ಶುಕಾಚಾರ್ಯರನ್ನು ಕುರಿತು - ಯೋಗಿಶ್ರೇಷ್ಠರೇ, ಮರಣೋನ್ಮುಖನಾದ ಮನುಷ್ಯನು ಯಾವ ಸತ್ಕಾರ್ಯಾಚರಣೆಯಿಂದ ಸದ್ಗತಿಯನ್ನು ಹೊಂದಲು ಅವಕಾಶವುಂಟು, ಅಪ್ಪಣೆಕೊಡಿಸಬೇಕೆಂದು ಪ್ರಾರ್ಥಿಸಿದನು. ಬ್ರಹ್ಮವೇತ್ತರಾದ ಶ್ರೀ ಶುಕಾಚಾರ್ಯರಿರುವಾಗ ಮಿಕ್ಕವರು ಹೇಳಬೇಕಾದುದೇನೆಂದು ಸರ್ವರೂ ಸುಮ್ಮನಿರುತ್ತಿರಲಾಗಿ, ಶ್ರೀ ಶುಕಾಚಾರ್ಯರು ರಾಜನನ್ನು ಕುರಿತು - 'ರಾಜಶ್ರೇಷ್ಠಾ, ನಿನ್ನೀ ಪ್ರಶ್ನೆಯು ಸರ್ವೋತ್ತಮವಾದ ದು ದೇಹಧಾರಿಯಾದ ಮನುಷ್ಯನು ತನಗೆ ಸದ್ಗತಿಪ್ರದವಾದ ಮಾರ್ಗವಾವುದೆಂಬುದನ್ನು ಕುರಿತು ಯೋಚಿಸುವುದಕ್ಕಿಂತಲೂ ಆವಶ್ಯಕವಾದ ಕಾರ್ಯವು ಮತ್ತಾವುದಿರುವುದು ? ಅದರಲ್ಲೂ ಮರಣೋನ್ಮುಖಿಯಾದವನು ಈ ವಿಚಾರವನ್ನು ಕುರಿತು ಅತ್ಯಗತ್ಯವಾಗಿ ತಿಳಿಯಬೇಕಾದುದಿದೆ. ಭವಬಂಧನಿವೃತ್ತಿಯೇ ಜೀವನ ಅತಿಮುಖ್ಯ ಸಾಧನೆಯಾಗಿರಬೇಕೆಂಬುದರಲ್ಲಿ ಸಂದೇಹವೇನಿದೆ? ಅಂತಹ ಜನನ ಮರಣ ಪ್ರವಾಹದಿಂದ ನಿವೃತ್ತಿ

ಹೊಂದಲು ಸರ್ವಾಪನ್ನಿವಾರಕವಾದ ಸರ್ವಸೌಭಾಗ್ಯಪ್ರದಾಯಕವಾದ ಶ್ರೀಮನ್ನಾರಾಯಣನ ಧ್ಯಾನವೇ ಅತ್ಯುತ್ಕೃಷ್ಟವಾದ ಸಾಧನವೆನ್ನಿಸಿರು ವುದು. ಭಗವದ್ಗುಣವರ್ಣನಾರೂಪವಾದ ಭಾಗವತ ಕಥಾಶ್ರವಣವು ಸಕಲ ದುರಿತಗಳನ್ನೂ ನಿವಾರಿಸುವಲ್ಲಿ ಅದ್ವಿತೀಯವೆನ್ನಿಸಿರುವುದು. ಅದ ರಲ್ಲೂ ಅಂತ್ಯಕಾಲದಲ್ಲಿ ಪರಮಪಾವನವಾದ ಪರಮಾತ್ಮನ ನಾಮಧ್ಯಾ ನವೂ, ತತ್ಕಥಾಶ್ರವಣವೂ ಅನಂತ ಪುಣ್ಯಫಲಪ್ರದವಾದುದೆನ್ನಿಸಿವೆ' ಎಂದು ನುಡಿದರು. ಶುಕಾಚಾರ್ಯರ ಆ ನುಡಿಯು ರಾಜನ ಮನಸ್ಸಿಗೆ ಪರಮಸಂತುಷ್ಟಿಯನ್ನುಂಟುಮಾಡಿತು. ಒಡನೆ ಆ ನರೋತ್ತಮನು ತನ್ನ ಆಸನದಿಂದೆದ್ದು ಅವರ ಪೂಜ್ಯಪಾದಗಳಿಗೆ ಮತ್ತೊಮ್ಮೆ ಪ್ರಣಾಮಮಾಡಿ, 'ಮಹಾನುಭಾವರೇ, ಆ ಭಾಗವತ ಕಥಾಶ್ರವಣಮಾಡಿಸಿ ನನ್ನನ್ನು ಕೃತಾ ರ್ಥನನ್ನಾಗಿ ಮಾಡಿರಿ' ಎಂದು ಬೇಡಿಕೊಂಡನು.

ಶುಕಮಹರ್ಷಿಗಳು ರಾಜನ ಪ್ರಾರ್ಥನೆಯನ್ನು ಕೇಳಿ, ತಮ್ಮ ತಂದೆ ಯಾದ ವೇದವ್ಯಾಸರು ಉಪದೇಶಿಸಿದ್ದ ಪರಮಪೂಜ್ಯವಾದ ಆ ಸತ್ಕಥೆ ಯನ್ನು ಶ್ರವಣಮಾಡಿಸಲು ಅದು ತಕ್ಕಪಾತ್ರವೆಂದು ತಿಳಿದು, ಶುದ್ಧಾಚಮ ನಮಾಡಿ ಸಂಕಲ್ಪಪೂರ್ವಕ ಕಥಾನುವಾದಕ್ಕೆ ಪ್ರಾರಂಭಿಸಿದರು. ರಾಜನೂ, ಇತರ ಋಷಿಮುನಿಗಳೂ ತದೇಕಾಯತ್ತ ಚಿತ್ತರಾಗಿ ಕುಳಿತು, ಶ್ರದ್ಧಾ ಭಕ್ತಿಯುಕ್ತರಾಗಿ ಕೇಳುತ್ತಿರಲು, ಶ್ರೀ ಶುಕಾಚಾರ್ಯರು, ಏಳು ದಿನಗಳಲ್ಲಿ ಶ್ರೀಮದ್ಭಾಗವತಕಥಾ ಸುಧಾರಸವರ್ಷವನ್ನು ಸುರಿಸಿ, ಅಂದು ಅಲ್ಲಿ ನೆರೆ ದಿದ್ದ ಪುಣ್ಯಶೀಲರನ್ನೂ ಅವರ ಮೂಲಕ ಆದ್ಯಂತ ಭಗವದ್ಭಕ್ತವೃಂದ ವನ್ನೂ ಆನಂದಸಾಗರದಲ್ಲಿ ಓಲಾಡಿಸಿದರು. ಭಗವಂತನು ಮತ್ಸ್ಯಕೂ ರ್ಮಾದಿ ತನ್ನ ದಶಾವತಾರಗಳಲ್ಲೂ, ಕಪಿಲಾದಿ ಇತರಾವತಾರಗಳಲ್ಲೂ ಮಾಡಿದ ಅಗಣಿತ ಲೋಕೋದ್ಧಾರಕ ಕಾರ್ಯಗಳನ್ನೂ, ಗಜೇಂದ್ರ, ಧ್ರುವ, ಪ್ರಹ್ಲಾದ, ಕುಚೇಲ ಮುಂತಾದ ಅನೇಕಾನೇಕ ಭಕ್ತಶ್ರೇಷ್ಠರನ್ನು ಪೊರೆವ ಆತನ ದಿವ್ಯ ಮಹಿಮೆಗಳನ್ನೂ ಕೇಳಿ ನೆರೆದ ಭಕ್ತವೃಂದವೆಲ್ಲವೂ ಪರಮಾನಂದಗೊಂಡರು. ಅವರ ಕಣ್ಣುಗಳಲ್ಲಿ ಆನಂದಬಾಷ್ಪವು ಕೋಡಿ ಯಿಟ್ಟು ಹರಿಯಿತು. ಪರೀಕ್ಷಿದ್ರಾಜನು ತನ್ನ ಅಂತ್ಯಕಾಲದಲ್ಲಿ ಅಪಾ

ರ್ಥಿತರಾಗಿ ದಯೆಗೈದು ತನಗೆ ಅಷ್ಟುಮಟ್ಟಿನ ಮಹೋಪಕಾರಮಾಡಿದ ಆ ಸಾಧುವರ್ಯರನ್ನು ಕೃತಜ್ಞತಾಪೂರ್ವಕವಾಗಿ ಶತಶಃ ನಮಸ್ಕರಿಸಿದನು.

ಶಮೀಕಋಷಿಪುತ್ರನು ಶಾಪಕೊಟ್ಟು ಅಂದಿಗೆ ಏಳು ದಿನಗಳು ತುಂಬಿದುವು. ಆ ದಿನ ಸಾಯಂಕಾಲದೊಳಗಾಗಿ ರಾಜನು ತಕ್ಷಕನಿಂದ ಕಚ್ಚಲ್ಪಟ್ಟು ಮೃತನಾಗತಕ್ಕವನೆಂದು ಎಲ್ಲರೂ ನಂಬಿ ನಿರೀಕ್ಷಿಸಿಕೊಂಡಿದ್ದರು. ಆವರೆಗೆ ತಕ್ಷಕನು ಆ ಮಂಟಪ ಪ್ರವೇಶಮಾಡಿದ ಯಾವ ಸುಳಿವೂ ತಿಳಿಯದಿದ್ದುದರಿಂದ ಕಾವಲುಗಾರರು ಎಂದಿಗಿಂತಲೂ ವಿಶೇಷ ಜಾಗರೂಕತೆಯಿಂದ ಕಾದುಕೊಂಡಿದ್ದರು. ಹಾಗೆ ಎಲ್ಲರೂ, ತಕ್ಷಕನು ಯಾವಹೊತ್ತಿಗೆ ಯಾವ ರೂಪದಿಂದ ಬಂದು ಪ್ರವೇಶಮಾಡಿಬಿಡುವನೋ ಎಂದು ಕೌತುಕಗೊಂಡಿರುವಲ್ಲಿ, ಕೆಲಮಂದಿ ಋಷಿಗಳು ಫಲಪುಷ್ಪಾದಿಗಳನ್ನು ತೆಗೆದುಕೊಂಡು ರಾಜಸಂದರ್ಶನಕ್ಕೆಂದು ಬಂದರು. ದ್ವಾರಪಾಲಕರು ರಾಜನ ಅನುಮತಿಯಿಂದ ಅವರನ್ನು ಒಳಕ್ಕೆ ಬಿಡಲು, ಅವರು ಒಳಹೊಕ್ಕು ರಾಜನಿಗೆ ವಂದಿಸಿ ಫಲಪುಷ್ಪಗಳನ್ನೊಪ್ಪಿಸಿ ಉಚಿತಾಸನದಲ್ಲಿ ಕುಳಿತುಕೊಂಡರು. ಸೂರ್ಯಾಸ್ತಮಯದವರೆಗೂ ತಕ್ಷಕನು ಯಾವ ರೂಪದಿಂದಲೂ ದೃಷ್ಟಿಗೋಚರನಾಗದಿದ್ದುದು ಕಾಲಪ್ರೇರಿತನಾದ ಆ ರಾಜನಿಗೂ ಆ ಶಾಪವಿಚಾರದಲ್ಲಿ ತಾತ್ಸಾರಭಾವವನ್ನು ಹುಟ್ಟಿಸಿತು. ಆಗ ಆತನು ಆ ಋಷಿಗಳು ತಂದುಕೊಟ್ಟಿದ್ದ ಒಂದು ಫಲವನ್ನು ಕೈಯಿಂದೆತ್ತಿ ವಿನೋದಕ್ಕಾಗಿ ಆಡಿಸುತ್ತಾ, ಅಕಸ್ಮಾತ್ತಾಗಿ ಅದರಲ್ಲಿ ದೃಷ್ಟಿಗೆ ಬಿದ್ದ ಒಂದು ಕ್ರಿಮಿಯನ್ನು ಕಂಡು, ಕಾಲವಶನಾದುದರಿಂದಲೋ ಎಂಬಂತೆ, ಅದನ್ನೇ ತನ್ನ ಕೊರಳಮೇಲೆ ಬಿಟ್ಟುಕೊಂಡು,-'ತಕ್ಷಕನು ಈ ರೂಪಿನಿಂದ ಬಂದನೋ-ಹಾಗಿದ್ದರೆ ಇದೇ ಘಟಸರ್ಪವಾಗಿ ನನ್ನನ್ನು ಕಚ್ಚಲಿ' ಎಂದು ನುಡಿದನು. ಮೃತ್ಯುವಶನಾದ ರಾಜನ ಬಾಯಿಂದ ಈ ಮಾತುಗಳು ಬಂದುದೇ ಸಾವಕಾಶವು. ಒಡನೆ ಕಣ್ಣಿಗೂ ಕಾಣಿಸದಷ್ಟು ಸಣ್ಣ ಕ್ರಿಮಿರೂಪದಿಂದಿದ್ದ ಆ ಜಂತುವು, ಭಯಂಕರವಾದ ಹೆಡೆಗಳಿಂದ ಕೂಡಿದ ಘಟಸರ್ಪವಾಗಿ ಮೊರೆಯುತ್ತ, ಬುಸುಗುಟ್ಟುತ್ತ, ದೀರ್ಘವಾದ ತನ್ನ ದೇಹದಿಂದ ರಾಜನ ಕೋಮಲಾಂಗವನ್ನು ಬಿಗಿಯಾಗಿ ಸುತ್ತಿಕೊಂಡು, ಭಯಂಕರವಾದ ತನ್ನ ವಿಷದ ಕೋರೆಗಳನ್ನು ಅತನ ಮೃದುಲವಾದ ಕಂಠಪ್ರದೇಶದಲ್ಲಿ ನಾಟಿಸಿ ಘೋರವಾದ

ಕಾಳಕೂಟ ವಿಷವನ್ನು ಸುರಿಸಿ ಬೊಬ್ಬಿರಿಯಿತು. ಒಡನೆ ಕೇಳುವುದೇನು! ಕ್ಷಣಮಾತ್ರದಲ್ಲಿ ತಮ್ಮ ಕಣ್ಣೆದುರಿಗೇ ನಡೆದುಹೋದ ಈ ಭಯಂಕರ ದೃಶ್ಯವನ್ನು ಕಂಡ, ಮಹಾ ಸಾಧುಸ್ವಭಾವದ ಆ ಋಷಿಮುನಿಗಳೆಲ್ಲರೂ-ಹಾ ಹಾ ಘಾತವಾಯಿತು, ಘಾತವಾಯಿತು, ಎನ್ನುತ್ತಿರುವುದರೊಳಗಾಗಿಯೇ ರಾಜನು ಗತಪ್ರಾಣನಾಗಿ, ಆತನ ಕಳೇಬರವು ಭೂಮಿಯಮೇಲೆ ಬಿದ್ದಿತು. ಅದನ್ನು ಕಂಡು ಸಕಲರೂ ಶೋಕಕ್ರಾಂತರಾಗಿ ಹಾಹಾಕಾರ ಮಾಡಿದರು.

ತರುವಾಯ ವಿಧ್ಯುಕ್ತವಾಗಿ ರಾಜನ ಊರ್ಧ್ವದೈಹಿಕ ಕಾರ್ಯಗಳೆಲ್ಲವೂ ನಡೆದುಹೋದುವು. ಜನಮೇಜಯಮಹಾರಾಜನು, ತನ್ನ ತಮ್ಮಂದಿರಿಂದೊಡಗೂಡಿ ತಮ್ಮ ತಂದೆಯಿಂದ ಅಖಂಡ ಅರವತ್ತು ಸಂವತ್ಸರಕಾಲ ಪೋಷಿತವಾದ ಪೃಥ್ವೀತಳವನ್ನು ಧರ್ಮದಿಂದ ಪಾಲಿಸಲಾರಂಭಿಸಿದನು.



## ಅಧ್ಯಾಯ ೩     'ಆಸ್ತಿಕೋತ್ಪತ್ತಿ'

ನಮ್ಮ ಕಥಾನಾಯಕನು, ತನ್ನ ತಂದೆಗೆ ತಕ್ಷಕನಿಂದ ಪ್ರಾಪ್ತವಾದ ಭಯಂಕರ ಮೃತಿಯ ವಿಷಯದಲ್ಲಿ ಕೃದ್ಧನಾಗಿ, ಸರ್ಪಕುಲವನ್ನೇ ಧ್ವಂಸ ಮಾಡಲಿಚ್ಛಿಸಿ ಸರ್ಪಯಾಗಮಾಡಲು ಸಂಕಲ್ಪಿಸಿದುದು ಮುಂದೆ ವಿವರಿಸಲ್ಪಡುವುದು. - ರ್ಪಕುಲಕ್ಕೆ ಇಂತಹ ಮಹದಾಪದವೊದಗಲು, ಇದು ಮಾತ್ರವೇ ಕಾರಣವೆಂದು ಊಹಿಸಲಾಗದು. ಇದಕ್ಕೆ ಕಾರಣವೆಂದು ಮತ್ತೊಂದು ವಿಚಾರವೂ ಮಹಾಭಾರತಗ್ರಂಥದಲ್ಲಿ ಹೇಳಲ್ಪಟ್ಟಿದೆ. ಕಶ್ಯಪ ಋಷಿಗಳ ಭಾರ್ಯೆಯರಾದ ಕದ್ರು ಮತ್ತು ವಿನತೆ ಎಂಬಿಬ್ಬರು ಸ್ತ್ರೀಯರಲ್ಲಿ, ವಿನತೆಯು ತನ್ನ ಭರ್ತನ ಅನುಗ್ರಹದಿಂದ ಗರುಡನೆಂಬ ಪಕ್ಷಿರಾಜನನ್ನೂ, ಕದ್ರುವು ಮಹಾವಿಷದ ಕೋರೆದಾಡೆಗಳಿಂದ ಲೋಕಭಯಂಕರವೆನ್ನಿಸುವ ಸರ್ಪಜಾತಿಯನ್ನೂ ಪಡೆದರು. ಮುಂದೊಂದು ಸಂದರ್ಭದಲ್ಲಿ ಆ ಇಬ್ಬರು ಸ್ತ್ರೀಯರಿಗೂ ದೇವರಾಜನ ಅಶ್ವವಾದ ಉಚ್ಚೈಶ್ರವಸ್ಸು ಶುಭ್ರವಾದ ಬಿಳಿಯಬಣ್ಣವುಳ್ಳದೋ ಕಪ್ಪುವರ್ಣವುಳ್ಳದೋ ಎಂಬ

ವಿಷಯವಾಗಿ ವಿವಾದಹುಟ್ಟಲು, ಅದು ಶುಭ್ರವಾದ ಬಿಳಿಯ ಬಣ್ಣವುಳ್ಳು ದೆಂದು ವಿನತೆಯೂ, ಅದರ ಬಾಲವು ಮಾತ್ರ ಕಪ್ಪಾಗಿದೆಯೆಂದು ಕದ್ರುವೂ ವಾದಿಸಿದರು. ಅದನ್ನು ನಿಶ್ಚಿತಗೊಳಿಸುವಲ್ಲಿ, ಅವರಿಬ್ಬರೂ ಒಂದು ಪಂಥಕ್ಕೆ ಒಡಂಬಟ್ಟರು. ಯಾರು ಹೇಳುವ ಸಂಗತಿಯು ತಪ್ಪಾ ಗಿರುವುದೋ ಅವರು ಮತ್ತೊಬ್ಬರಿಗೆ ದಾಸತ್ವವನ್ನು ಮಾಡಬೇಕೆಂದು ನಿರ್ಣಯವಾಯಿತು. ಮಾರನೆಯ ಪ್ರಾತಃಕಾಲವೇ, ಅದರ ಬಾಲವು ಕಪ್ಪಾಗಿರುವುದೋ ಅಲ್ಲದೆ ದೇಹವಾದ್ಯಂತವೂ ಶುಭ್ರವರ್ಣವುಳ್ಳದೋ ಎಂ ಬುದನ್ನು ಪರೀಕ್ಷಿಸಲು ಸಮುದ್ರತೀರಕ್ಕೆ ಹೋಗಬೇಕೆಂದು ಗೊತ್ತಾಯಿತು. ಆಗ ದುಷ್ಟಮತಿಯಾದ ಕದ್ರುವು ತನ್ನ ಮಕ್ಕಳಾದ ಸರ್ಪಗಳನ್ನು ಕರೆದು, 'ಎಲೈ ಮಕ್ಕಳಿರಾ ನೀವು ಹೋಗಿ ಆ ಉಚ್ಚೈಶ್ರವಸ್ಸಿನ ಬಾಲದಲ್ಲಿ ಹೊಕ್ಕು ಕೊಂಡು ಅದು ಕಪ್ಪಾಗುವಂತೆ ಮಾಡಿರಿ. ಅದರಿಂದ ನನ್ನ ಪಂಥವು ಗೆದ್ದು ನನ್ನಾ ಸವತಿಯು ನನಗೆ ದಾಸ್ಯಮಾಡುವಂತಾಗುವುದು. ಈ ಸಹಾಯ ದಿಂದ ನಿಮಗೆ ಶ್ರೇಯಸ್ಸಾಗುವಂತೆ ನನ್ನ ಆಶೀರ್ವಾದವಿರುವುದು' ಎಂದು ಆಜ್ಞಾಪಿಸಿದಳು. ಆ ಮಾತುಗಳನ್ನು ಕೇಳಿ, ಆ ಸರ್ಪಗಳು ಅಂತಹ ಅಸತ್ಕಾರ್ಯವನ್ನಾಚರಿಸಿ, ತಮ್ಮಾ ಸವತಿಮಾತೆಗೆ ಅನ್ಯಾಯವನ್ನುಂಟು ಮಾಡಲಾರೆವೆಂದು ನಿರಾಕರಿಸಲು, ಕದ್ರುವು ರೋಷಭೀಷಣಳಾಗಿ,— 'ಎಲೈ ಮೂರ್ಖರಿರಾ, ತಾಯಿಯೆಂಬ ಗೌರವವನ್ನಿಡದೆ ಲೇಶಮಾತ್ರವೂ ಮಮತೆಯೆಂಬುದಿಲ್ಲದೆ ನನ್ನ ಆಜ್ಞೆಯನ್ನು ತಿರಸ್ಕರಿಸಿದಿರಾದರಿಂದ ನೀವೆ ಲ್ಲರೂ ಅಗ್ನಿಯಲ್ಲಿ ದಗ್ಧವಾಗಿ ನಾಶವಾಗಿರಿ - ಮುಂದೆ ಜನಮೇಜಯನೆಂಬ ರಾಜನು ಸರ್ಪಯಾಗವೆಂಬೊಂದು ಯಾಗವನ್ನಾಚರಿಸಿ, ಅದರಲ್ಲಿ ನಿಮ್ಮನ್ನು ಅಗ್ನಿಗೆ ಆಹುತಿಯನ್ನಾಗಿಸುವನು. ನಿಮ್ಮಾ ಧೂರ್ತತನಕ್ಕೆ ಈ ಬಗೆಯ ಶಿಕ್ಷೆಯೇ ಪ್ರತಿಫಲವು' ಎಂದು ಶಾಪಕೊಟ್ಟಳು. ತಮ್ಮ ಮಾತೃವಿನ ಆಶೀ ರ್ವಾದಕ್ಕೆ ಪ್ರತಿಯಾಗಿ ದುರಂತಶಾಪವು ಒದಗಿದುದನ್ನು ಕಂಡು ಆ ಸರ್ಪ ಗಳು ದುಃಖಗೊಂಡು ಬ್ರಹ್ಮನನ್ನು ಕುರಿತು ಪ್ರಾರ್ಥಿಸಲು, ಆತನು-'ಮಾತೃ ಶಾಪವನ್ನು ಅನುಭವಿಸದಿದ್ದರೆ ತೀರದು. ಆದರೆ ಆ ಕಾಲದಲ್ಲಿ ಜರ ತ್ಕಾರುಪುತ್ರನಾದ ಆಸ್ತೀಕನೆಂಬೊಬ್ಬ ಬ್ರಾಹ್ಮಣ ವಟುವಿನಿಂದ ಸರ್ಪ ಯಾಗವು ನಿಲ್ಲಿಸಲ್ಪಟ್ಟು ನಿಮ್ಮ ರಕ್ಷಣೆಯಾಗುವುದು' ಎಂದು ತಿಳಿಸಿದನು.

ಅದನ್ನು ಕೇಳಿ ಸಂತುಷ್ಟವಾದ ಸರ್ಪಕುಲವು, ತಮ್ಮ ಕುಲಕ್ಕೆ ಪ್ರಾಪ್ತ ವಾಗಲುಳ್ಳ ಆ ಭಯಂಕರ ಆಪತ್ತಿನ ವಿಷಯದಲ್ಲಿ ಚಿಂತೆಗೊಂಡಿದ್ದರೂ ಲೇಶಮಾತ್ರ ಸಮಾಧಾನಹೊಂದಿ, ದೈವದಲ್ಲಿದ್ದಂತೆ ಆಗಲೆಂದು ಕಾಲ ಯಾಪನೆ ಮಾಡುತ್ತಿದ್ದಿತು.

ಸರ್ಪಕುಲಕ್ಕೆ ಪ್ರಾಪ್ತವಾಗಿದ್ದ ಆ ಪ್ರಾಣಾಪತ್ತಿನಿಂದ ಅವುಗಳನ್ನು ರಕ್ಷಿಸಿದ ಆಸ್ತಿಕನ ಜನನವು ಅತಿ ವಿಚಿತ್ರ ರೀತಿಯಿಂದ ಆಯಿತೆಂದು ಉಕ್ತ ವಾಗಿದೆ. ಜರತ್ಕಾರುವೆಂಬ ಮಹಾತೇಜಸ್ವಿಯಾದೊಬ್ಬ ಬ್ರಾಹ್ಮಣನು. ವಿವಾಹದಲ್ಲಿ ಇಚ್ಛೆಯಿಲ್ಲದೆ ಉಗ್ರವಾದ ಬ್ರಹ್ಮಚರ್ಯ ವ್ರತದಲ್ಲಿ ದೀಕ್ಷೆಯು ಳ್ಳವನಾಗಿ, ತಪೋನಿಷ್ಠನಾಗಿ ಸಂಚರಿಸುತ್ತಿರುವಲ್ಲಿ ಒಂದು ದಿನ ಅಕಸ್ಮಾ ತ್ತಾಗಿ, ಒಂದು ಅಗಾಧ ವೃಕ್ಷದ ಬುಡದಲ್ಲಿದ್ದೊಂದು ಕಮರಿಯಲ್ಲಿ, ತಲೆಕೆ ಳಗಾಗಿ ಹುಲ್ಲುಗರಿಕೆಯ ಬಿಳಲುಗಳನ್ನು ಹಿಡಿದು ನೇತಾಡುತ್ತಾ ಇದ್ದ ತನ್ನ ಪಿತೃಗಳನ್ನು ಕಂಡು ಅವರಿಗೆ ಆ ದುರ್ಗತಿಯು ಪ್ರಾಪ್ತವಾಗಲು ಕಾರಣವೇನೆಂದು ಪ್ರಶ್ನಿಸಿದನು. ಆಗಲವರು, ತಮ್ಮ ವಂಶದಲ್ಲಿ ನಿಷ್ಕರು ಣೆಯಾದ ಜರತ್ಕಾರುವೆಂಬೊಬ್ಬನೇ ಉಳಿದ , ಅವನೂ ಬ್ರಹ್ಮಚರ್ಯವ್ರತ ನಿಷ್ಠನಾಗಿ ವಂಶೋದ್ಧಾರಮಾರ್ಗವನ್ನು ಚಿಂತಿಸದೆಯೂ, ವಿವಾಹಪ್ರಯ ತ್ನದಲ್ಲಿ ಇಚ್ಛೆಯಿಲ್ಲದೆಯೂ ಇರುವುದರಿಂದ, ಸಂತತಿವಿಹೀನರಾದ ತಾವು ಹಾಗೆ ನೇತಾಡುತ್ತಿರುವೆವೆಂದೂ, ಮುಂದೆ ಅವನೂ ಹಾಗೆ ಅಪುತ್ರವಂತ ನಾಗಿ ಮೃತನಾದನಂತರ ತಾವು ಕೆಳಗಿದ್ದ ಆಳವಾದ ಭಯಂಕರ ಕುಳಿಯಲ್ಲಿ ಬಿದ್ದು ದುರ್ಗತಿಯನ್ನು ಹೊಂದಲುಳ್ಳವರೆಂದೂ ಪರಿತಪಿಸಿದರು. ಜರ ತ್ಕಾರುವು ತನ್ನಾಪಿತೃಗಳಿಗೆ ಪ್ರಾಪ್ತವಾದ ದುಸ್ಥಿತಿಗಾಗಿ ಮರುಗಿ, ಕೆಲವು ನಿಬಂಧನೆಗಳಿಗೊಳಪಟ್ಟು ತನಗೆ ಕನ್ಯಾಪ್ರದಾನಮಾಡುವುದಾದರೆ, ಅಂತಹ ಕನ್ಯೆಯನ್ನು ವಿವಾಹವಾಗಿ ಅವಳಲ್ಲಿ ಸಂತತಿಯನ್ನು ಪಡೆಯುವೆನೆಂದೂ, ತನ್ಮೂಲಕ ಅವರು ಉದ್ಧೃತರಾಗಬಹುದೆಂದೂ ನುಡಿದು ಅವರನ್ನು ಸಂತ ಯಿಸಿ ಮುಂದೆ ಹೊರಟನು ಆದರೆ, ಆತನ ನಿಬಂಧನೆಗಳೆಂಬುವು ಅತಿ ದಾರುಣವಾದುವು. ಆತನನ್ನು ವಿವಾಹವಾಗುವ ಪತ್ನಿಗೂ ಜರತ್ಕಾರು ವೆಂದೇ ನಾಮಧೇಯವಿರಬೇಕು ಆಕೆಯನ್ನು ಸಂರಕ್ಷಿಸುವ ಮುಂತಾದ ಯಾವ ಭಾರವೂ ತನಗೆ ಇರಬಾರದು ಅಲ್ಲದೆ ಆಕೆಯು ಎಂದು ತನ್ನ

ಅಪ್ಪಣೆಯನ್ನು ನಿರಾಕರಿಸದರಾಗಲೀ, ಅಥವ ತನಗೆ ಅಪಮಾನವುಂಟಾಗು ವಂತೆ ನಡೆದರಾಗಲೀ, ತನ್ನ ಮಾತಿಗೆ ಪ್ರತಿಯಾಗಿ ನುಡಿದರಾಗಲೀ ಅಂದು ತಾನು ಅವಳನ್ನು ಬಿಟ್ಟುಹೋಗತಕ್ಕವನು, ಎಂಬೀ ನಿಬಂಧನೆಗಳಿಗೆ ಒಳ ಪಟ್ಟು, ತಾನು ಯಾವ ಸ್ಥಳದಲ್ಲಿ ಯಾವ ಸ್ಥಿತಿಯಲ್ಲಿ ಅಪೇಕ್ಷಿಸಿದರೆ ಅಲ್ಲಿ ಯಾರು ಸಾಲಂಕೃತ ಕನ್ಯಾದಾನ ಮಾಡಿಕೊಡುವರೋ ಆ ಕನ್ಯೆಯನ್ನು ತಾನು ಸ್ವೀಕರಿಸಿ ವಿವಾಹವಾಗುವುದಾಗಿ ಒಪ್ಪಿದ್ದನು. ಈ ಜರತ್ಕಾರುವಿನ ಉದರ ಸಂಭೂತನಾದ ಕುವರನಿಂದಲೇ ತಮ್ಮ ವಂಶಕ್ಕೆ ಪ್ರಾಪ್ತವಾಗುವ ಬಯಂಕರ ಆಪದವು ನಿವಾರಣೆಯಾಗುವುದೆಂಬ ಬ್ರಹ್ಮದೇವನ ವಚನ ದಲ್ಲಿ ವಿಶ್ವಾಸವುಂಟಾಗಿರಲು, ತಕ್ಷಕನು, ತನ್ನ ತಂಗಿಯಾದ ಜರತ್ಕಾರು ಎಂಬ ಕನ್ಯೆಯನ್ನು ಜೊತೆಗೇ ಕರೆದುಕೊಂಡು ಈ ಬ್ರಾಹ್ಮಣನು ಎಲ್ಲಿ ಸಂಚ ರಿಸಿದಗಲ್ಲಿ ಸುತ್ತುತ್ತಾ ಅತನು ಅಪೇಕ್ಷಿಸಿದಾಗ ಕನ್ಯಾಪ್ರದಾನಮಾಡಿ ತನ್ನ ವಂಶಕ್ಕೊಂದು ರಕ್ಷಣೆಯನ್ನು ಪಡೆಯಬೇಕೆಂದು ಆಶೋತ್ತರವನ್ನಿಟ್ಟು ಕೊಂಡಿದ್ದನು ಹೀಗಿರುವಲ್ಲಿ ಜರತ್ಕಾರುವು ಒಂದಾನೊಂದುದಿನ ಮಧ್ಯಾ ಹ್ನದ ವೇಳೆಯಲ್ಲಿ ಒಂದು ನಟ್ಟಡವಿಯಲ್ಲಿ ನಿಂತು,-ನನಗೆ ಕನ್ಯಾಪ್ರದಾನ ಮಾಡಿ ನನ್ನ ವಂಶೋದ್ಧಾರಮಾಡುವ ಮಹನೀಯರು ಯಾರಾದರೂ ಉಂಟೋ' ಎಂದು ಮೂರು ಸಾರಿ ಕೂಗಿದನು. ಈ ವಿಚಿತ್ರರೀತಿಯ ಕನ್ಯಾ ಯಾಚನೆಗೆ ಒಪ್ಪಿ ಯಾವ ಮಾನವನು ಮುಂದೆ ಬಂದಾನು? ಆದರೆ ಮೇಲೆ ಹೇಳಿದಂತೆ ತಕ್ಷಕನು ತನ್ನ ಒಂದು ಕಾರ್ಯಗೌರವದಿಂದ ಈತನ ಬೆನ್ನ ಹಿಂದೆಯೇ ಅದೃಶ್ಯನಾಗಿ ಸಂಚರಿಸುತ್ತಿದ್ದುದರಿಂದ ಅವನು ಒಡನೆ ಪ್ರತ್ಯಕ್ಷ ನಾಗಿ,—'ಅಯ್ಯಾ ಬ್ರಾಹ್ಮಣೋತ್ತಮನೇ, ನಿನಗೆ ನನ್ನೀತಂಗಿಯನ್ನು ಕೊಟ್ಟು ವಿವಾಹಮಾಡಬೇಕೆಂದು ಸಂಕಲ್ಪಿಸಿದ್ದೇನೆ. ಈ ಲಕ್ಷಣವಂತೆ ಯನ್ನು ಸ್ವೀಕಾರಮಾಡು' ಎಂದು ನುಡಿದನು. ಜರತ್ಕಾರುವು, ಆತನನ್ನು ಕುರಿತು, ಕನ್ಯಾಪ್ರದಾನ ವಿಚಾರದಲ್ಲಿ ತನ್ನ ನಿಬಂಧನೆಗಳನ್ನು ಆತನಿಗೆ ತಿಳಿಸಿ, ಅವುಗಳಿಗೆ ಆತನ ಸಮ್ಮತಿಯುಂಟೋ ಎಂದು ಪ್ರಶ್ನಿಸಿದನು ತನ್ನ ವಂಶೋದ್ಧರಣ ವಿಚಾರದಲ್ಲಿ ಅತ್ಯಾತುರನಾಗಿದ್ದ ತಕ್ಷಕನು, ಆ ನಿಬಂಧನೆ ಗಳೆಲ್ಲವೂ ತನಗೆ ಸಮ್ಮತವುಂಟೆಂದು ತಿಳಿಸಿ, ಬಹು ಸಂಭ್ರಮದಿಂದ ತನ್ನ ತಂಗಿಯ ವಿವಾಹ ಮಹೋತ್ಸವವನ್ನು ನಡೆಸಿ, ತನ್ನ ತಂಗಿಗೂ ಆ ಜರ

ತ್ಕಾರು ಬ್ರಾಹ್ಮಣನಿಗೂ ವಾಸಯೋಗ್ಯವಾದ ಒಂದು ದಿವ್ಯಸೌಧವನ್ನು ಸಕಲ ಉಪಭೋಗಸಾಮಗ್ರಿಗಳ ಸಮೇತವಾಗಿ ನಿರ್ಮಿಸಿಕೊಟ್ಟು ಶ್ರದ್ಧಾವಂತನಾಗಿ ನೋಡಿಕೊಳ್ಳುತ್ತಿದ್ದನು.

ಹೀಗೆ ವಿವಾಹವು ತನ್ನಿಚ್ಛೆಯಂತೆಯೇ ಸಾಂಗವಾಗಿ ನೆರವೇರಲು, ಜರತ್ಕಾರು ಬ್ರಾಹ್ಮಣನು ವಿನೀತಳಾದ ಆ ಸಾಧ್ವೀಮಣಿ - ಆ ನಾಗಕನ್ಯೆಯೊಂದಿಗೆ ಸಂಸಾರಮಾಡಿಕೊಂಡು ಆ ಮನೆಯಲ್ಲಿ ಮುಂದೆ ಕೆಲಕಾಲವಾಸ ಮಾಡಿಕೊಂಡಿದ್ದನು. ತಕ್ಷಕಾನುಜೆಯಾದ ಜರತ್ಕಾರಳು, ಉಗ್ರತಪಸ್ವಿಯಾದ ತನ್ನ ಭರ್ತನ ಚಿತ್ತವೃತ್ತಿಯನ್ನು ತಿಳಿದವಳಾಗಿ ಆತನಿಂದ ತನ್ನ ಮಾತೃವಂಶಕ್ಕೆ ಆಗಬೇಕಾಗಿದ್ದ ಮಹದುಪಕಾರವನ್ನೂ ಗಮನದಲ್ಲಿಟ್ಟುಕೊಂಡು, ಸರ್ವವಿಧಗಳಿಂದಲೂ ಆತನ ಆಜ್ಞೆಯನ್ನು ಪರಿಪಾಲಿಸುತ್ತ, ಅನುಸರಿಸಿಕೊಂಡಿದ್ದಳು. ಹೀಗೆ ಕೆಲವು ದಿನಗಳು ಕಳೆಯಲು, ಒಂದುದಿನ ಜರತ್ಕಾರಳು ಋತುಸ್ನಾನಮಾಡಿ, ಅನುರಾಗಯುಕ್ತಳಾಗಿ ಪುತ್ರಾಪೇಕ್ಷೆಯಿಂದ ತನ್ನ ಭರ್ತನ ಸೇವೆಯನ್ನೆಸಗಲು ಆತನ ಅನುಗ್ರಹದಿಂದ ಆಕೆಯಲ್ಲಿ ತೇಜಸ್ವಿಯಾದ ಗರ್ಭವು ಸ್ಥಾಪಿಸಲ್ಪಟ್ಟಿತು. ಜಗತ್ಕಾರಳು ತಾನು ಗರ್ಭಿಣಿಯಾದ ವಿಚಾರವನ್ನು ತಿಳಿದು ಪರಮ ಸಂತುಷ್ಟಳಾಗಿ, ಗುರುದೇವತಾರಾಧನೆಯಲ್ಲಿ ನಿರತಳಾಗಿರುತ್ತಿರಲು, ಹಾಗೆ ನಾಲ್ಕೈದು ತಿಂಗಳುಗಳು ಕಳೆದುವು. ಹೀಗಿರುತ್ತಿರಲೊಂದುದಿನ, ಜರತ್ಕಾರು ಬ್ರಾಹ್ಮಣನು ಮಧ್ಯಾಹ್ನಭೋಜನಾತ್ಪರ ಆಯಾಸ ಪರಿಹಾರಕ್ಕೆಂದು ತನ್ನ ಪತ್ನಿಯ ತೊಡೆಯ ಮೇಲೆ ತಲೆಯನ್ನಿಟ್ಟು ಶಯನಮಾಡಿದನು. ಜರತ್ಕಾರಳೂ ಪತಿ ಶುಶ್ರೂಷಾನಿರತಳಾದುದರಿಂದ ಲೇಶಮಾತ್ರ ಶಬ್ದವಾಗಲೂ ಅವಕಾಶಕೊಡದೆ ಅಲುಗದೆ, ಗಾಳಿಬೀಸುತ್ತಾ ಸರ್ವವಿಧದಿಂದಲೂ ಆತನಿಗೆ ನಿದ್ರಾಭಂಗವಾಗದಂತೆ ಕಾಯ್ದುಕೊಂಡಿದ್ದಳು. ಮಧ್ಯಾಹ್ನಕಳೆದು, ಸಾಯಂಕಾಲವು ಪ್ರಾಪ್ತವಾಗುವ ಹೊತ್ತಾದರೂ ಜರತ್ಕಾರವು ಎಚ್ಚರಗೊಳ್ಳಲೇ ಇಲ್ಲ. ಸಂಧ್ಯಾಕಾಲವಲ್ಲಿ ಸೂರ್ಯನಿಗೆ ಅರ್ಘ್ಯಾದಿಗಳನ್ನು ಕೊಡಬೇಕಾದ ಆಗತ್ಯವಾದ ನಿತ್ಯಕೃತ್ಯಗಳಿರುವಲ್ಲಿ ಬ್ರಹ್ಮನಿಷ್ಠನಾದ ತನ್ನ ಪತಿಯು ನಿದ್ರಾಸಕ್ತನಾಗಿ ಮಲಗಿಬಿಟ್ಟುದು ಆ ಸಾಧ್ವಿಗೆ ಸಹನೆಯಾಗಲಿಲ್ಲ. ಆದರೆ ಎಬ್ಬಿಸಿದರೆಲ್ಲಿ ಶೀಘ್ರಕೋಪಿಯಾದ ಆತನು ತನ್ನಲ್ಲಿ ದೋಷಾರೋಪಣೆಮಾಡಿ ಶಪಿಸುವ

ನೋ, ಹಾಗೆ ಆತನು ಕೋಪಗೊಳ್ಳುವುದರಿಂದ ಮುಂದೇನು ಅನರ್ಥವು ಪ್ರಾಪ್ತವಾಗುವುದೋ ಎಂಬ ಶಂಕೆಯೂ ಉಂಟಾಯಿತು. ಆದರೂ ಕರ್ಮನಿಷ್ಠ ಚಿತ್ತವೃತ್ತಿಯುಳ್ಳವಳಾದ ಆ ಪತಿವ್ರತೆಯು, ತನಗೆ ಆ ಮೂಲಕ ಯಾವ ಬಗೆಯ ತೊಂದರೆಯುಂಟಾಗುವಂತಿದ್ದರೂ ಅನುಭವಿಸಲು ಸಿದ್ಧಳಾಗಿ, ತನ್ನ ಪತಿಯ ನಿತ್ಯಕರ್ಮಕ್ಕೆ ಲೋಪವುಂಟಾಗದಂತಾಗಲೆಂಬ ಸದುದ್ದೇಶದಿಂದ-'ಪ್ರಭೋ ಸಂಧ್ಯಾಕಾಲವಾಯಿತು. ಈ ವೇಳೆಯಲ್ಲಿ ಶುಚಿಯಾಗಿ ಶುದ್ಧಾಚಮನಪೂರ್ವಕ ಸೂರ್ಯಾರಾಧನೆ ಮಾಡತಕ್ಕದು ಆವಶ್ಯಕವಲ್ಲವೆ ?' ಎಂದು ಮೆಲ್ಲನೆ ನುಡಿದು, ಆತನ ದೇಹವನ್ನು ಸೋಂಕಿದಳು. ಅಷ್ಟುಮಾತ್ರಕ್ಕೇ ಆ ಬ್ರಾಹ್ಮಣನು ಎಚ್ಚರಗೊಂಡು ತನ್ನನ್ನು ಹಾಗೆ ಅರೆನಿದ್ರೆಯಲ್ಲಿ ಎಚ್ಚರಗೊಳಿಸಿದ ಕಾರಣವೇನೆಂದು ಗರ್ಜಿಸಿದನು. ಜರತ್ಕಾರಳು, ಸಂಧ್ಯಾಕಾಲವು ಮೀರಿಹೋಗುತ್ತಿದ್ದುದರಿಂದ ನಿತ್ಯಕರ್ಮಕ್ಕೆ ಲೋಪವುಂಟಾಗುವುದೆಂಬ ಕಾರಣದಿಂದ ಹಾಗೆ ಮಾಡಿದೆನೆಂದೂ, ತನ್ನಲ್ಲಿ ತಪ್ಪಿದ್ದರೆ ಕ್ಷಮಿಸಬೇಕೆಂದೂ ಬೇಡಿಕೊಂಡಳು. ಆಗಲಾ ಬ್ರಾಹ್ಮಣನು-'ಏನು! ನಾನು ನಿದ್ರಿಸುತ್ತಿರುವಾಗ, ನನ್ನಿಂದ ಅರ್ಘ್ಯಸ್ವೀಕಾರಮಾಡದೆ ಅಸ್ತಮಿಸಲು ಸೂರ್ಯನಿಗೆ ಎಷ್ಟು ಧೈರ್ಯ ? ನಾನು ಅಷ್ಟು ತಪೋಹೀನನೆಂದೆಣಿಸಿದೆಯಾ ! ಹೀಗೆ ನೀನು ನನ್ನ ಯೋಗ್ಯತೆಯಲ್ಲಿ ತುಚ್ಛಭಾವವನ್ನುಳ್ಳವಳಾಗಿ ನನಗೆ ಅವಮಾನಮಾಡಿದುದರಿಂದ ನಾನು ಈ ಸ್ಥಳದಲ್ಲಿ ಇನ್ನುಮುಂದೆ ನಿಲ್ಲಲಾರೆನು. ನಾನು ವಿವಾಹಕಾಲದಲ್ಲಿ ಮಾಡಿದ ಪ್ರತಿಜ್ಞೆಯನ್ನು ಜ್ಞಾಪಿಸಿಕೋ !' ಎಂದು ನುಡಿದು ಹೊರಡಲುದ್ಯುಕ್ತನಾದನು. ಜರತ್ಕಾರಳು ತನ್ನ ಅವಜ್ಞತೆಯಿಂದ ಪ್ರಾಪ್ತವಾದ ಈ ಪರಿಸ್ಥಿತಿಯನ್ನು ಕಂಡು ಅತಿಶಯ ದುಃಖಿತಳಾಗಿ, ಆತನನ್ನು ತನ್ನ ಅಪರಾಧವನ್ನು ಕ್ಷಮಿಸೆಂದು ಎಷ್ಟು ಬಗೆಯಿಂದ ಬೇಡಿಕೊಂಡರೂ ಅದರಿಂದ ಏನೂ ಪ್ರಯೋಜನವುಂಟಾಗಲಿಲ್ಲ. ಕೊನೆಗೆ-'ಪ್ರಭೋ, ತಮ್ಮ ತೇಜಸ್ವಿವೀರ್ಯದಿಂದ ನನ್ನಲ್ಲಿ ಸತ್ಪುತ್ರೋತ್ಪಾದನೆಯಾಗಿ ತನ್ಮೂಲಕ ಸರ್ಪಕುಲವು ಮುಂದೆ ಅದಕ್ಕೆ ಪ್ರಾಪ್ತವಾಗಲುಳ್ಳ ಒಂದಾನೊಂದು ದುರಂತ ಸಂಕಟದಿಂದ ಪಾರುಗಾಣಬೇಕೆಂದು, ನಮ್ಮಣ್ಣ ತಕ್ಷಕನು ಬೆಟ್ಟದಷ್ಟು ಆಸೆಯನ್ನಿಟ್ಟುಕೊಂಡು, ತಮ್ಮ ನಿಬಂಧನೆಗಳನ್ನೆಲ್ಲವನ್ನೂ ಶಿರಸಾ ಮಾನ್ಯಮಾಡಿ

ನನ್ನನ್ನು ತಮಗೆ ಒಪ್ಪಿಸಿದನು. ಆದರೆ ಈ ಮಧ್ಯದಲ್ಲೇ ನನಗೆ ತಮ್ಮ ವಿಯೋಗವಾಗಿ, ನಮ್ಮಿಬ್ಬರ ಸಮಾಗಮದಿಂದ ಯಾವ ಫಲವೂ ಲಭ್ಯವಾಗ ದಿದ್ದರೆ, ಆತನ ಈವರೆಗಿನ ಪ್ರಯತ್ನವೆಲ್ಲವೂ ವಿಫಲವಾಗಿ, ಆತನು ಹತಾಶ ನಾಗುವನಲ್ಲಾ-ಅಕ್ಕಟಾ, ನನ್ನಿಂದ ನನ್ನ ಮಾತೃವಂಶಕ್ಕೆ ಎಂತಹ ಅಪ ಚಾರವು ಆಚರಿಸಲ್ಪಟ್ಟಿತು' ಎಂದು ಮರುಗಿ ರೋದಿಸತೊಡಗಿದಳು.

ಸಾಧ್ವಿಯಾದ ತನ್ನಾ ಪತ್ನಿಯು ಹತಾಶಳಾಗಿ ರೋದಿಸುತ್ತಿದ್ದುದು, ಜರತ್ಕಾರುವಿನ ಮನಸ್ಸಿನಲ್ಲಿ ಲೇಶಮಾತ್ರ ಕನಿಕರವನ್ನುಂಟುಮಾಡಲು, ಆತನು ಆಕೆಯನ್ನು ಕುರಿತು-'ಸಾಧ್ವೀಮಣಿ, ಚಿಂತಿಸಬೇಡ. ನಿನ್ನ ಗರ್ಭ ದಲ್ಲಿ ಸ್ಥಾಪಿತವಾಗಿರುವ ನನ್ನ ವೀರ್ಯವು ಎಂದಿಗೂ ವ್ಯರ್ಥವಾಗದು. ಯುಕ್ತಕಾಲದಲ್ಲಿ ಮಹಾತೇಜಸ್ವಿಯೂ ತಪಸ್ಸಿದ್ಧನೂ ಆದ ಪುತ್ರನು ನಿನ್ನ ಉದರದಲ್ಲಿ ಜನಿಸಿ, ನಿನ್ನ ಅಣ್ಣನ ಇಚ್ಛಾನುಸಾರವಾಗಿ ಸರ್ಪಕುಲವನ್ನು ಉದ್ಧರಿಸುವನು ಚಿಂತಿಸಬೇಡ. ಆ ಮಗನಿಂದ ನಿನಗೂ ಶುಭವಾಗುವು ದು. ನನ್ನ ಅಗಲಿಕೆಗಾಗಿ ವ್ಯಥೆಪಡಬೇಡ' ಎಂದು ನುಡಿದು ಆ ಮಹರ್ಷಿ ಯು ಯಥೇಚ್ಛವಾಗಿ ಹೊರಟುಹೋದನು. ಜರತ್ಕಾರಳು-'ಬೇಡ ಬೇಡ, ಕ್ಷಮಿಸಿರಿ' ಎಂದು ಬೇಡಿಕೊಳ್ಳುತ್ತಿದ್ದರೂ, ಆ ಗಮನವೇ ಇಲ್ಲದೆ, ಜರತ್ಕಾ ರುವು ಹೊರಟು ನಡೆಯಲಾಗಿ, ಆ ಸಾಧ್ವೀಮಣಿಯು ತನ್ನ ಅವಿವೇಕ ದಿಂದ ಉಂಟಾದ ತನ್ನಾ ದುರ್ದೆಸೆಗಾಗಿ ರೋದಿಸುತ್ತಾ, ಮುಂದೇನು ಮಾಡ ಬೇಕೆಂದು ತೋರದೆ ಕೆಲಹೊತ್ತು ಕಳೆಯಲಾಗಿ ತರುವಾಯ ತನ್ನ ಅಣ್ಣ ನಿದ್ದಲ್ಲಿಗೆ ಹೋಗಿ ನಡೆದ ಸಂಗತಿಯನ್ನು ತಿಳಿಸಿದಳು. ಮುನಿಯು ಕೋಪ ಗೊಂಡು ಹೊರಟು ಹೋದನೆಂದು ಕೇಳುತ್ತಲೇ, ತಕ್ಷಕನು ಗಾಬರಿಗೊಂಡು ತನ್ನ ಅಷ್ಟುದಿನಗಳ ಪರಿಶ್ರಮವೂ, ಆಶಯವೂ ವ್ಯರ್ಥವಾದುವಲ್ಲಾ ಎಂ ದು ಮರುಗಿ-'ಅಮ್ಮಾ ನಿನ್ನನ್ನು ಶೀಘ್ರಕೋಪಿಯಾದ ಆತನಿಗೆ ಕೊಟ್ಟು ವಿವಾಹ ಮಾಡಿದುದರಲ್ಲಿ ನನಗಿದ್ದ ಆಶಯವನ್ನೂ ಆತನ ಪ್ರತಿಜ್ಞೆಯನ್ನೂ ತಿಳಿದಿದ್ದೂ ಸಹ ಸ್ವಲ್ಪದರಲ್ಲಿ ದುಡುಕಿ ಕಾರ್ಯಘಾತಮಾಡಿಬಿಟ್ಟೆಯಲ್ಲಾ!'' ಎಂದು ಮೂದಲಿಸಿದನು. ಆಗಲಾಕೆಯು, ಆತನಿಂದ ತನ್ನಲ್ಲಿ ಗರ್ಭಪ್ರ ದಾನವಾಗಿರುವ ಸಂಗತಿಯನ್ನೂ ಆತನು ಹೊರಟು ಹೋಗುವಾಗ್ಗೆ ತಾನು ಪ್ರಾರ್ಥಿಸಿಕೊಳ್ಳಲಾಗಿ ಆತನು ನುಡಿದ ಮಾತುಗಳನ್ನೂ ಹೇಳಿ, ತನ್ನ ಉದ

ರವಲ್ಲಿ ವೃದ್ಧಿಹೊಂದುತ್ತಿರುವ ಕುವರನಿಂದ ಸರ್ಪಕುಲಕ್ಕೆ ಪ್ರಾಪ್ತವಾಗ ಲುಳ್ಳ ಆಪತ್ತು ನಿವಾರಣೆಯಾಗುವುದೆಂದು ನುಡಿದ ತನ್ನ ಪತಿಯ ವಾಕ್ಯ ದಲ್ಲಿ ಭರವಸೆಯನ್ನಿಡೆಂದು ನುಡಿದಳು. ಆ ವಾಕ್ಯಗಳಿಂದ ತಕ್ಷಕನ ಮನಸ್ಸು ಸ್ವಲ್ಪ ಶಾಂತವಾಗಲು, ಆತನು ತನ್ನ ಸೋದರಿಯಲ್ಲಿ ಅಧಿಕ ವಿಶ್ವಾಸ ಆದ ರಗಳನ್ನಿಟ್ಟು ಆಕೆಯ ಗರ್ಭವನ್ನು ವಿಶೇಷ ಜಾಗರೂಕತೆಯಿಂದ ರಕ್ಷಿಸಿ ಕೊಂಡುಬಂದನು.

ವಿಧಿನಿಯಮದಂತೆ ಜರತ್ಕಾರಳ ಗರ್ಭವು ಒಂಬತ್ತು ತಿಂಗಳಕಾಲ ಬೆಳೆದಮೇಲೆ, ಮುಂದೆ ಹತ್ತನೆಯ ತಿಂಗಳಲ್ಲಿ ಒಂದಾನೊಂದು ಶುಭದಿವ ಸದ ಶುಭಮುಹೂರ್ತದಲ್ಲಿ ಸಕಲ ಶುಭಗ್ರಹಗಳೂ ಉಚ್ಚಸ್ಥಾನದಲ್ಲಿ ದ್ದೊಂದು ದಿವ್ಯ ಲಗ್ನದಲ್ಲಿ ಆಕೆಯು ಪುತ್ರರತ್ನವನ್ನು ಪ್ರಸವಿಸಿದಳು. ತನ್ನ ತಂಗಿಗೆ ಪುತ್ರೋತ್ಸವವಾಯಿತೆಂಬ ವಾರ್ತೆಯನ್ನು ಕೇಳಿದೊಡನೆಯೇ ತಕ್ಷಕನು ಪರಮಸಂತೋಷಭರಿತನಾಗಿ ಮಹೋತ್ಸವಗಳನ್ನು ನಡೆಸಿದನು. ಸರ್ಪಲೋಕವೇ ಆನಂದಸಾಗರದಲ್ಲಿ ಮುಳುಗಿ ಓಲಾಡಿತು. ಯುಕ್ತರೀತಿ ಯಲ್ಲಿ ಮಂಗಳಸ್ನಾನಾದಿಗಳೂ ಬಾಣಂತಿತನವೂ ಮುಗಿದು, ಜರತ್ಕಾರಳು ತನ್ನಾಕಂದನನ್ನು ವಿಶೇಷ ಪ್ರೇಮಸೌಹಾರ್ದಭಾವಗಳಿಂದ ರಕ್ಷಿಸುತ್ತಿರಲು ಆ ಬಾಲಕನು ಅತಿಶಯ ತೇಜಸ್ವಿಯಾಗಿ ದಿನದಿನಕ್ಕೆ ಪ್ರವರ್ಧಮಾನನಾ ಗುತ್ತಿದ್ದನು. ಆ ಕುವರನಿಗೆ ಆಸ್ತಿಕನೆಂದು ನಾಮಕರಣ ಮಾಡಿದರು. ವಾಸುಕಿಯ ಅರಮನೆಯಲ್ಲಿ ದಾದಿಯರು ಪ್ರೇಮಾದರಗಳಿಂದ ಸಂರಕ್ಷಿಸುತ್ತಿ ರಲು, ಅಗ್ನಿಸಮಾನ ತೇಜಸ್ವಿಯಾದ ಜರತ್ಕಾರು ಮುನೀಶ್ವರನ ವೀರ್ಯೋ ದ್ಭವನಾದ ಆಸ್ತಿಕನು ವಿದ್ಯಾಬುದ್ಧಿಗಳಲ್ಲೂ, ತಪಸ್ಸು, ಇಂದ್ರಿಯನಿಗ್ರಹ ಮುಂತಾದುವುಗಳಲ್ಲೂ ಪರಮೇಶ್ವರ ಸುತನಾದ ಕುಮಾರಸ್ವಾಮಿಯಂತೆ ತೇಜೋನಿಧಿಯಾಗಿ, ಅದ್ಯಂತ ಸರ್ಪಕುಲಕ್ಕೇ ಗೌರವಾಸ್ಪದವಾಗಿ ಬೆಳೆ ಯುತ್ತಿದ್ದನು.



ಅಧ್ಯಾಯ ೪     'ಯಜ್ಞಾರಂಭ'

ಮಹಾನುಭಾವನಾದ ಪರೀಕ್ಷಿನ್ನರೇಂದ್ರನ ಮರಣಾನಂತರ ಆತನ ಪುತ್ರನಾದ ಜನಮೇಜಯಮಹಾರಾಜನು ಶ್ರುತಸೇನ, ಉಗ್ರಸೇನ, ಭೀಮಸೇನ ಎಂಬ ತನ್ನ ತಮ್ಮಂದಿರಿಂದ ಕೂಡಿ ಧರ್ಮಾತ್ಮನೆನ್ನಿಸಿ ರಾಜ್ಯಭಾರ ಮಾಡಿಕೊಂಡಿದ್ದನು. ಹೀಗೆ ಕೆಲವು ಕಾಲ ಕಳೆಯಲಾಗಿ, ಧರ್ಮಾತ್ಮನಾದ ತನ್ನ ತಂದೆಯು ದುರ್ಮರಣಹೊಂದಿದ ಕಾರಣವನ್ನು ತಿಳಿಯಬೇಕೆಂದು ಆತನಿಗೆ ಆಸೆಯಾಯಿತು. ಆಗ ಆತನು ತನ್ನ ತಂದೆಯಕಾಲದಿಂದಲೂ ಇದ್ದ ವೃದ್ಧಮಂತ್ರಿಗಳನ್ನು ಕುರಿತು, -" ಮಂತ್ರಿಪುಂಗವರೇ ಪೂಜ್ಯನಾದ ನಮ್ಮ ತಂದೆಯು ಋಷಿಶಾಪಗ್ರಸ್ತನಾಗಿ ತಕ್ಷಕನ ವಿಷಜ್ವಾಲೆಯಿಂದ ಮೃತನಾದನಷ್ಟೆ! ಆಗ್ಗೆ ಆತನನ್ನು ವಿಷಬಾಧೆಯಿಂದ ಸಂರಕ್ಷಿಸುವ ವೈದ್ಯಶ್ರೇಷ್ಠನಾಗಲೀ, ಮಂತ್ರಿಕನಾಗಲೀ ಯಾವನೂ ದೊರೆಯಲಿಲ್ಲವೇ? ಇಷ್ಟು ವಿಶಾಲ ಪ್ರಪಂಚದಲ್ಲಿ ನಮ್ಮ ತಂದೆಯಂತಹ ಸಾರ್ವಭೌಮನನ್ನು ಆ ವಿಷಸರ್ಪದ ಬಾಧೆಯಿಂದ ಕಾಪಾಡುವ ಸಮರ್ಥನೊಬ್ಬನೂ ಇರಲಿಲ್ಲವೆ?" ಎಂದು ಪ್ರಶ್ನಿಸಿದನು. ಆಗ ಆ ಮಂತ್ರಿಗಳು -' ಮಹಾರಾಜನೇ ಲಾಲಿಸು. ಶಮೀಕಮುನೀಂದ್ರನ ಪುತ್ರನಾದ ಶೃಂಗಿಯು ಪರೀಕ್ಷಿದ್ರಾಜನು ಸರ್ಪದಷ್ಟನಾಗಿ ಮೃತನಾಗಲೆಂದು ಶಾಪಕೊಟ್ಟ ವೃತ್ತಾಂತವನ್ನು ಋಷಿಕುಮಾರನ ಮೂಲಕ ತಿಳಿದ ನಿಮ್ಮ ತಂದೆಯು ಉಪಾಯರಹಿತನಾಗಿ, ಶ್ರೀ ಶುಕಾಚಾರ್ಯರಿಂದ ಭಾಗವತ ಕಥಾಮೃತ ಶ್ರವಣಮಾಡಿ ಸದ್ಗತಿಯನ್ನು ಸಾಧಿಸಿಕೊಳ್ಳಲಿಚ್ಛಿಸಿ, ಜೀವಿತದಲ್ಲಿ ಆಸೆಯನ್ನು ಬಿಟ್ಟು ಏಳನೆಯದಿನವನ್ನು ನಿರೀಕ್ಷಿಸುತ್ತಲಿದ್ದನು. ಆ ಏಳನೆಯದಿನ ಪ್ರಾತಃಕಾಲ ಕಾಶ್ಯಪನೆಂಬೊಬ್ಬ ಬ್ರಾಹ್ಮಣನು ಮಹಾರಾಜನ ಸನ್ನಿಧಿಯನ್ನೈದಿ ಆತನಿಗೆ ತಕ್ಷಕನಿಂದುಂಟಾಗುವ ಬಾಧೆಯನ್ನು ನಿವಾರಿಸಬೇಕೆಂಬ ಇಚ್ಛೆಯಿಂದ ಹಸ್ತಿನಾಪಟ್ಟಣಾಭಿಮುಖವಾಗಿ ಪ್ರಯಾಣವಾಗಿ ಬರುತ್ತಿದ್ದನಂತೆ! ಅಷ್ಟರಲ್ಲಿ ತಕ್ಷಕನು ಈ ಸುಳಿವನ್ನು ಹೇಗೋ ತಿಳಿದು, ಅವನನ್ನು ಮಾರ್ಗದಲ್ಲೇ ಸಂಧಿಸಿ, -' ಅಯ್ಯಾ ಬ್ರಾಹ್ಮಣೋತ್ತಮಾ, ಯಾವ ಮಹತ್ಕಾರ್ಯಸಾಧನೆಯನ್ನು ಮನಸ್ಸಿನಲ್ಲಿಟ್ಟು ಇಷ್ಟು ತ್ವರಿತಗತಿಯಿಂದ ನಡೆಯುತ್ತಿ

ರುವೆ? ನಿನ್ನ ಪ್ರಯಾಣದ ಉದ್ದೇಶವೇನು?' ಎಂದು ಪ್ರಶ್ನೆಮಾಡಿದನು. ಆಗಲಾ ಬ್ರಾಹ್ಮಣನು, ತನ್ನನ್ನು ಪ್ರಶ್ನಿಸುತ್ತಿರುವ ಅವನು ಯಾರೆಂಬ ಸಂಗತಿಯನ್ನು ಅರಿತವನಲ್ಲವಾದುದರಿಂದ-' ಅಯ್ಯಾ ಕೇಳು, ಈ ದಿನ ಸಾರ್ವಭೌಮನಾದ ಪರೀಕ್ಷಿದ್ರಾಜನು ತಕ್ಷಕನಿಂದ ಕಚ್ಚಲ್ಪಟ್ಟು ಮೃತನಾಗುವನಂತೆ! ಆ ಸಂದರ್ಭದಲ್ಲಿ ವಿಷಚಿಕಿತ್ಸೆಮಾಡಿ ಆತನನ್ನು ಪುನಃ ಬದುಕಿಸಬೇಕೆಂಬ ಮಹೋದ್ದೇಶದಿಂದ ನಾನು ಆತನ ಬಳಿಗೆ ಹೋಗುತ್ತಿದ್ದೇನೆ' ಎಂದನು. ಆಗ ತಕ್ಷಕನು-' ಅಯ್ಯಾ ನಿನಗೇನು ಹುಚ್ಚೋ ಹೇಗೆ? ತಕ್ಷಕನಂತಹ ಸರ್ಪವು ಒಂದು ಪ್ರಾಣಿಯನ್ನು ಕಚ್ಚಿ ಕೊಂದಿರಲಾಗಿ ಅದನ್ನು ಪುನಃ ಬದುಕಿಸುತ್ತೇನೆಂಬುದು ವ್ಯರ್ಥಪ್ರಯತ್ನವಲ್ಲವೆ? ಈ ಅಸಾಧ್ಯಕಾರ್ಯಕ್ಕಾಗಿ ಏಕೆ ಪ್ರಯತ್ನಿಸುವೆ? ಮನುಷ್ಯನು, ತಾನು ಕೈಕೊಳ್ಳುವ ಕಾರ್ಯಸ್ವಭಾವವೇನು, ತನ್ನ ಬಲವೆಷ್ಟರದು ಎಂಬ ವಿಚಾರವಿಲ್ಲದೆ ಕಾರ್ಯೋದ್ಯುಕ್ತನಾದರೆ ಅವನಿಗೆ ವೃಥಾ ಶ್ರಮವೂ ಅಪಮಾನವೂ ಮಾತ್ರವೇ ಫಲವಾಗುವವಲ್ಲದೆ ಬೇರಲ್ಲ: ಇಗೋ ನೋಡು, ನಾನೇ ತಕ್ಷಕನು. ಈಗ ನಾನು ಈ ಹಸಿಯ ಆಲದಮರವನ್ನು ನನ್ನ ವಿಷಜ್ವಾಲೆಯಿಂದ ದಹಿಸುತ್ತೇನೆ ನೀನಿದನ್ನು ಬದುಕಿಸುವುದಾದರೆ-ನೀನು ನಿನ್ನ ವಿದ್ಯಾಬಲದಿಂದ ರಾಜನನ್ನೂ ಬದುಕಿಸಬಲ್ಲೆ ಎಂಬುದು ನಿರ್ಧರವಾಗುವುದು' ಎಂದು ನುಡಿದು, ಆ ಮರವನ್ನು ಸುತ್ತಿಕೊಂಡು ಕಚ್ಚಿ ತನ್ನ ವಿಷವನ್ನು ಸುರಿಸಿಬಿಟ್ಟನು. ಒಡನೆ ಎಳೆದಳಿರುಗಳಿಂದ ಶೋಭಿಸುತ್ತ ಸುಮನೋಹರವಾಗಿದ್ದ ಆ ವಟವೃಕ್ಷವು ಬೇಸಗೆಯ ಚಂಡಸೂರ್ಯನ ಮಧ್ಯಾಹ್ನದ ಕಿರಣಗಳಿಂದ ಒಣಗಿಹೋದ ಬಾಳೆಯಸುಳಿಯಂತೆ ಬತ್ತಿಹೋದುದಲ್ಲದೆ ಒಡನೆ ಭಯಂಕರವಾದ ಆ ವಿಷಜ್ವಾಲೆಯಿಂದ ಭುಗಿಲ್ಭುಗಿಲೆಂದು ಉರಿದು ಕ್ಷಣಮಾತ್ರದಲ್ಲಿ ಬೂದಿಯ ರಾಶಿಯಾಗಿ ಬಿದ್ದುಹೋಯಿತು. ಆಗ ತಕ್ಷಕನು,-' ವಿಪ್ರೋತ್ತಮಾ, ಎಲ್ಲಿ ನಿನ್ನ ವಿದ್ಯಾಸಾಮರ್ಥ್ಯವನ್ನು ತೋರಿಸಿ ಇದನ್ನು ಮೊದಲಿದ್ದಂತೆಯೇ ಬದುಕಿಸಿ ನಿಲ್ಲಿಸು, ನೋಡೋಣ' ಎಂದನು. ಆಗಲಾ ಕಾಶ್ಯಪಬ್ರಾಹ್ಮಣನು, ಒಡನೆ ಶುದ್ಧಾಚಮನಮಾಡಿ ಪೂರ್ವಾಭಿಮುಖವಾಗಿ ಕುಳಿತು, ಮಂತ್ರೋಚ್ಚಾರಣೆಗಾರಂಭಿಸಿ, ಮಂತ್ರಪೂತವಾದ ಜಲವನ್ನು ಆ ಮರದ ಭಸ್ಮರಾಶಿಯಮೇಲೆ

ಪ್ರೋಕ್ಷಿಸುತ್ತಾ ಬರಲು, ಕ್ರಮಕ್ರಮವಾಗಿ ಮರದ ತಾಳೂ ಕೊಂಬೆ ರೆಂಬೆಗಳೂ ಎಲೆ ಹೀಚುಗಳೂ ಉದ್ಭವವಾಗಿ ಸ್ವಲ್ಪ ಹೊತ್ತಿನೊಳಗಾಗಿಯೇ ಪೂರ್ವದಲ್ಲಿದ್ದಂತೆಯೇ ಆದ್ಯಂತ ವೃಕ್ಷವೂ ದೃಷ್ಟಿಗೋಚರವಾಯಿತು. ಈ ಅಪೂರ್ವ ಮಂತ್ರಸಾಮರ್ಥ್ಯವನ್ನು ಕಂಡು ತಕ್ಷಕನು, ಪರಮಾಶ್ಚರ್ಯಪಟ್ಟು -'ಅಯ್ಯಾ ಬ್ರಾಹ್ಮಣೋತ್ತಮಾ, ನಿನ್ನಂತಹ ಅದ್ಭುತ ಮಂತ್ರಜ್ಞರನ್ನು ನಾನು ಇದುವರೆಗೆ ಕಂಡುದಿಲ್ಲ ನಿನ್ನ ತಪೋಮಹಿಮೆಯು ಅದ್ವಿತೀಯವಾದುದು. ತಕ್ಷಕನ ವಿಷಜ್ವಾಲೆಯಿಂದ ಮೃತವಾಗಿ-ಭಸ್ಮವಾದ ವೃಕ್ಷವನ್ನು ಬದುಕಿಸುವುದೆಂದರೆ ಅದು ಲೋಕಕ್ಕೇ ಅಭೂತಪೂರ್ವವಿಚಾರವು. ನೀನು ಹೀಗೆಯೇ ರಾಜನನ್ನೂ ಬದುಕಿಸುವೆಯೆಂಬ ವಿಷಯದಲ್ಲಿ ಸಂಶಯವಿಲ್ಲ. ಹಾಗಾದಲ್ಲಿ ಶೃಂಗಿಮುನಿಪೋತ್ತಮನ ವಚನವು ಸುಳ್ಳಾದಂತಾಗುವುದು. ಶೃಂಗಿಯು, ತನ್ನ ತಂದೆಗೆ ಅಪಮಾನ ಮಾಡಿದ ಆ ಕ್ಷತ್ರಿಯಾಧಮನು, ತಕ್ಷಕನಿಂದ ಕಚ್ಚಲ್ಪಟ್ಟು ಮೃತನಾಗಲಿ ಎಂದು ಶಪಿಸಿದ್ದಾನಾದ್ದರಿಂದ, ಪರೀಕ್ಷಿದ್ರಾಜನು ಈಗ ನನ್ನಿಂದ ಕಚ್ಚಲ್ಪಡುವುದು ಮಾತ್ರವಲ್ಲ - ಮೃತನೂ ಆಗಬೇಕು. ನೀನು ರಾಜಧಾನಿಯನ್ನು ಸೇರಿದೆಯೆಂದರೆ ಆ ಬ್ರಹ್ಮವಾಕ್ಯವು ಸುಳ್ಳಾಗುವುದು. ಆದುದರಿಂದ ನೀನು ಇಲ್ಲಿಂದಲೇ ಹಿಂದಿರುಗುವನಾಗು. ನಿನಗೆ ಆತನಿಂದ ಆಗಬೇಕಾದ ಪ್ರಯೋಜನವೇನೋ, ಏನು ಪ್ರತಿಫಲವನ್ನಪೇಕ್ಷಿಸಿ ಆತನ ಬಳಿಗೆಹೋಗಬೇಕೆಂದು ಹೊರಟಿರುವೆಯೋ ಆ ಸಂಗತಿಯನ್ನು ತಿಳಿಸು. ಅದಕ್ಕೆ ದ್ವಿಗುಣಿತವಾಗಿ ನಾನು ಕೊಡುವೆನು' ಎಂದು ಹೇಳಿದನು. ಆ ಮಾತನ್ನು ಕೇಳಿದ ಕಾಶ್ಯಪಬ್ರಾಹ್ಮಣನು -'ಅಯ್ಯಾ ತಕ್ಷಕನೇ ನಾನು ಬಡತನದ ಬೇಗೆಯನ್ನು ಸಹಿಸಲಾರದೆ, ಇಂತಹ ಆಪತ್ಕಾಲದಲ್ಲಿ ರಾಜನಿಗೆ ಸಹಾಯಮಾಡಿದರೆ ವಿಶೇಷ ಧನಪ್ರಾಪ್ತಿಯಾಗಿ ತನ್ನ ದಾರಿದ್ರ್ಯವು ಹತವಾಗುವುದೆಂಬ ಆಶೋತ್ತರದಿಂದ ರಾಜಸನ್ನಿಧಿಯನ್ನು ಕುರಿತು ಹೋಗುತ್ತಿದ್ದೇನೆ' ಎಂದನು. ಆಗ ತಕ್ಷಕನು, ನಾನೇ ನಿನಗೆ ಅಪರಿಮಿತ ಧನಕನಕಗಳನ್ನು ಕೊಟ್ಟು, ನಿನ್ನ ತಲೆತಲಾಂತರಗಳವರೆಗೂ ನಿನ್ನ ಮನೆಯಲ್ಲಿ ದಾರಿದ್ರ್ಯವು ಇಣಿಕಿ ನೋಡದಂತೆ ಮಾಡುತ್ತೇನೆ. ನೀನಿನ್ನು ಹೀಗೆಯೇ ಹಿಂದಿರುಗು' ಎಂದು ನುಡಿದು, ಆ ಬ್ರಾಹ್ಮಣನನ್ನು ಮುಂದಕ್ಕೆ ಬಿಡದೆ

ನಿರ್ಬಂಧಿಸಿ ಹಿಂದಿರುಗಿಸಿಬಿಟ್ಟನು. ಕೇಳಿದೆಯಾ ರಾಜೇಂದ್ರನೆ, ತಕ್ಷಕನ ಕೇಡಿಗತನವನ್ನು,-ಎಂದು ನುಡಿಯಲು, ಜನಮೇಜಯನು ಸ್ವಲ್ಪ ಸಂದೇಹಪಟ್ಟು - ಮಂತ್ರಿವರ್ಯರೇ, ತಕ್ಷಕ ಕಾಶ್ಯಪರ ಈ ಸಂಭಾಷಣೆಯೂ, ತಕ್ಷಕನು ಮರವನ್ನು ಕಚ್ಚಿ ಸುಟ್ಟಾಗ ಕಾಶ್ಯಪನು ಅವನ್ನು ಬದುಕಿಸಿದುದೂ, ಬಹು ರಹಸ್ಯವಾಗಿ ನಡೆದಿರಬೇಕು. ಆ ಸಂಗತಿಯು ತಮಗೆ ತಿಳಿದಬಗೆಯೇನು - ಎಂದು ಪ್ರಶ್ನಿಸಿದನು. ಅದನ್ನು ಕೇಳಿ ಮಂತ್ರಿಗಳು - ರಾಜೇಂದ್ರನೇ ಕೇಳು, ತಕ್ಷಕ ಕಾಶ್ಯಪರು ದೈವಯೋಗದಿಂದ ಸಂಧಿಸಿ ಸಂಭಾಷಣೆಮಾಡಿ, ಈ ಎಲ್ಲಾ ಕಾರ್ಯಗಳನ್ನೂ ನಡೆಯಿಸಿದಾಗ ಆ ಮರದಮೇಲೆ ಒಬ್ಬ ಬ್ರಾಹ್ಮಣನು ಹತ್ತಿ ಸಮಿತ್ತುಗಳಿಗೋಸ್ಕರ ಒಣಗಿದ ರೆಂಬೆಗಳನ್ನು ಕೊಯ್ಯುತ್ತಿದ್ದನಂತೆ! ಎಲೆಗಳಿಂದ ನಿಬಿಡವಾಗಿದ್ದ ಆ ಮರದಲ್ಲಿ ಈ ಬ್ರಾಹ್ಮಣನು ಇದ್ದ ಸಂಗತಿಯನ್ನು ದೃಷ್ಟಿಸಿ ನೋಡದೆ ತಮ್ಮ ಕಾರ್ಯಾತುರದಿಂದ ತಕ್ಷಕನೂ ಕಾಶ್ಯಪ ಬ್ರಾಹ್ಮಣನೂ ತಮ್ಮ ಲೋಕಾಶ್ಚರ್ಯಕರವಾದ ಕಾರ್ಯವನ್ನು ನಡೆಸಿಬಿಟ್ಟರು. ಆಗ ಪ್ರಾರಂಭಕ್ಕೆ ಮರದೊಂದಿಗೆ ಸುಟ್ಟು ಭಸ್ಮವಾಗಿ, ಪುನಃ ಮಂತ್ರಬಲದಿಂದ ಪುನರುಜ್ಜೀವಿಸಿದ ಆ ಬ್ರಾಹ್ಮಣನು, ರಾಜನು ಮೃತನಾದ ತರುವಾಯ ನಮ್ಮನ್ನು ಸಂಧಿಸಿ ಈ ಸಂಗತಿಯನ್ನು ತಿಳಿಸಿದನು. ಆ ಬ್ರಾಹ್ಮಣನಿಗಾಗಿ ಎಷ್ಟು ಹುಡುಕಿಸಿದರೂ ಪ್ರಯೋಜನವಾಗಲಿಲ್ಲ. ಮುಖ್ಯ ಅಲ್ಲಿಗೆ ಆ ನರೇಂದ್ರನ ಆಯುರ್ದಾಯವು ಮುಗಿದಿದ್ದುದರಿಂದಲೇ ಈ ಎಲ್ಲಾ ಕಾರ್ಯಗಳೂ ಒಂದಕ್ಕೊಂದು ಸಹಾಯಕವಾಗಿ ನಡೆಯುತ್ತಾ ಹೋದುವು. ಆದರೂ ತಕ್ಷಕನ ಅಪಕಾರವು ಮಾತ್ರ ಅಕ್ಷಮ್ಯವಾದುದು' ಎಂದರು. ಜನಮೇಜಯರಾಯನು, ಆ ಮಾತುಗಳನ್ನು ಕೇಳಿ ಅಧಿಕ ರೋಷಾನ್ವಿತನಾಗಿ - 'ನಿಜ, ನಮ್ಮ ತಂದೆಯು ಶಮೀಕನಿಗೆ ಅಪಮಾನಮಾಡಿದುದಕ್ಕಾಗಿ, ಆತನ ಮಗನು ಶಾಪಕೊಟ್ಟಮೇರೆಗೆ ತಾನು ರಾಜನನ್ನು ಕಚ್ಚಬಹುದಾಗಿದ್ದಿತು. ಆದರೆ ಮಣಿಮಂತ್ರೌಷಧಾದಿ ಚಿಕಿತ್ಸೆಗಳಿಂದಲೂ ರಾಜನು ಬದುಕಲೇಬಾರದೆಂದು ಹಟವಹಿಸಿ ಪ್ರಯತ್ನಿಸುವಂತಹ ಛಲವೇಕೆ ಈ ತಕ್ಷಕನಿಗೆ ! ಇದು ದೌರಾತ್ಮ್ಯವಲ್ಲದೆ ಮತ್ತೇನು! ಇದನ್ನು ಕ್ಷಮಿಸತಕ್ಕುದಲ್ಲ. ಈ ಕೇಡಿಗತನಕ್ಕೆ ತಕ್ಕಂತೆ ಶಿಕ್ಷೆಯಾಗಲೇ ಬೇಕು. ಬ್ರಾಹ್ಮಣ ಶಾಪವನ್ನನುಸರಿಸಿ,

ತಾನು ಕಚ್ಚಿಬಿಟ್ಟರಾಯಿತು - ಮುಂದೆ ಒಂದುವೇಳೆ, ಆತನು ಬದುಕಿದರೆ ಬದುಕಿಕೊಳ್ಳಲಿ ಎಂದು ಈ ತಕ್ಷಕನು ತನ್ನ ಕಾರ್ಯವನ್ನು ಮಾತ್ರ ಗಮನಿಸಿಕೊಂಡಿದ್ದರೆ ನಮ್ಮ ತಂದೆಯು ಕಾಶ್ಯಪನಿಂದ ಖಂಡಿತವಾಗಿಯೂ ಪುನರುಜ್ಜೀವಿತನಾಗಬಹುದಿತ್ತು. ಈಗ ತಿಳಿಯಿತು, ತಕ್ಷಕನ ದೌರಾತ್ಮ್ಯವೇ ನಮ್ಮ ತಂದೆಯ ಮೃತ್ಯುವಿಗೆ ಮುಖ್ಯಕಾರಣವೆಂಬುದು! ಈ ದುರುಳ ತನಕ್ಕಾಗಿ ಅವನನ್ನು ಅಗತ್ಯ ಶಿಕ್ಷಿಸಬೇಕು' ಎಂದು ಉದ್ವೇಗಗೊಂಡು, ಯಾವ ಬಗೆಯಿಂದ ಆ ದುಷ್ಟ ತಕ್ಷಕನ ವಂಶವನ್ನೇ ನಿರ್ಮೂಲಗೊಳಿಸಬಹುದೆಂದು ಯೋಚಿಸುತ್ತಿದ್ದನು.

ಆ ವೇಳೆಗೆ ಸರಿಯಾಗಿ, ಅಲ್ಲೇ ಮುನಿವೃಂದದಲ್ಲಿ ಕುಳಿತು ಈ ಸಂಭಾಷಣೆಯನ್ನೆಲ್ಲ ಕೇಳಿಕೊಂಡಿದ್ದ ಉದಂಕನೆಂಬ ಮುನಿಯು ರಾಜನನ್ನು ಕುರಿತು -' ರಾಜೇಂದ್ರಾ ಲಾಲಿಸು. ಇಷ್ಟು ಮಾತ್ರವಲ್ಲ. ತಕ್ಷಕನು ಮಹಾದುರುಳನೆಂದುದಕ್ಕೆ ಒಂದೆರಡಲ್ಲ. ಅನೇಕ ಉದಾಹರಣೆಗಳಿವೆ. ನಾನು ಹಿಂದೆ ಗುರುಕುಲವಾಸಮಾಡುತ್ತಿದ್ದು, ವಿದ್ಯಾಭ್ಯಾಸವನ್ನು ಪೂರೈಸಿದ ಕಾಲದಲ್ಲಿ ನಮ್ಮ ಗುರುಗಳಾದ ವೇದಮುನೀಶ್ವರರ ಪತ್ನಿಗೆ ಪೌಷ್ಯನೆಂಬ ರಾಜನ ಪತ್ನಿಯ ಕಿವಿಗಳಲ್ಲಿದ್ದ ಹರಳೋಲೆಗಳನ್ನು ಪಡೆದು ಗುರುದಕ್ಷಿಣೆಯಾಗಿ ಅರ್ಪಿಸಬೇಕೆಂದು ಆಜ್ಞಪ್ತನಾಗಿ ಬಹು ಕಷ್ಟಪಟ್ಟು ಅವುಗಳನ್ನು ಸಂಪಾದಿಸಿ, ನಮ್ಮ ಗುರುಪತ್ನಿಯು ಶುದ್ಧಮಂಗಳ ಸ್ನಾನಮಾಡಿದ ದಿನ ಬ್ರಾಹ್ಮಣ ಭೋಜನಕಾಲಕ್ಕೆ ತಪ್ಪದಂತೆ ಅವುಗಳನ್ನು ಅಲ್ಲಿಗೆ ತಲ್ಪಿಸಬೇಕೆಂದು ಆತುರಗೊಂಡು ಹೋಗುತ್ತಿದ್ದೆನು. ಅಷ್ಟರಲ್ಲಿ ಮಾರ್ಗಮಧ್ಯದಲ್ಲಿ ಆಲ್ಪಾಚಮನಮಾಡಬೇಕಾಗಲು ಅವುಗಳನ್ನು ಒಂದೆಡೆಯಲ್ಲಿಟ್ಟು, ಮೂತ್ರ ವಿಸರ್ಜನೆಮಾಡಿ ಪುನಃ ಪಾದಪ್ರಕ್ಷಾಳನೆಮಾಡಿಕೊಂಡು ಬರುವುದರೊಳಗಾಗಿ ಈ ದುರುಳ ತಕ್ಷಕನು ಅವುಗಳನ್ನು ಅಪಹರಿಸಿಕೊಂಡು ಎಲ್ಲೋ ಹೊರಟುಹೋದನು. ತರುವಾಯ ನಾನು ಅವುಗಳನ್ನು ಪುನಃ ಕಂಡುಹಿಡಿಯಲು, ಅಗಾಧ ಕಷ್ಟಪಟ್ಟು ಪಾತಾಳಲೋಕವನ್ನು ಸೇರಿ ಇಂದ್ರನ ಸಹಾಯದಿಂದ ಆ ನಾಗಲೋಕದಲ್ಲೆಲ್ಲ ಹೊಗೆಯನ್ನೆಬ್ಬಿಸಿ ಈ ಸರ್ಪಕುಲಕ್ಕೆಲ್ಲ ಉಸಿರು ಕಟ್ಟುವಂತೆಮಾಡಿ, ಅವುಗಳನ್ನು ಪುನಃ ಸಂಪಾದಿಸಬೇಕಾಯಿತು. ಹೀಗೆಯೇ ಈ ತಕ್ಷಕನು ಅನೇಕರಿಗೆ ಅನೇಕ ವೇಳೆಗಳಲ್ಲಿ ಅಗಾಧ

ಕಷ್ಟನಷ್ಟಗಳನ್ನುಂಟುಮಾಡಿರುವ ದುರುಳನು. ಇವನೂ ಇವನ ವಂಶೀ ಕರೂ ಪರಿವಾರದವರೂ ದಂಡ ಸಾಧ್ಯರಲ್ಲದೆ, ಇವರಲ್ಲಿ ದಯಾದಾಕ್ಷಿಣ್ಯಾದಿಗಳೆಂಬುವು ಉಪಯೋಗಕ್ಕೆ ಬಾರವು'' ಎಂದು ನುಡಿಯಲು, ಜನಮೇಜಯನು ಉಕ್ಕುತ್ತಿರುವ ರೋಷದಿಂದ-'ಮಂತ್ರಿ ಮುಖ್ಯರೇ ಮುನಿಪೋತ್ತಮರೇ ಕೇಳಿರಿ. ತಕ್ಷಕನೆಂಬ ದುರಾತ್ಮನು ನಮ್ಮ ಪೂಜ್ಯಪಿತೃವಿನ ವಿಷಯದಲ್ಲಿ ಬುದ್ಧಿಪೂರ್ವಕವಾಗಿ ಮಾಡಿರುವ ಈ ಮಹಾಪರಾಧಕ್ಕಾಗಿ ಆ ದುರುಳನನ್ನು ಬಂಧುಮಿತ್ರಸಮೇತವಾಗಿ, ಪ್ರಜ್ವಲಿಸುತ್ತಲಿರುವ ಯಜ್ಞೇಶ್ವರನಲ್ಲಿ ದಹಿಸಿದಲ್ಲದೆ ನನ್ನ ಕೋಪಾಗ್ನಿಯು ಶಾಂತವಾಗದು. ಅವನು ನಮ್ಮ ತಂದೆಯನ್ನು ಹೇಗೆ ಸುತ್ತಿ ತನ್ನ ವಿಷಜ್ವಾಲೆಯಿಂದ ದಹಿಸಿದನೋ, ಹಾಗೆಯೇ ಅವನಾದರೂ ತನ್ನ ಮಕ್ಕಳು ಮರಿಗಳೊಂದಿಗೆ ಸುತ್ತಿ ಸುತ್ತಿ ಬಿದ್ದು ಅಗ್ನಿಜ್ವಾಲೆಯಲ್ಲಿ ದಹಿಸಲ್ಪಡಬೇಕು. ಅಂದಿಗೆ ಮಾತ್ರವೇ ನನಗೆ ಸಮಾಧಾನವಾಗುವುದು. ಅದಕ್ಕೆ ಅನುಕೂಲವಾದ ಯಾಗಾದಿ ಕರ್ಮಗಳು ಎಲ್ಲಾದರೂ ಹೇಳಲ್ಪಟ್ಟಿದ್ದರೆ ತಿಳಿಸಿರಿ' ಎಂದು ಪ್ರಾರ್ಥಿಸಿದನು. ರಾಜನ ಆ ಮಾತನ್ನು ಕೇಳಿದ ಋತ್ವಿಕ್ಕುಗಳು-'ರಾಜೇಂದ್ರಾ, ಈ ನಿಮಿತ್ತವಾಗಿಯೇ ಇರಬಹುದು, ದೈವಯೋಗದಿಂದ ನಿರ್ಮಿತವಾಗಿರುವ ಸರ್ಪಯಾಗವೆಂಬೊಂದು ಯಜ್ಞವಿಶೇಷವು ಪುರಾಣಾದಿಗಳಲ್ಲಿ ಹೇಳಲ್ಪಟ್ಟಿದೆ. ಅದನ್ನು ಆಚರಿಸಲು ಸರ್ವವಿಧಗಳಿಂದಲೂ ನೀನೇ ಯೋಗ್ಯಪಾತ್ರನಾಗಿದ್ದೀಯೆ !'' ಎಂದು ಪ್ರೋತ್ಸಾಹಗೊಳಿಸಿದರು. ಜನಮೇಜಯರಾಯನು, ಈ ಸರ್ಪಯಾಗದ ಮೂಲಕ ತನ್ನ ಪಿತೃವಿಗೆ ಅಗಾಧ ಅಪಚಾರಮಾಡಿದ್ದಕ್ಕಾಗಿ ಸರ್ಪಕುಲವನ್ನೇ - ತಕ್ಷಕನ ವಂಶವನ್ನೇ ನಿರ್ಮೂಲಗೊಳಿಸಬಹುದೆಂದು ನಿಶ್ಚಯಿಸಿ, ತನ್ನ ಮಂತ್ರಿ ಸಾಮಾಜಿಕರನ್ನು ಕುರಿತು ಆ ಯಾಗಕ್ಕೆ ಬೇಕಾದ ಸಕಲ ಸಾಮಗ್ರಿಗಳನ್ನೂ ಸಿದ್ಧಗೊಳಿಸಿರೆಂದೂ, ಋತ್ವಿಕ್ಕು ಪುರೋಹಿತರನ್ನು ಕುರಿತು ವಿಧ್ಯುಕ್ತ ಪ್ರಕಾರವಾಗಿ ಯಾಗಶಾಲೆಯೇ ಮುಂತಾದುವುಗಳನ್ನು ರಚಿಸಿ ಮುಹೂರ್ತನಿರ್ಣಯಮಾಡಿರೆಂದೂ ನಿಯಮಿಸಿದನು. ರಾಜಾಜ್ಞೆಯಿಂದ ಬಹು ಶೀಘ್ರಕಾಲದಲ್ಲೇ ಯಜ್ಞಾಂಗವಾದ ಸಕಲವಸ್ತು ಸಾಮಗ್ರಿಗಳೂ ಸಿದ್ಧಗೊಳಿಸಲ್ಪಟ್ಟುವು. ಆ ಯಜ್ಞಕ್ಕೆ ಚ್ಯವನ ವಂಶದಲ್ಲಿ ಹುಟ್ಟಿ ವೇದವೇದಾಂಗ ಪಾರಂಗತನಾದ ಚಂಡಭಾರ್ಗವನೆಂಬ ಮುನಿ

ಪೋತೃವುನು ಹೋತೃವಾದನು. ಕುತ್ಸವಂಶೋದ್ಭವನಾದ ವೃದ್ಧ ಜೈಮಿನಿ ಮುನೀಶ್ವರನು ಉದ್ಗಾತೃವಾದನು. ಶಾರ್ಙ್ಗರವನೆಂಬ ತಪಿಸ್ಸಿದ್ಧ ಮುನೀಶ್ವರನು, ಬ್ರಹ್ಮನಾಗಿರಲು ಪ್ರಾರ್ಥಿಸಲ್ಪಟ್ಟನು. ಪಿಂಗಳನೆಂಬ ಮುನಿಯು ಅಧ್ವರ್ಯುವಾಗಿರಲು ನಿಯಮಿಸಲ್ಪಟ್ಟನು. ತಮ್ಮತಮ್ಮ ಪುತ್ರರ ಮತ್ತು ಹಲವುಮಂದಿ ಶಿಷ್ಯರೊಂದಿಗೆ ಕೂಡಿದ ವ್ಯಾಸ, ಉದ್ದಾಲಕ, ಪ್ರಮತಕ, ಶ್ವೇತಕೇತು, ಉದಂಕ, ಪಿಂಗಳ, ಅಸಿತ, ದೇವಲ, ನಾರದ, ಪರ್ವತ, ಆತ್ರೇಯ, ಕುಂಡಜಠರ, ಕಾಲಘಟ, ವಾತ್ಸ್ಯ, ಶ್ರುತಶ್ರವ, ಕೋಹಲ, ದೇವಶರ್ಮ, ಮೌದ್ಗಲ್ಯ, ಸಮಸೌರಭ ಮೊದಲಾದ ಅನೇಕಾನೇಕಮಂದಿ ತಪೋಧನರಾದ ಬ್ರಾಹ್ಮಣೋತ್ತಮರು ಯಜ್ಞಶಾಲೆಯಲ್ಲಿ ಸಭಿಕರಾಗಿ ಒಪ್ಪಿದರು. ಜನಮೇಜಯ ನರೇಂದ್ರನು, ಯಾರೂ ಎಂದೂ ಕಂಡು ಕೇಳಿ ಅರಿಯದ ಆ ಮಹಾ ದುರಂತ ಸರ್ಪಯಾಗಕ್ಕೆ ದೀಕ್ಷಿತನಾದನು. ಯಾಜ್ಞಾರಂಭವಾಗಬೇಕೆಂದು ನಿಶ್ಚಯವಾಯಿತು.



## ಅಧ್ಯಾಯ ೫ "ಆಸ್ತಿಕವಿಜಯ"

ಜನಮೇಜಯಮಹಾರಾಜನು ಸರ್ವಪ್ರಯತ್ನದಿಂದಲೂ ಸರ್ಪಯಾಗಮಾಡಲುದ್ಯೋಗಿಸಿರಲು, ಆತನ ಆಜ್ಞೆಯಿಂದ ಮಂತ್ರಿಪುರೋಹಿತರು ಯಜ್ಞಾಂಗವಾದ ಸಕಲ ಸಾಧನಗಳನ್ನೂ ಲೋಪವಿಲ್ಲದೆ ಸಂಗ್ರಹಿಸಿದರು. ಋತ್ವಿಕ್ಕುಗಳು ಶಾಸ್ತ್ರೋಕ್ತಪ್ರಕಾರವಾಗಿ ಯಜ್ಞಶಾಲೆಗೆ ತಕ್ಕ ಪ್ರದೇಶವನ್ನು ಹುಡುಕಿ ಭೂಶೋಧನೆಮಾಡಿ, ಯಜ್ಞವೇದಿಕೆಯು ಸ್ಥಾಪಿಸಲ್ಪಡಬೇಕಾದ ಸ್ಥಳವನ್ನು ನಿಶ್ಚಯಿಸಿ ಅಳೆದು, ಅಲ್ಲಿ ತೋರಣ ಮೇಲ್ಕಟ್ಟುಗಳಿಂದ ಸುಮನೋಹರವಾದ ಯಜ್ಞಮಂಟಪವನ್ನು ರಚಿಸಿದರು. ಅಲ್ಲದೆ ದೇಶವಿದೇಶದ ರಾಜರೂ, ಸಭಿಕರಾದ ಭೂಸುರೋತ್ತಮರೂ, ಅಸಂಖ್ಯ ಪ್ರೇಕ್ಷಕವರ್ಗವೂ ಕುಳ್ಳಿರಲು ವಿಸ್ತಾರವಾದ ಯಜ್ಞಶಾಲೆಯೂ ರಚಿಸಲ್ಪಟ್ಟಿತು. ಸಮಿತ್ಪುಷ್ಪಗಳು, ಧನಧಾನ್ಯಾದಿಗಳು ಅರಳು ಮಂತ್ರಾಕ್ಷತೆ ಹರಿದ್ರಾಕುಂಕುಮ ಮುಂತಾದ ಮಂಗಳದ್ರವ್ಯಗಳಿಂದ ಯಜ್ಞವೇದಿ

ಕೆಯ ಬಳಿ ನಡೆಯಬೇಕಾದ ಹಲವು ಕಾರ್ಯಗಳಿಗಾಗಿ ಸ್ಥಿರಾಸನಗಳು ಸಿದ್ಧಗೊಳಿಸಲ್ಪಟ್ಟುವು. ಹೀಗೆ ಎಲ್ಲಾ ಕಾರ್ಯಗಳೂ ಸುರಕ್ಷಿತವಾಗಿ ನಡೆದುವಾದರೂ ಯಜ್ಞಶಾಲಾನಿರ್ಮಾಣ ಸಮಯದಲ್ಲಿ ಸರ್ಪಯಾಗಕ್ಕೆ ವಿಘ್ನಕಾರಿಯಾದ ಒಂದು ನಿಮಿತ್ತವು ಕಂಡುಬಂದಿತು. ವಾಸ್ತುವಿದ್ಯಾ ವಿಚಕ್ಷಣನೂ ಬುದ್ಧಿಸಂಪನ್ನನೂ, ವಿಶೇಷ ಅನುಭವಿಯೂ ಆದ ಶಿಲ್ಪಿಯು ಜನಮೇಜಯನನ್ನು ಕುರಿತು- 'ರಾಜೇಂದ್ರ, ಈ ಯಜ್ಞಶಾಲೆಗಾಗಿ ಭೂಮಿಯನ್ನು ಅಳೆದು ಕಟ್ಟುವ ಸಮಯದಲ್ಲಿ ಒದಗಿದ ಮುಹೂರ್ತದ ಗುಣವನ್ನು ವಿಚಾರಿಸಲಾಗಿ, ಈ ಯಜ್ಞವು ನಿರ್ವಿಘ್ನವಾಗಿ ನೆರವೇರಲಾರದೆಂಬ ಶಂಕೆಯು ಉತ್ಪನ್ನವಾಗಿದೆ. ಒಬ್ಬ ಬ್ರಾಹ್ಮಣನ ನಿಮಿತ್ತವಾಗಿ ಈ ಯಾಗಕ್ಕೆ ವಿಘ್ನವುಂಟಾಗಿ ಇದು ಅರ್ಧದಲ್ಲೇ ನಿಲ್ಲಿಸಲ್ಪಡಬೇಕಾಗುವುದೆಂದು ತೋರುತ್ತದೆ' ಎಂದು ನುಡಿದನು. ಆ ಮಾತನ್ನು ಕೇಳಿ, ರಾಜನ ಮನಸ್ಸಿಗೆ ಸ್ವಲ್ಪ ಕಿಂಕ್ಕರ್ತವ್ಯತೆಯುಂಟಾಯಿತಾದರೂ, ಅದನ್ನು ಲಕ್ಷ್ಯಮಾಡದೆ, ಯಜ್ಞಶಾಲೆಗೆ ತನ್ನ ಅಪ್ಪಣೆಯಿಲ್ಲದೆ ಹೊಸಬರ್‍ಯಾರನ್ನೂ ಬಿಡದಂತೆ ಕಟ್ಟುಮಾಡಿ, ಯಜ್ಞಾರಂಭಮಾಡಿಬಿಟ್ಟನು.

ಯಜ್ಞಶಾಲೆಯ ಒಂದು ಪಾರ್ಶ್ವದಲ್ಲಿ ದೇಶದೇಶಗಳ ಸಾಮಂತರಾಜರೂ, ಮತ್ತೊಂದು ಪಾರ್ಶ್ವದಲ್ಲಿ ಸಭಾಸದರಾದ ಋಷಿಮುನಿಗಳೂ ಭೂಸುರವರ್ಗವೂ ಕುಳಿತಿದ್ದರು. ಒಂದು ಪಾರ್ಶ್ವವು ಸ್ತ್ರೀಜನಕ್ಕಾಗಿ ಕಾದಿಡಲ್ಪಟ್ಟಿತ್ತು. ಬೇರೊಂದು ಭಾಗದಲ್ಲಿ ಸಾಮಾನ್ಯ ಜನಸಮುದಾಯವು ಸಹಸ್ರ ಸಹಸ್ರ ಸಂಖ್ಯೆಯಿಂದ ನೆರೆದು ಆ ಅಪೂರ್ವ ಯಾಗದ ವಿಶೇಷಗಳನ್ನು ನಿರೀಕ್ಷಿಸುತ್ತಲಿದ್ದಿತು. ಯಜ್ಞಶಾಲೆಯೆಲ್ಲವೂ ವಿವಿಧ ತೋರಣಪತಾಕೆ ಮೇಲ್ಕಟ್ಟುಗಳಿಂದ ಅಲಂಕೃತವಾಗಿ ನೇತ್ರಾನಂದಕರವಾಗಿ ಒಪ್ಪುತ್ತಿದ್ದಿತು. ಯಜ್ಞಕುಂಡದ ಒಂದು ಭಾಗದಲ್ಲಿ ಯಜ್ಞದೀಕ್ಷಿತನಾದ ಜನಮೇಜಯ ಮಹಾರಾಜನು ಉನ್ನತಾಸನದಮೇಲೆ ಕುಳಿತು, ಋತ್ವಿಕ್ಕು ಪುರೋಹಿತರು ಮಂತ್ರಗಳನ್ನುಚ್ಚರಿಸಿದಂತೆಲ್ಲ ಮಂತ್ರಪೂತವಾದ ಚರುವನ್ನೂ ಘೃತವನ್ನೂ ಹೋಮಾಗ್ನಿಯಲ್ಲಿ ಆಹುತಿಯನ್ನಾಗಿ ಕೊಡುತ್ತಾ, ಹಸನ್ಮುಖಿಯಾಗಿ ಕುಳಿತಿದ್ದನು. ಋತ್ವಿಕ್ಕುಗಳೂ ಹೋತೃಬ್ರಹ್ಮ ಉದ್ಗಾತೃ ಮುಂತಾದವರೂ ಯಜ್ಞಕುಂಡದ ಸಮೀಪದಲ್ಲೇ ಕುಳಿತು ಯಜ್ಞ

ದೀಕ್ಷಿತನಿಂದ ಯಜ್ಞಕಾರ್ಯಗಳು ಲೋಪವಿಲ್ಲದಂತೆ ಸಾಂಗವಾಗಿ ನಡೆಯಿಸಲ್ಪಡುವುದನ್ನು ಗಮನಿಸುತ್ತಿದ್ದರು. ಹೀಗಿರುತ್ತಿರುವಲ್ಲಿ ಚರುಹೋಮಾದಿಗಳು ಮುಗಿಯಲು, ಜನಮೇಜಯಮಹಾರಾಜನ ಆಜ್ಞೆಯಿಂದ ಪುರೋಹಿತರು ಮಂತ್ರಬಲದಿಂದ ಆಹುತಿಗಾಗಿ ಸರ್ಪಗಳನ್ನು ಆಕರ್ಷಿಸಿ ಸೆಳೆಯಲು ಪ್ರಾರಂಭಿಸಿದರು. ಆ ತಪಸ್ವಿದ್ವರ ಮಂತ್ರಸಾಮರ್ಥ್ಯವೆಂಥದೋ! ಒಡನೆಯೇ, ಹತ್ತಿರದಲ್ಲಿ ದೂರದಲ್ಲಿ- ಬಿಲಗಳಲ್ಲಿ ಹುತ್ತಗಳಲ್ಲಿ ಅಡಗಿಕೊಂಡಿದ್ದ ಸರ್ಪಗಳು ಅದೃಶ್ಯವಾದ ಮೃತ್ಯುಪಾಶದಿಂದ ಬಂಧಿತವಾಗಿ ಎಳೆಯಲ್ಪಟ್ಟುವೋ ಎಂಬಂತೆ ಸುತ್ತಿಸುತ್ತಿಕೊಂಡುಬಂದು 'ಸ್ವಾಹಾ' ಎಂಬ ಮಂತ್ರೋಚ್ಚಾರವಾದೊಡನೆಯೇ ಒಂದರಮೇಲೊಂದರಂತೆ, ಆ ಯಜ್ಞಕುಂಡದ ಮಹಾಗ್ನಿಯಲ್ಲಿ ಬೀಳತೊಡಗಿದುವು. ಪುರೋಹಿತರು ಹೋಮಾಗ್ನಿಗೆ ಸಮರ್ಪಿಸುತ್ತಿದ್ದ ವಿಶೇಷವಾದ ಘೃತಾದಿಗಳಿಂದ ಪ್ರಜ್ವಲಿತವಾದ ಅಗ್ನಿಯು ಪ್ರಳಯಕಾಲದ ಮೃತ್ಯುವಿನಂತೆ ರಕ್ತವರ್ಣದ ಜ್ವಾಲಾಯುಕ್ತವಾಗಿ ಉರಿಯುತ್ತಿರಲು ನಾನಾಪ್ರದೇಶಗಳಿಂದ ಬುಸುಗುಟ್ಟುತ್ತಲೂ, ಅಲ್ಲಲ್ಲೆ ಸುತ್ತಿಕೊಳ್ಳುತ್ತಲೂ, ತಪ್ಪಿಸಿಕೊಂಡುಹೋಗಿ ಬದುಕಿಕೊಳ್ಳಲು ಅವಕಾಶವುಂಟೋ ಎಂದು ತಡವರಿಸುತ್ತಲೂ, ಅಗ್ನಿಜ್ವಾಲೆಯನ್ನು ಕಂಡು ಬೆಚ್ಚಿಬೀಳುತ್ತಲೂ, ಧಾವಿಸಿ ಬಂದ ಆಯಾಸಕ್ಕಾಗಿ ನಿಟ್ಟುಸಿರುಬಿಡುತ್ತಲೂ ಬರುತಿದ್ದ ಸರ್ಪಗಳು ಮುಖಭಾಗದಿಂದಲೂ, ಪುಚ್ಛಭಾಗದಿಂದಲೂ ಅಗ್ನಿಕುಂಡದಲ್ಲಿ ಪ್ರವೇಶಿಸಿ ದೇಹವನ್ನು ನೀಗಿದುವು. ಬಿಳುಪು, ಕಪ್ಪು, ಕೆಂಪು, ಹಸರು, ಮಚ್ಚೆಮಚ್ಚೆಯುಳ್ಳುವು ಮುಂತಾದ ಹಲವು ಬಗೆಯ ಸರ್ಪಜಾತಿಗಳು ಭಯಂಕರವಾಗಿ ಉಸಿರುಗಳನ್ನು ಬಿಡುತ್ತಲೂ, ಒಣಗಿಹೋಗುತ್ತಿದ್ದ ತುಟಿಗಳನ್ನು ಎರಡು ನಾಲಿಗೆಗಳಿಂದಲೂ ಸವರಿಕೊಳ್ಳುತ್ತಲೂ ಅತಿಶಯ ಆತುರದಿಂದಲೋ ಎಂಬಂತೆ ಬಂದು ಸುತ್ತಿಸುತ್ತಿಕೊಂಡು ಅಗ್ನಿಕುಂಡದಲ್ಲಿ ಬೀಳುತ್ತಿದ್ದುವು ಹೆಣ್ಣುಜಾತಿ-ಗಂಡುಜಾತಿಯ ಮುದಿ ಸರ್ಪಗಳೂ, ಪ್ರಾಯಸ್ಥಸರ್ಪಗಳೂ, ಸರ್ಪಶಿಶುಗಳೂ ಮುಂದೇನುಮಾಡಬೇಕೆಂದು ತೋರದೆ ಹರಿದುಬಂದು ಆ ಮಹಾಗ್ನಿಮುಖದಲ್ಲಿ ಬಿದ್ದುವು. ಮಂತ್ರಬಲದಿಂದ ನೂರಾರು ಯೋಜನದ ಅಂತರದಲ್ಲಿದ್ದ ಸರ್ಪಗಳೂ, ದೇಶದೇಶಾಂತರಗಳಲ್ಲಿದ್ದ ಸರ್ಪಗಳೂ, ಕಾನನಾಂತರ

ಗಳಲ್ಲಿದ್ದ ಮಹೋರಗಗಳೂ ನಿಮಿಷಮಾತ್ರದಲ್ಲಿ ಯಜ್ಞಕುಂಡದ ಬಳಿಯಲ್ಲಿ ಬಂದು ಕಣ್ಣುಕಾಣದಂತೆ ಬಿದ್ದು, ಹೊರಳಿ 'ಸ್ವಾಹಾ' ಎಂದೊಡನೆಯೇ ಅಗ್ನಿಕುಂಡದಲ್ಲಿ ಬೀಳುವುವು. ಪೂರ್ವ ದಕ್ಷಿಣ ಪಶ್ಚಿಮೋತ್ತರ ದಿಕ್ಕು ಗಳಲ್ಲಿ ಎಲ್ಲೆಲ್ಲೋ ಅಡಗಿದ್ದ ಸರ್ಪಜಾತಿಗಳೆಲ್ಲವೂ ದಾರುಣವಾದ ಆ ಮಂತ್ರಪ್ರಭಾವದಿಂದ ಸೆಳೆಯಲ್ಪಟ್ಟು, ಹುಷ್-ಹುಷ್ ಎಂಬ ನಿಟ್ಟುಸಿರಿ ನಿಂದ ಭಯಂಕರವೇದನೆಯನ್ನು ಪ್ರಕಟಿಸುತ್ತ ಬಂದು ಯಜ್ಞವೇದಿಕೆಯ ಬಳಿ ಬಿದ್ದುವು. ಮಹಾಕಾಯಪ್ರಮಾಣದ ಹಲವು ಸರ್ಪಗಳ ದೇಹವು ದಹಿ ಸಲ್ಪಡುತ್ತಿರಲು ಸಮೀಪದ ವಾಯುವೆಲ್ಲವೂ ದುರ್ಗಂಧಮಯವಾಯಿತು. ಅವುಗಳ ರಕ್ತಮಾಂಸಗಳೂ ಮೇಧಸ್ಸೂ ಅತಿಶಯವಾಗಿ ಅಗ್ನಿಯನ್ನು ಶಮನ ಮಾಡುವಂತೆ ತೋರುತ್ತಿರಲು ಒಣಗಿದ ಕೊರಡುಗಳನ್ನು ನಾಲ್ಕು ಕಡೆಯಿಂದಲೂ ಕುಂಡದೊಳಕ್ಕೆ ಎಸೆದು ಸಮಿತ್ತುಗಳ ಕಂತೆಗಳನ್ನು ಘೃತ ದೊಂದಿಗೆ ಹೋಮಿಸುತ್ತಿದ್ದರು. ಅಗ್ನಿಯಲ್ಲಿ ಬಿದ್ದು, ಪ್ರಾಣಹೋಗುವು ದಕ್ಕಿಂತ ಮುಂಚೆಯೇ ಬೆಂದು ಆ ಸಂಕಟದಿಂದ ಬಿಡುತ್ತಿದ್ದ ಆ ಸರ್ಪಗಳ ನಿಟ್ಟುಸಿರು ಭಯಂಕರವಾಗಿಯೂ ಪರಿತಾಪಕರವಾಗಿಯೂ ಇದ್ದಿತು. ಬೀಳ ಲು ಸಿದ್ಧವಾಗಿ ಅಗ್ನಿಕುಂಡದ ಮುಖದಲ್ಲಿದ್ದು ಭಯಭ್ರಾಂತವಾದ ಸರ್ಪ ಗಳೂ, ಮಂತ್ರಮುಗ್ಧವಾಗಿ ಆಕರ್ಷಿಸಲ್ಪಡುತ್ತಿದ್ದ ಸರ್ಪಗಳೂ, ಕೇಳು ವವರ ಕಿವಿಗಳು ಕೊರೆದುಹೋಗುವಂತೆ ಮೊರೆಯುತ್ತಿದ್ದುವು. ಹೀಗೆ ಮಾತೃಶಾಪದ ಪ್ರಭಾವಕ್ಕೆ ಸಿಕ್ಕು ಮೃತ್ಯುಮುಖಕ್ಕೆ ಬಂದು ಬಿದ್ದ ಸಹ ಸ್ರಾವಧಿ ಸರ್ಪಗಳು ಅಗ್ನಿಯಿಂದ ದಹಿಸಲ್ಪಟ್ಟು ನಿರ್ನಾಮವಾದುವು. ವಾಸುಕಿಯ ವಂಶದಲ್ಲಿ ಹುಟ್ಟಿದುವು, ತಕ್ಷಕನ ವಂಶದಲ್ಲಿ ಹುಟ್ಟಿದುವು, ಐರಾವತ, ಕೌರವ, ಧೃತರಾಷ್ಟ್ರ ಮುಂತಾದ ಹಲವು ಮಹಾ ಕುಲಸಂಭೂತ ಗಳಾದ - ಹನ್ನೊಂದುತಲೆ, ಏಳುತಲೆ, ಐದುತಲೆ, ಮೂರು ತಲೆಗಳನ್ನುಳ್ಳ ಸರ್ಪಗಳು ಕಾಲಾಗ್ನಿ ಸಮಾನವಾದ ವಿಷವನ್ನು ಕಾರುತ್ತಾ, ಉಸಿರು ಬಿಡುವ ಮಾತ್ರದಿಂದಲೇ ತಮ್ಮ ವಿಷಜ್ವಾಲೆಯಿಂದ ಪ್ರಾಣಿಗಳ ಅಸು ವನ್ನು ನಾಶಗೊಳಿಸುವ ಶಕ್ತಿಯುಳ್ಳವುಗಳಾಗಿದ್ದರೂ, ಈಗ ಮಾತೃಶಾಪದ ಪ್ರಭಾವದಿಂದಲೋ ಎಂಬಂತೆ ಉಪಾಯರಹಿತವಾಗಿ ಅಗ್ನಿಮುಖದಲ್ಲಿ ನರಳಿ ಪ್ರಾಣಬಿಡುತ್ತಿದ್ದುವು.

ಜನಮೇಜಯಮಹಾರಾಜನು, ತಾನು ಆತನ ತಂದೆಯಾದ ಪರೀಕ್ಷಿನ್ನೃಪಾಲನ ವಿಷಯದಲ್ಲಿ ಮಾಡಿದ ಅನ್ಯಾಯಕ್ಕಾಗಿ ಕೃದ್ಧನಾಗಿ ಸರ್ಪಯಾಗವನ್ನು ಆರಂಭಿಸಿಯೇಬಿಟ್ಟನೆಂಬ ವಾರ್ತೆಯು ತಿಳಿದೊಡನೆಯೇ, ತಕ್ಷಕನ ಎದೆಯು ಡವಡವನೆಂದು ಹೊಡೆದುಕೊಳ್ಳಲಾರಂಭವಾಯಿತು. ಮನಸ್ಸ್ವಾಸ್ಥ್ಯವು ತಪ್ಪಿಹೋಯಿತು. ಬುದ್ಧಿಯು ಚಾಂಚಲ್ಯಹೊಂದಿತು. ಧೈರ್ಯವು ನಾಶವಾಯಿತು. ಉಪಾಯರಹಿತನಾಗಿ ಮುಂದೇನುಮಾಡಬೇಕೆಂದು ತೋರದೆ, ತನ್ನ ತಂಗಿಯ ಬಳಿಗೆ ಹೋಗಿ-'ಅಮ್ಮಯ್ಯಾ, ಜನಮೇಜಯನು ಸರ್ಪಯಾಗವನ್ನು ಪ್ರಾರಂಭಿಸಿಬಿಟ್ಟನಂತೆ! ಈ ಸಂಗತಿಯು ತಿಳಿದಾಗಿನಿಂದ ನನಗೆ ದಿಗ್ಭ್ರಮೆಯುಂಟಾಗಿ ಹಿಂದುಮುಂದು ತೋರದಂತಾಗಿದೆ. ಭಯದಿಂದ ಕಣ್ಣು ಕತ್ತಲಿಟ್ಟುಕೊಂಡುಬರುತ್ತಿದೆ ಈ ಸಂದರ್ಭದಲ್ಲಿ ಬ್ರಹ್ಮದೇವನ ವಾಕ್ಯದಂತೆ, ನಿನ್ನ ಗರ್ಭಸಂಭೂತನಾದ ಆಸ್ತಿಕಮುನಿಯಿಂದಲಲ್ಲದೆ ನಮ್ಮ ರಕ್ಷಣೆಯಾಗುವ ಬೇರೆ ಮಾರ್ಗವೇ ತೋರುವುದಿಲ್ಲ. ತಂಗೀ ಇಂಥಾ ವಿಷಮವೇಳೆಯಲ್ಲಿ ತಾತ್ಸಾರಮಾಡದೆ ನಿನ್ನಾ ಮಗನನ್ನು ಕಳುಹಿ, ನಮ್ಮ ಕುಲವನ್ನು ರಕ್ಷಿಸಮ್ಮಾ' ಎಂದು ಅಂಗಲಾಚಿಕೊಂಡನು. ಅಷ್ಟರಲ್ಲಿ ನಿತ್ಯಕರ್ಮವನ್ನು ಮುಗಿಸಿಕೊಂಡು ಅಲ್ಲಿಗೆ ಬಂದ ಆಸ್ತಿಕಮುನಿಯು ಸೋದರಮಾವನಾದ ತಕ್ಷಕನಿಗೆ ನಮಸ್ಕರಿಸಲು-'ಮಗೂ, ನಿನ್ನ ತಪಶ್ಶಕ್ತಿಯೇ ಈಗ ಸರ್ಪಕುಲವನ್ನು ರಕ್ಷಿಸಬೇಕಾಗಿದೆ ಜನಮೇಜಯನು ಯಾಗಾರಂಭಮಾಡಿಬಿಟ್ಟಿದ್ದಾನೆ. ಆ ವಾರ್ತೆಯನ್ನು ಕೇಳಿ, ನನ್ನ ಹೃದಯವೇ ಕಳಚಿಹೋದಂತಾಗಿದೆ! ಈ ಸಂದರ್ಭದಲ್ಲಿ ಉದಾಶೀನಮಾಡದೆ, ನಿನ್ನ ಮಾತೃಕುಲವನ್ನು ಉದ್ಧರಿಸಿ, ಚಿರಯಶಸ್ಸಿಗೆ ಪಾತ್ರನಾಗು' ಎಂದು ಪ್ರಾರ್ಥಿಸಿದನು. ಜರತ್ಕಾರಳೂ, ಆ ಕಾರ್ಯವನ್ನು ಸಾಂಗವಾಗಿ ನೆರವೇರಿಸಿಕೊಂಡು, ಜಯಶೀಲನಾಗಿ ಬಾರೆಂದು ಮಗನನ್ನು ಆಶೀರ್ವದಿಸಿ ಕಳುಹಿಸಿದಳು. ಆಸ್ತಿಕಮುನಿಯು ತಾಯಿಗೂ ಮಾವನಿಗೂ ಬೆದರದಿರಿರೆಂದು ಸಮಾಧಾನ ಹೇಳಿ, ಜನಮೇಜಯನ ಯಾಗಶಾಲೆಯ ಸಮೀಪಕ್ಕೆ ಬರುತ್ತಿದ್ದನು.

ಇತ್ತ ಯಾಗಶಾಲೆಯಲ್ಲಿ ಕೋಲಾಹಲವು ಹೆಚ್ಚಿತು. ಋತ್ವಿಕ್ಕುಗಳು ಯಜ್ಞದೀಕ್ಷಿತನಾದ ಮಹಾರಾಜನ ಪ್ರೀತಿವಿಶ್ವಾಸಗಳಿಗೆ ಹೆಚ್ಚು ಹೆಚ್ಚು ಪಾತ್ರರಾಗಬೇಕೆಂದು, ಆತುರಗೊಂಡು ಮೇಲೆ ಮೇಲೆ ಮಂತ್ರಗಳನ್ನು ಚ್ಚ

ರಿಸುತ್ತಿರಲು ಹಾಗೆ ಮಂತ್ರಪಾಶಬದ್ಧವಾದ ಸರ್ಪಗಳು ಅಧಿಕಾಧಿಕ ಸಂಖ್ಯೆಯಿಂದ ಬಂದು ಬಂದು ಅಗ್ನಿಕುಂಡದಲ್ಲಿ ಬೀಳಸಾಗಿದುವು.—ಆಸ್ತಿಕನಿಂದ ಸರ್ಪಯಾಗವು ನಿಲ್ಲುವುದು-ಸರ್ಪಗಳ ಕುಲವು ನಿರ್ಮೂಲವಾಗದೆ ಉಳಿಯುವುದು-ಎಂಬ ಬ್ರಹ್ಮವಾಕ್ಯದಲ್ಲಿ ವಿಶ್ವಾಸವಿದ್ದಿತಾದರೂ, ತಕ್ಷಕನು ಗುಂಪುಗುಂಪಾಗಿ ಬಂದು ಕುಂಡದಲ್ಲಿ ಬಿದ್ದು, ರಾಸಿರಾಸಿಯಾಗಿ ಬೆಂದು ಬೂದಿಯಾಗುತ್ತಿದ್ದ ತನ್ನ ಸಹಜಾತೀಯರಿಗುಂಟಾದ ದುರವಸ್ಥೆಯನ್ನು ಕಂಡು ಹತಾಶನಂತಾಗಿ ತನ್ನ ಲೋಕವನ್ನು ಬಿಟ್ಟು ಸ್ವರ್ಗಲೋಕಕ್ಕೆ ಓಡಿಹೋಗಿ ದೇವರಾಜನನ್ನು ಮರೆಹೊಕ್ಕು - 'ತ್ರಿಲೋಕಾಧಿಪಾ, ಬಂಧುಮಿತ್ರ ಪರಿವಾರ ಸಮೇತವಾಗಿ ನಮ್ಮ ಕುಲಕ್ಕೀ ಪ್ರಳಯಕಾಲ ಪ್ರಾಪ್ತಿಸಿದೆ. ದಯವಿಟ್ಟು ಪ್ರಾಣದೊಂದಿಗೆ ರಕ್ಷಿಸು. ನಿನಗೆ ಶರಣಾಗತನಾಗಿದ್ದೇನೆ' ಎಂದು ಅಂಗಲಾಚಿಕೊಂಡನು. ಆ ಸರ್ಪರಾಜನ ಮೊರೆಯನ್ನು ಕೇಳಿ ಕನಿಕರಗೊಂಡ ದೇವೇಂದ್ರನು-'ಬೆದರಬೇಡ-ಬೆದರಬೇಡ. ಬ್ರಹ್ಮದೇವನ ವಾಕ್ಯದಲ್ಲಿ ವಿಶ್ವಾಸವಿಡು. ನಿನ್ನ ಪ್ರಾಣಕ್ಕೆ ಅಪಾಯವೊದಗಲಾರದು' ಎಂದು ನುಡಿದು, ತಕ್ಷಕನನ್ನು ತನ್ನ ಮನೆಯಲ್ಲೀ ಇರಿಸಿಕೊಂಡಿದ್ದನು. ಆದರೆ ಅವನು ಅಲ್ಲೂ ಸುರಕ್ಷಿತನಾಗಿರಲು ಸಾಧ್ಯವಿರಲಿಲ್ಲ. ಅಷ್ಟುದಿನಗಳವರೆಗೆ ಒಂದೇ ಸಮನಾಗಿ ಸರ್ಪಗಳ ಆಹುತಿಯಾಗುತ್ತಿದ್ದರೂ, ತನ್ನ ಪರಮಶತ್ರುವಾದ ತಕ್ಷಕನೇ ಬರಲಿಲ್ಲವೆಂಬುದು ಜನಮೇಜಯನಿಗೆ ಅತಿಶಯ ವಿಷಾದಜನಕವಾಯಿತು. ಆಗಲಾತನು ಋತ್ವಿಕ್ಕುಗಳನ್ನು ಕುರಿತು,-'ಏನಿದು ತಕ್ಷಕನೇನಾದನು? ನಿಮ್ಮ ಮಂತ್ರಗಳಿಗೆ ತಕ್ಷಕನನ್ನು ಹಿಡಿದೆಳೆತರುವ ಸಾಮರ್ಥ್ಯವಿಲ್ಲವೋ ಹೇಗೆ? ಏಕೆ ಸಾವಕಾಶವಾಗುತ್ತಿದೆ? ಆ ನೀಚಾತ್ಮನು ಬಂದು ಅಗ್ನಿಕುಂಡದಲ್ಲಿ ಬಿದ್ದು ಹುತವಾಗಲಿ! ನಿಷ್ಕರುಣೆಯಾಗಿ ನಮ್ಮ ತಂದೆಯನ್ನು ಕಚ್ಚಿ, ವಿಷಜ್ವಾಲೆಯಿಂದ ದಹಿಸಿದ ಆ ಕೇಡಿಗನು ಈ ಮಹಾಗ್ನಿಯಲ್ಲಿ ಬಿದ್ದು ದಹಿಸಲ್ಪಡಲಿ! ಸಾವಕಾಶವೇಕೆ?' ಎಂದು ನುಡಿದನು.

ಆ ವೇಳೆಗೆ ಆಸ್ತಿಕನು ಯಜ್ಞಶಾಲೆಯ ಬಾಗಿಲಿಗೆ ಬಂದು ತನ್ನನ್ನು ಒಳಕ್ಕೆ ಬಿಡಬೇಕೆಂದು ಅಪೇಕ್ಷಿಸಲು, ದ್ವಾರರಕ್ಷಕರು ಮಹಾರಾಜನ ಆಜ್ಞೆಯಿಲ್ಲವೆಂದು ತಡೆದರು. ಆಗಲಾ ತೇಜಸ್ವಿ ಬ್ರಹ್ಮಚಾರಿಯು, ಯಜ್ಞವೇದಿ

ಕೆಯು ಪಕ್ಕದಲ್ಲಿ ಕುಳಿತಿದ್ದ ಮಹಾರಾಜನಿಗೆ ಸ್ಪಷ್ಟವಾಗಿ ಕೇಳಿಸುವ ಹಾಗೆ, ಆ ಮಹಾಯಜ್ಞವನ್ನು ಕುರಿತೂ, ಅದರ ಕರ್ತೃವಾದ ಮಹಾರಾಜನನ್ನು ಕುರಿತೂ, ಆತನ ವಂಶೋನ್ನತಿಯನ್ನು ಕುರಿತೂ ಉಚ್ಚಸ್ವರದಿಂದ ಹೊಗಳ ತೊಡಗಿದನು. ಕರ್ಣಾಪ್ಯಾಯನವಾಗಿದ್ದ ಆ ಬ್ರಹ್ಮಚಾರಿಯ ವಾಕ್ಯಗಳು ಕರ್ಣರಂಧ್ರಗಳನ್ನು ಹೊಗುತ್ತಿರಲು, ಜನಮೇಜಯನ ದೃಷ್ಟಿಯು ಬಾಗಿ ಲಕಡೆಗೆ ತಿರುಗಿತು. ಅಲ್ಲಿ, ಬಲೀಂದ್ರನ ಯಜ್ಞಶಾಲೆಗೆ ಬಂದಿದ್ದ ವಾಮನ ಮೂರ್ತಿಯಂತೆ, ಉಜ್ವಲ ಬ್ರಹ್ಮಚರ್ಯ ತೇಜದಿಂದ ರಂಜಿಸುತ್ತಿದ್ದ ಆಸ್ತಿ ಕನು ನಿಂತಿದ್ದುದು ಕಾಣಿಸಿತು. ಒಡನೆ ಆತನನ್ನು ಒಳಕ್ಕೆ ಬಿಡಬೇಕೆಂದು ರಾಜಾಜ್ಞೆಯಾಯಿತು. ಆಗಲಾ ವಟುಶ್ರೇಷ್ಠನು ಯಾಗಶಾಲೆಯನ್ನು ಹೊಕ್ಕು, ಮಂದಗತಿಯಿಂದ ನಡೆದು ಬಂದು ಯಜ್ಞಕುಂಡದ ಬಳಿ ನಿಂತನು. ಆತನ ತೇಜಸ್ವಿತೆಯು ಎಲ್ಲರನ್ನೂ ಬೆರಗುಗೊಳಿಸಿತು. ಆತನ ಮೇಘಗಂ ಭೀರಧ್ವನಿಯು ಸಕಲರಿಗೂ ಕರ್ಣರಸಾಯನವಾಗಿದ್ದಿತು. ತಾನು ಕೈ ಕೊಂಡು ನಡೆಯಿಸುತ್ತಿದ್ದ ಆ ಯಜ್ಞಶಾಲೆಗೆ ಅನಾಹೂತನಾಗಿ ಬಂದ ಆ ಅಪೂರ್ವ ತೇಜಸ್ಸಂಪನ್ನ ಬ್ರಹ್ಮಚಾರಿಯನ್ನು ಕಂಡು ರಾಜನು ಪರಮ ಸಂತುಷ್ಟನಾಗಿ, ವಿಧ್ಯುಕ್ತವಾಗಿ ಅರ್ಘ್ಯಪಾದ್ಯಾಚಮನಾದಿಗಳನ್ನಿತ್ತು ಗೌರವಿಸಿ-'ವಿಪ್ರಶ್ರೇಷ್ಠರೇ, ಈ ವೇಳೆಯಲ್ಲಿ ತಮ್ಮ ಆಗಮನವಾದುದು ನಮ್ಮ ಪುಣ್ಯೋದಯವೆಂದು ತಿಳಿದಿದ್ದೇನೆ. ನಮ್ಮ ವಂಶವೇ ಉದ್ಧೃತವಾಯಿತೆಂದು ನಂಬಿದ್ದೇನೆ. ನಮ್ಮ ಕುಲಕೋಟಿಯೂ ಉದ್ಧೃತವಾಯಿತೆಂದು ಹರ್ಷವಾ ಗುತ್ತದೆ. ತಮ್ಮ ಅಭೀಷ್ಟವೇನೋ ಆಜ್ಞಾಪಿಸಬೇಕು'' ಎಂದು ನುಡಿ ಯುತ್ತಿರುವಷ್ಟರಲ್ಲಿ-ಋತ್ವಿಕ್ಕುವು ರಾಜನನ್ನು ಕುರಿತು-'ಪ್ರಭೋ, ತಕ್ಷಕನು ಇಂದ್ರನ ಮರೆಬಿದ್ದಿದ್ದಾನೆ. ಇಂದ್ರನೂ ಅವನನ್ನು ರಕ್ಷಿಸುವುದಾಗಿ ಅಭ ಯಪ್ರದಾನಮಾಡಿದ್ದಾನೆ' ಎಂದು ಫಲಗಣಿತ ಶಾಸ್ತ್ರದಿಂದ ವ್ಯಕ್ತಪಡು ತ್ತದೆ' ಎಂದನು. ಆ ಮಾತನ್ನು ಕೇಳಿ ಕ್ರುದ್ಧನಾದ ರಾಜನು-'ಹಾಗೋ ಒಳ್ಳೆಯದು. ಇಂದ್ರನು ಆ ನಮ್ಮ ಶತ್ರುವನ್ನು ನಮಗೆ ಒಪ್ಪಿಸಿದರೆ ಒಳ್ಳೆ ಯದಾಯಿತು. ಹಾಗಿಲ್ಲದ ಸಂದರ್ಭದಲ್ಲಿ ಆತನ ಸಮೇತ ಇಂದ್ರನನ್ನೂ ಬಲಮಾಡಿರಿ' ಎಂದು ನುಡಿದನು. ಋತ್ವಿಕ್ಕುಗಳು, 'ಪಾಪಿಯಾದ ತಕ್ಷಕ ನನ್ನು ಮರೆಹಾಕಿಕೊಂಡಿರುವ ಇಂದ್ರನೂ ಬರಲಿ!' ಎಂದರು. ಆ ತಪ

ಸ್ವಿದ್ಧರ ಮಂತ್ರಬಲಕ್ಕೆ ಕಟ್ಟುಬಿದ್ದು ದೇವೇಂದ್ರನೂ ಸೆಳೆಯಲ್ಪಟ್ಟನು. ಕೆಳಗೆ ಭಯಂಕರ ಅಗ್ನಿಕುಂಡವನ್ನು ನೋಡಿ ತಕ್ಷಕನ ಪ್ರಾಣವು ಕಂಠಗತ ವಾಯಿತು. ಮೈ ಕೈ ನಡುಕವಿಟ್ಟಿತು. ಬಾಯಲ್ಲಿ ಧ್ರುವನಾರಿ-'ದೇವರಾಜಾ ಕೈಬಿಡಬೇಡ. ರಕ್ಷಿಸು' ಎಂದು ಬೇಡಿಕೊಳ್ಳುತ್ತಿದ್ದನು. ತಕ್ಷಕನನ್ನು ಬಿಡದಿದ್ದರೆ ತಾನೂ ಯಜ್ಞಕುಂಡದಲ್ಲಿ ಬಿದ್ದು ಭಸ್ಮವಾಗುವುದು ತಪ್ಪದು' ಎಂದು ಆತನಿಗೆ ಮನವರಿಕೆಯಾಯಿತು. ಆಗ ಇಂದ್ರನು, ತಕ್ಷಕನ ಭವಿಷ್ಯದ್ಗತಿಯನ್ನು ಕುರಿತು ಯೋಚಿಸಲು, ಆತನು ಅಲ್ಲೇ ಯಜ್ಞಕುಂಡದ ಬಳಿಯಲ್ಲೇ ನಿಂತಿದ್ದ ಆಸ್ತಿಕನಿಂದ ರಕ್ಷಿಸಲ್ಪಡುವನೆಂಬುದು ಗೋಚರವಾಯಿತು. ಒಡನೆ ತನ್ನ ಪೀಠದ ಕಾಲಿಗೆ ಸುತ್ತಿಕೊಂಡಿದ್ದ ತಕ್ಷಕನನ್ನು ಝಾಡಿಸಿ ಕೆಳಕ್ಕೆ ಬೀಳಲಿತ್ತು, ತಾನು ಅದೃಶ್ಯನಾಗಿ ಹೊರಟುಹೋದನು. ತಕ್ಷಕನು ನಿರಾಧಾರನಾಗಿ ಅಂತರಿಕ್ಷಮಾರ್ಗದಿಂದ ಬೀಳುತ್ತಾ, ಕಲ್ಮರಗಳು ಕರಗುವಂತೆ ಮೊರೆಯಿಡುತ್ತ, ಬುಸುಗುಟ್ಟುತ್ತ ಪ್ರಾಣಭಯದಿಂದ ತತ್ತರಿಸುತ್ತ ಬರುತ್ತಿರಲು, ಅಲ್ಲೇ ನಿಂತಿದ್ದ ಆಸ್ತಿಕ ಬ್ರಹ್ಮಚಾರಿಯು ತಲೆಯೆತ್ತಿ ಅವನನ್ನು ನೋಡಿ-'ನಿಲ್ಲು, ನಿಲ್ಲು, ಅಲ್ಲೇ ನಿಲ್ಲು' ಎಂದು ನುಡಿದು ಬಿಟ್ಟನು. ಆತನ ವಾಕ್ಸಾಮರ್ಥ್ಯವನ್ನೇನೆಂದು ಹೇಳಬಹುದು ! ಸೂತ್ರ ತಪ್ಪಿದ ಜ್ಯೋತಿರ್ಗೋಳದಂತೆ ಅಂತರಿಕ್ಷದಿಂದ ನಿರಾಧಾರಿಯಾಗಿ ಬೀಳುತ್ತಿದ್ದ ತಕ್ಷಕನು ಆ ತಪಸ್ವಿಧ್ಧನ ವಾಕ್ಸಾಮರ್ಥ್ಯದಿಂದ ಅಲ್ಲೇ ನಿಂತು ಬಿಟ್ಟನು.

ಜನಮೇಜಯನು- 'ತಮ್ಮ ಅಭೀಷ್ಟವೇನೋ ಆಜ್ಞಾಪಿಸಬೇಕು' ಎಂದು ಪ್ರಾರ್ಥಿಸಿದ್ದನಲ್ಲವೆ ? ಅದಕ್ಕೆ ಉತ್ತರವಾಗಿ ಆ ಬ್ರಹ್ಮಚಾರಿಯು- 'ರಾಜೇಂದ್ರಾ ನನ್ನ ಅಭೀಷ್ಟವನ್ನು ದಯಪಾಲಿಸುವಿಯಲ್ಲವೆ! ಹಾಗಿದ್ದಲ್ಲಿ, ಇಗೋ ದುರಂತಕರ್ಮದ ಈ ಸರ್ಪಯಾಗವು ಇಲ್ಲಿಗೇ ಸಮಾಪ್ತವಾಗಲಿ! ಇನ್ನು ಮುಂದೆ ಸರ್ಪಗಳು ದಹಿಸಲ್ಪಟ್ಟು ನಾಶವಾಗದಂತೆ ಈ ಯಾಗವನ್ನು ಇಲ್ಲಿಗೇ ನಿಲ್ಲಿಸಿಬಿಡು. ಇದೇ ನನ್ನ ಪ್ರಾರ್ಥನೆಯು' ಎಂದನು. ಋತ್ವಿಕ್ಪುರೋಹಿತರೆಲ್ಲರೂ ಒಬ್ಬರಮುಖವನ್ನೊಬ್ಬರು ನೋಡಿಕೊಳ್ಳತೊಡಗಿದರು. ಜನಮೇಜಯ ರಾಜೇಂದ್ರನು, ಆ ಬ್ರಹ್ಮಚಾರಿಯನ್ನು ಕುರಿತು- ಪೂಜ್ಯರೇ, ಈ ವರಕ್ಕೆ ಬದಲಾಗಿ ಬೇರೇನನ್ನಾದರೂ ಕೇಳಿಕೊಳ್ಳಿರಿ.

ಅಸಂಖ್ಯ ಧನಕನಕ ವಸ್ತುವಾಹನಾದಿಗಳನ್ನು ಕೊಡಲು ಸಿದ್ಧನಿದ್ದೇನೆ. ಅನುಗ್ರಹಿಸಿರಿ. ಈ ಯಜ್ಞವನ್ನು ಒಂದಾನೊಂದು ಪೈತೃಕವಾದ ಉದ್ದೇಶಸಾಧನೆಗಾಗಿ ಆರಂಭಿಸಿದ್ದೇನೆ. ಇದಕ್ಕೆ ವಿಘ್ನವುಂಟಾಗದಿರಲಿ' ಎಂದು ಎಷ್ಟೋ ಬಗೆಯಿಂದ ಪ್ರಾರ್ಥಿಸಿಕೊಂಡನು. ಆದರೆ ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ, ಪೂರ್ವದಲ್ಲಿ ಯಜ್ಞಶಾಲೆಯನ್ನು ರಚಿಸಿದ ಶಿಲ್ಪಿಯ ವಾಕ್ಯವು ನಿಜವಾಯಿತೆಂದುಕೊಂಡು, ಸರ್ಪಯಾಗವು ಅಲ್ಲಿಗೇ ಸಮಾಪ್ತವಾಗಲೆಂದು ಆಜ್ಞಾಪಿಸಿದನು. ತರುವಾಯ ಸಮಸ್ತ ಭೂಸುರವರ್ಗಕ್ಕೂ ದಕ್ಷಿಣೆ ತಾಂಬೂಲ ಫಲಪುಷ್ಪಾದಿಗಳು ಯಥೇಷ್ಟ ಹಂಚಲ್ಪಟ್ಟುವು. ಭೂರಿಭೋಜನಾದಿಗಳು ನಡೆದು ಸಕಲರೂ ಸಂತುಷ್ಟರಾದರು. ರಾಜನು ಯಜ್ಞಾಂತವಾದ ಅವಭೃತಸ್ನಾನಮಾಡಿ, ನೂತನ ವಸ್ತ್ರಾದಿಗಳನ್ನು ಧರಿಸಿ, ಸಕಲ ಋಷಿ ಮುನಿಗಳನ್ನೂ ಅವರವರ ಅಂತಸ್ತಿಗೆ ತಕ್ಕಂತೆ ಸಕಲ ವಿಧ ದಾನದಕ್ಷಿಣೆಗಳನ್ನೂ ಸಮರ್ಪಿಸಿ ಸಂತೋಷಪಡಿಸಿದನು. ಇಂತು ಯಾಗವು ಸಮಾಪ್ತವಾಗಲು ಜನಮೇಜಯ ನರೇಂದ್ರನು ತಮ್ಮಂದಿರೊಂದಿಗೂ ಪುತ್ರರೊಂದಿಗೂ ಕೂಡಿ ಅನೇಕಕಾಲ ರಾಜ್ಯಭಾರಮಾಡಿದನು ಎಂಭತ್ನಾಲ್ಕು ವರ್ಷಗಳ ಆತನ ದೀರ್ಘಕಾಲದ ಆಳ್ವಿಕೆಯು ಸಕಲ ಪ್ರಜಾರಂಜಕವಾಗಿ ಸಕಲ ಸುಖಪ್ರದಾಯಕವಾಗಿ ಸಕಲರಿಂದಲೂ ಅಪೇಕ್ಷಣೀಯವಾಗಿ ಕಂಗೊಳಿಸಿತು. ಆಸ್ತಿಕ ವಿಜಯದೊಂದಿಗೆ ಸಮಾಪ್ತವಾದ ದಾರುಣವಾದ ಸರ್ಪಯಾಗದ ವೃತ್ತಾಂತವು ಲೋಕದಲ್ಲಿ ಜನಜನಿತವಾಯಿತು.



## ಉಪಸಂಹಾರ

ಸರ್ಪಯಾಗವನ್ನು ಮಧ್ಯದಲ್ಲೇ ಸಮಾಪ್ತವಾಗಿಸಿ, ತನ್ನ ಸೋದರಮಾವನ ಪ್ರಾಣಗಳನ್ನುಳಿಸಿ, ಸಕಲ ಸರ್ಪಲೋಕಕ್ಕೂ ಜೀವದಾನಮಾಡಿದ ಮಹಾಮಹಿಮನಾದ ಆಸ್ತಿಕ ಮುನಿಶ್ರೇಷ್ಠನನ್ನು ಹುತಾವಶೇಷವಾಗಿ ಉಳಿದ ಸಕಲ ಸರ್ಪಗಳೂ ಮನಸಾರೆ ಹೊಗಳಿದುವು - ಹರಸಿದುವು.—

'ಮಹಾನುಭಾವ, ನಿನ್ನ ಪ್ರಭಾವದಿಂದಲೇ ನಮ್ಮ ಕುಲವು ಬದುಕಿ-ಜೀವಿಸವಂತಾಯಿತು. ನಿನ್ನ ಉಪಕಾರವು ನಮ್ಮ ಮೇಲೆ ಅನಂತವಾಗಿದೆ. ಪ್ರಾತಃಸಂಧ್ಯಾಕಾಲಗಳಲ್ಲಿ ನಿನ್ನೀ ಅದ್ಭುತಕಾರ್ಯದ *ಚರಿತ್ರೆಯನ್ನು ಯಾರು ಪಠಿಸುವರೋ, ಯಾರು ಶ್ರವಣಮಾಡುವರೋ ಅವರಿಗೆ ಸರ್ಪಬಾಧೆಯು ಲೇಶಮಾತ್ರವೂ ಉಂಟಾಗದಿರಲಿ. ಸರ್ಪಕುಲ ಪ್ರಾಣಪ್ರದಾತನೆಂದು ನಿನ್ನ ಯಶಶ್ಚಂದ್ರಿಕೆಯು ಆಚಂದ್ರಾರ್ಕವಾಗಿ ಪ್ರಕಾಶಿಸಲಿ. ಮೌನಿವರ್ಯ - ಮಹೋನ್ನತನಾಗಿರು' ಎಂದು ಹೊಗಳಿ, ಅನರ್ಘ್ಯರತ್ನಾಭರಣಾದಿಗಳನ್ನು ಕಾಣಿಕೆಯಾಗಿ ಸಮರ್ಪಿಸಿ, ಸರ್ಪಕುಲಶ್ರೇಷ್ಠರು ಆಸ್ತಿಕನನ್ನು ಪೂಜಿಸಿದರು. ತರುವಾಯ, ಆತನೂ ವಿವಾಹಿತನಾಗಿ, ಬಹುಕಾಲ ಪರೋಪಕಾರಿಯಾಗಿ ಜೀವಿಸಿದ್ದು ಸದ್ಗತಿಯನ್ನು ಹೊಂದಿದನು.

ಈ ಕಥೆಯನ್ನು ಪಠಿಸುವವರಿಗೆ ದುಷ್ಟನಿಗ್ರಹ ಶಿಷ್ಟಪರಿಪಾಲನೆಯಲ್ಲಿ ದೀಕ್ಷೆಯೂ, ಪರೋಪಕಾರದಲ್ಲಿ ಶ್ರದ್ಧಾದರಗಳೂ, ಕುಚೇಷ್ಟೆ ಕುಯುಕ್ತಿ ಘಾತುಕತನ ಮುಂತಾದುವುಗಳನ್ನಿಟ್ಟುಕೊಂಡಿರುವವನಿಗೆ, ಅವು ಪ್ರಾಣಾಂತಕವಾಗಿ ಕುಲಕೋಟಿ ಸಹಿತವಾಗಿ ಅವನನ್ನು ನಾಶಮಾಡದೆ ಬಿಡವು ಎಂಬ ನೀತಿಯೂ ಗೋಚರವಾಗುವುವು. ಈ ಸತ್ಕಥೆಯ ಮೇಲ್ಕಂಡ ಧ್ಯೇಯಗಳು ಎಲ್ಲರಿಗೂ ಆದರ್ಶವಾಗಿದ್ದು ಅವರಲ್ಲೂ ಸದ್ಗುಣ ಸದಾಚಾರಣೆಗಳನ್ನು ನೆಲೆಗೊಳಿಸಿ ರಕ್ಷಿಸಲಿ.

ತಥಾಸ್ತು.



*ಪಠನೆಗೆ ಉಪಯುಕ್ತವಾಗಿ, ಈ ಶ್ಲೋಕಗಳು ಮುನ್ನುಡಿಯ ನಾಲ್ಕನೆಯ ಪುಟದಲ್ಲಿ ಕೊಡಲ್ಪಟ್ಟವೆ.

|| ಶ್ರೀರಾಮಸಹಾಯಂ ||

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

ಲೋಕದಲ್ಲಿ, ಜಗಜ್ಜನ್ಮಾದಿಕಾರಣನಾದ ಶ್ರೀ ಹರಿಯೇ ಸರ್ವೋತ್ತಮ ದೈವವೆಂದು ಪ್ರತಿಪಾದಿಸುವ ದ್ವೈತಸಿದ್ಧಾಂತವನ್ನು ಸ್ಥಾಪಿಸಿದ ಶ್ರೀಮದಾನಂದತೀರ್ಥರ (ಶ್ರೀಮನ್ಮಧ್ವಾಚಾರ್ಯರ) ಶಿಷ್ಯಪರಂಪರೆಯಲ್ಲಿ ಬಂದು, ಸಚ್ಛಾಸ್ತ್ರಪ್ರತಿಪಾದನೆಯ ಮತ್ತು ದ್ವೈತಸಿದ್ಧಾಂತಪ್ರಚಾರದ ಸೇವಾಕಾರ್ಯವನ್ನು ಶ್ರೀ ಹರಿಸೇವೆಯೆಂದು ನಡೆಯಿಸಿದ ಮಹಾಮಹಿಮರಲ್ಲಿ ನಮ್ಮ ಪ್ರಕೃತ ಕಥಾನಾಯಕರಾದ ಶ್ರೀ ಜಯತೀರ್ಥ ಗುರು (ಶ್ರೀ ಟೀಕಾಕೃತ್ಪಾದರು - ಶ್ರೀಮಟ್ಟೀಕಾಚಾರ್ಯರು)ಗಳು ಅಗ್ರಗಣ್ಯರು. ಶ್ರೀ ಮನ್ಮಧ್ವಾಚಾರ್ಯರು, ಮಾನುಷಲೋಕಕ್ಕೆ ಅಗೋಚರರಾಗಿ ಶ್ರೀ ವ್ಯಾಸಾಶ್ರಮವನ್ನು ಕುರಿತು ದಯಮಾಡಿಸಿದಮೇಲೆ, ಅವರ ಪಟ್ಟಶಿಷ್ಯರಾದ ಶ್ರೀ ಪದ್ಮನಾಭತೀರ್ಥರು, ಶ್ರೀ ನರಹರಿತೀರ್ಥರು, ಶ್ರೀ ಮಾಧವತೀರ್ಥರು ಮತ್ತು ಶ್ರೀ ಅಕ್ಷೋಭ್ಯತೀರ್ಥರು ಎಂಬೀ ನಾಲ್ವರೂ ಒಬ್ಬರ ತರುವಾಯ ಒಬ್ಬರಂತೆ ಶ್ರೀಮದಾಚಾರ್ಯರು ಸ್ಥಾಪಿಸಿದ್ದ ದ್ವೈತಸಾಮ್ರಾಜ್ಯ ಪೀಠವನ್ನೇರಿ ಧರ್ಮಪ್ರಚಾರ ಮಾಡಿದರು. ಶ್ರೀ ಅಕ್ಷೋಭ್ಯತೀರ್ಥರ ತರುವಾಯ ಬಂದವರೇ ನಮ್ಮ ಕಥಾನಾಯಕರಾದ ಪೂಜ್ಯ ಶ್ರೀ ಜಯತೀರ್ಥರು.

ಶ್ರೀಮದಾಚಾರ್ಯರು, ಲೋಕದಲ್ಲಿ ವ್ಯಾಪಿಸಿದ್ದ ಅಜ್ಞಾನವೆಂಬ ಕತ್ತಲೆಗೆ ಸೂರ್ಯಪ್ರಾಯರಾಗಿ ಅವತರಿಸಿ, ಜೈನ ಚಾರ್ವಾಕಾದಿ ಮತಗಳ ಪ್ರಚಾರದಿಂದಲೂ ತರುವಾಯ ವೇದಮತವೆಂಬ ಹೆಸರಿನಿಂದ ಹೆರಡಿದ್ದ ಅವುಗಳ ಆಭಾಸತತ್ವಗಳ ಪ್ರಚಾರದಿಂದಲೂ - ಜಗತ್ತು ಮಿಥ್ಯ, ಬದ್ಧನಾದ ಜೀವನಿಗೂ ಸರ್ವೇಶ್ವರನಾದ ಲೋಕನಾಯಕನಿಗೂ ತತ್ವತಃ ಏನೂ ಭೇದವಿಲ್ಲ, ದೇವರೆಂಬುವ ವಸ್ತುವೇ ಸುಳ್ಳು, ಸೃಷ್ಟಿಸ್ಥಿತ್ಯಾದಿಕಾರ್ಯಗಳೆ

ಲ್ಲವೂ ಪ್ರಕೃತಿಯ ಸಾಮರ್ಥ್ಯದಿಂದಲೇ ನಡೆಯಿಸಲ್ಪಡತಕ್ಕುವು ಎಂದು ಮುಂತಾಗಿ ಹೇತುವಾದವನ್ನೇ ಮುಂದೆಮಾಡಿಕೊಂಡು ಹಬ್ಬುತ್ತಿದ್ದ ಭ್ರಾಂತಿಯನ್ನು ಜನಮನದಿಂದ ಕಿತ್ತೊಗೆದು,- ಜಗಜ್ಜನ್ಮಾದಿಕಾರಣನು ಶ್ರೀ ಹರಿ, ಆತನೇ ಸರ್ವಶಕ್ತ, ಸರ್ವಸ್ವಾಮಿ, ಸರ್ವತಂತ್ರಸ್ವತಂತ್ರ, ಜೀವನು ಅವನಿಂದ ಭಿನ್ನನಾದವನು ಜಗತ್ತು ಸತ್ಯ - ಮಾತ್ರವಲ್ಲ, ಲೋಕವೆಲ್ಲವೂ ಉಚ್ಚನೀಚಗಳಿಲ್ಲದೆ, ಯೋಗ್ಯತಾಯೋಗ್ಯತೆಗಳ ತಾರತಮ್ಯವಿಲ್ಲದೆ ಬೆರೆತ ಕೆಸರಿನ ಮುದ್ದೆಯಂತಿಲ್ಲ. ಜೀವಜೀವಕ್ಕೆ ಭೇದವುಂಟು. ಜೀವನಿಗೂ ಜಡಕ್ಕೂ ಭೇದವುಂಟು. ಜೀವನಿಗೂ ಈಶ್ವರನಿಗೂ, ಜಡಕ್ಕೂ ಈಶ್ವರನಿಗೂ ಭೇದವುಂಟು. ಅಷ್ಟೇ ಅಲ್ಲ,- ಜಡಕ್ಕೂ ಜಡಕ್ಕೂ ಭೇದವುಂಟು. ಮತ್ತು ಸೃಷ್ಟಿಯಲ್ಲಿ ತೃಣಜೀವರಿಂದ ಪ್ರಾರಂಭಿಸಿ, ಸೃಷ್ಟಿಕರ್ತನಾದ ಬ್ರಹ್ಮನ ಪರ್ಯಂತವಾಗಿ ತಾರತಮ್ಯವುಂಟು. ಅಸ್ವತಂತ್ರನಾದ ಜೀವನು, ಸಕಲ ವಿಧಗಳಲ್ಲೂ ಶ್ರೀ ಹರಿಯನ್ನೇ ಆಶ್ರಯಿಸಿ, ಸೇವಿಸಿ, ಪೂಜಿಸಿ, ಅನನ್ಯಭಾವದಿಂದ ಆರಾಧಿಸಿ, ತನ್ನ ಗತಿಯನ್ನು ಸಾಧಿಸಿಕೊಳ್ಳಬೇಕಾದುದೇ ಸರ್ವೋತ್ತಮಸಾಧನ. 'ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾಕರ್ಮಚಾಖಿಲಂ' ಎಂಬಂತೆ, ಎಲ್ಲಾ ಕಾರ್ಯಗಳನ್ನೂ ನಿರಪೇಕ್ಷಬುದ್ಧಿಯಿಂದಲೂ, ತಾನು ಮಾಡುವ ಸಕಲವೂ ಹರಿಸೇವೆ ಎಂಬ ನಿರ್ಮಮಭಾವದಿಂದಲೂ ಮಾಡತೊಗಿದರೆ ಮಾತ್ರವೇ ಅವನು ಜಗತ್ತಿನಲ್ಲಿ ಸಕಲವಿಧ ಬಂಧನಗಳಿಂದಲೂ ಬಿಡುಗಡೆಹೊಂದಿ, ಶ್ರೀವರನಕೃಪಾಪಾತ್ರನಾಗಿ, ಮೋಕ್ಷಸಾಮ್ರಾಜ್ಯಸುಖವನ್ನು ಹೊಂದಲು ಸಾಧ್ಯವುಂಟು, ಎಂಬೀ ತತ್ವಗಳನ್ನು ಪ್ರತಿಪಾದಿಸಿ ಅವುಗಳ ಸಮರ್ಥನೆಗಾಗಿ ಮೂವತ್ತೇಳು ಗ್ರಂಥರತ್ನಗಳನ್ನು ರಚಿಸಿ ಜಗದುದ್ಧಾರ ಮಾಡಿದರು.

ಶ್ರೀಮದಾಚಾರ್ಯರು ಗ್ರಂಥರಚನೆ ಮಾಡಿದುದು ಮಾತ್ರವಲ್ಲ. ಆ ಸೇತುಶೀತಾಚಲವಾಗಿ ಭಾರತದೇಶದಲ್ಲಿ ವಿಸ್ತಾರವಾಗಿ ಸಂಚರಿಸಿ, ಹೋದೆಡೆಯಲ್ಲೆಲ್ಲ ವಾದಿನಿಗ್ರಹಮಾಡಿ, ತಮ್ಮಿಂದ ಪ್ರತಿಪಾದಿತವಾದ ದ್ವೈತಸಿದ್ಧಾಂತವನ್ನೂ ಹರಿಸರ್ವೋತ್ತಮತ್ವವನ್ನೂ ಸ್ಥಾಪಿಸುತ್ತಲೂ, ತಮ್ಮಿಂದ ಜಿತರಾದ ವಾದಿಗಳನ್ನು ತಪ್ತಮುದ್ರಾಂಕಿತದಿಂದ ಶುದ್ಧಿಗೊಳಿಸಿ ದ್ವೈತಪಂಥಾನುಯಾಯಿಗಳನ್ನಾಗಿ ಮಾಡುತ್ತಲೂ, ತಮ್ಮ ಕೀರ್ತಿಧ್ವಜವನ್ನು

ಆಚಂದ್ರಾರ್ಕಸ್ಥಾಯಿಯಾಗುವಂತೆ ನೆಲೆಗೊಳಿಸಿಬಿಟ್ಟರು ಆದರೆ ಶ್ರೀಯುವರು ಮಾನುಷದೃಷ್ಟಿಗಗೋಚರರಾಗಿ ಶ್ರೀ ಬದರಿಕಾಶ್ರಮಕ್ಕೆ ಪ್ರಯಾಣವಾಡಿದಮೇಲೆ, ಅವರಿಂದ ರಚಿತವಾದ ಆ ಗ್ರಂಥರತ್ನಗಳ ಅಮೋಘ ಅರ್ಥವು ಯೋಗ್ಯಟೀಕೆಗಳ ಸಹಾಯವಿಲ್ಲದೆ ಪ್ರಪಂಚಕ್ಕೆ ಬೋಧವಾಗದೆಂದು ತೋರಿಬರಲು, ಆಗ್ಗೆ ಆ ಕಾರ್ಯವನ್ನು ನೆರವೇರಿಸಿ, ಸದ್ಗ್ರಂಥ ಪ್ರಚಾರ ರೂಪದ ಹರಿಸೇವೆಯನ್ನು ನೆರವೇರಿಸುವುದಕ್ಕಾಗಿ ಸೊಂಟಕಟ್ಟಿದ ಅಂತಹ ಮಹನೀಯರೊಬ್ಬರ ಆಗಮನವು ಅನಿವಾರ್ಯವೆನ್ನಿಸಿದ್ದಿತು. ವಜ್ರ ಸದೃಶವಾದ ಶ್ರೀಮಧ್ವಾಚಾರ್ಯರ ವಾಕ್ಯಗಳನ್ನು ಭೇದಿಸಿ ಅವುಗಳಿಂದ ನಿರೂಪಿತವಾಗುವ ಸ್ಪಷ್ಟಾರ್ಥಗಳನ್ನು ಜಗತ್ತಿಗೆ ಸುಬೋಧವಾಗುವಂತೆ ಮಾಡಲು, ಶ್ರೀ ಸರ್ವಜ್ಞರಾಯರ ಪರಮಾನುಗ್ರಹಕ್ಕೆ ಪಾತ್ರರಾದ ಬಕ್ತಶ್ರೇಷ್ಠರಿಗೆ ಮಾತ್ರವೇ ಸಾಧ್ಯವಲ್ಲದೆ, ಅನ್ಯ ಅಲ್ಪ ಚೇತಸ್ಕರಿಂದ ಸಾಧ್ಯವೇ ! ನಮ್ಮ ಪ್ರಕೃತ ಕಥಾನಾಯಕರು, ಶ್ರೀಗಳವರ ಕೃಪಾದೃಷ್ಟಿಗೆ ಪಾತ್ರರಾಗಿ, ಈ ಕಾರ್ಯನಿರ್ವಹಣಕ್ಕಾಗಿಯೇ ಅವತರಿಸಿದರೋ ಎಂಬಂತೆ. ಒಂದಾನೊಂದು ಶ್ರೀಮಂತ ಕುಟುಂಬದಲ್ಲಿ ಜನ್ಮವೆತ್ತಿ, ತುಂಬುಯೌವನದಲ್ಲೇ ಸಕಲ ಲೌಕಿಕ ಭೋಗಭಾಗ್ಯಗಳನ್ನೂ ತೃಣಗಣಾಯಮಾನವಾಗಿ ತ್ಯಾಗಮಾಡಿ, ಸನ್ಯಾಸಾಶ್ರಮ ಸ್ವೀಕಾರಮಾಡಿ, ಶ್ರೀಮದಾಚಾರ್ಯರ ಗ್ರಂಥರತ್ನಗಳಲ್ಲಿ ಅತಿ ಮುಖ್ಯವಾದುವುಗಳಿಗೆ ಅತ್ಯಮೋಘ ಟೀಕೆಗಳನ್ನು ರಚಿಸಿ ಜಗದುದ್ಧಾರಮಾಡಿದರು. ಶ್ರೀ ಜಯತೀರ್ಥರವರು, ದ್ವೈತ ಸಿದ್ಧಾಂತದ ಪ್ರಚಾರಕ್ಕಾಗಿ ಮಾಡಿದ ಈ ಸಹಾಯದ ಬೆಲೆಯನ್ನು ನಿರ್ಧರಿಸುವುದು ಸರ್ವಥಾ ಸಾಧ್ಯವಿಲ್ಲದ ಮಾತು. ಈ ಮಹನೀಯರ ಟೀಕಾಗಳಿಂದಲಲ್ಲದೆ, ಶ್ರೀಮದಾಚಾರ್ಯಕೃತ ಗ್ರಂಥರತ್ನಗಳು ಈಗ ಪಡೆದಿರುವಷ್ಟು ಜನಪ್ರೀತಿಯನ್ನೂ-ಪ್ರಚಾರವನ್ನೂ ಹೊಂದಿರಲಾರವೆಂದರೆ ಅದು ಅತ್ಯುಕ್ತಿ ಎನಿಸಲಾರದು. ಇಂತಹ ಅಮೋಘಕಾರ್ಯಮಾಡಿ **ಶ್ರೀಮಟ್ಟೀಕಾಚಾರ್ಯ**ರೆಂದೇ ಅನ್ವರ್ಥ ನಾಮಧೇಯದಿಂದ ವಿರಾಜಿಸುವ ನಮ್ಮ ಕಥಾನಾಯಕರ ಜೀವಿತವನ್ನೂ - ಮಹತ್ಕಾರ್ಯವನ್ನೂ ಕುರಿತು, ಈ ಚಿಕ್ಕಗ್ರಂಥದಲ್ಲಿ ಯಥಾಮತಿ ಸಂಗ್ರಹವಾಗಿ ರಚಿಸಲು ಪ್ರಯತ್ನಿಸುತ್ತೇವೆ. ಆಸ್ತಿಕಮಹಾಶಯರಾದ ಭಾಷಾಬಾಂಧವರು, ಗ್ರಂಥಮಾಲೆಯ ಇತರ ಕುಸುಮಗಳಂ

ತೆಯೇ ಇದನ್ನೂ ಸ್ವೀಕರಿಸಿ ಈ ಕುಸುಮದ ಸುಗಂಧವನ್ನೂ ಆಘ್ರಾಣಿಸಿ ಗ್ರಂಥಮಾಲೆಯನ್ನು ಪ್ರೋತ್ಸಾಹಿಸಬೇಕಾಗಿ ಪ್ರಾರ್ಥಿಸುತ್ತೇನೆ.

ತಾ. ೨೯—೮—೩೨
ಬೆಂಗಳೂರು ನಗರ

ಇತಿ ಸುಜನ ವಿಧೇಯ

ಶ್ಲೋಕ:—

ಯಾಚ್ಛಾಮಂದರಲೋಲಿತಾದ್ಯತ ಉದ್ವೈದ್ವಿದ್ಯೇಂದಿರಾನಿರ್ಜರೈ |
ಜರ್ಗತೋಭಾರತಪಾರಿಜಾತಸುತುರುಃ ಸದ್ಬ್ರಹ್ಮಸೂತ್ರಾಮೃತಂ ||
ಆಸೀತ್ತಂತ್ರಪುರಾಣಸನ್ಮಣಿಗಣೋ ಜಾತಃ ಶುಕೇಂದುಃ ಸದಾ |
ಸೋಽಯಂ ವ್ಯಾಸಸುಧಾನಿಧಿರ್ಭವತುಮೇ ಭೂತ್ಯೈಸತಾಂಭೂತಿದಃ ||

ಶ್ರೀಮದ್ವಿಷ್ಣ್ವಂಘ್ರಿನಿಷ್ಠಾತಿಗುಣ ಗುರುತಮಶ್ರೀಮದಾನಂದತೀರ್ಥ
ತ್ರೈಲೋಕ್ಯಾಚಾರ್ಯಪಾದೋಜ್ಜ್ವಲ ಜಲಜಲಸತ್ಪಾಂಸವೋಽ
ಸ್ಮಾನ್ಪುನಂತು
ವಾಚಾಂಯತ್ರಪ್ರಣೇತ್ರಿ ತ್ರಿಭುವನಮಹಿತಾ ಶಾರದಾಶಾರದೇಂದು
ಜ್ಯೋತ್ಸ್ನಾಭದ್ರಸ್ಮಿತಶ್ರೀ ಧವಳಿತಕಕುಭಾ ಪ್ರೇಮಭಾರಂ ಬಭಾರ

ಮಾಧ್ವಗ್ರಂಥಾನ್ನಬಂಧೂನಿವಸರಸಹೃದಾಽಲಿಂಗ್ಯವಿಜ್ಞಾತಭಾವಃ
ಸಂಯೋಜ್ಯಾಲಂಕೃತಾಭಿಃ ಸ್ವಸಹಜಮತಿಸಂಭೂತವಾಗ್ಭಿರ್ವಧೂಭಿಃ ||
ಕೃತ್ವಾಽನ್ಯೋಕ್ತೀಶ್ಚದಾಸೀ ರ್ಬುಧಹೃದಯಗೃಹಂ ಪ್ರೌಢವೃತ್ತೀಶ್ಚ ವೃತ್ತಿ
ರ್ದತ್ವಾಽನ್ಯೋನ್ಯಾಭಿಯೋಗಂ ಜಯಮುನಿರಸ ಕೃದ್ವೀಕ್ಷ್ಯರೇಮೇ
ಕೃತಾರ್ಥಃ ||

ಶ್ರೀಮನ್ಮಧ್ವಮತೇ | ಹರಿಃಪರತರಃ ಸತ್ಯಂಜಗತ್ತತ್ವತಃ
ಭೇದೋ ಜೀವಗಣಾಃ| ಹರೇರನುಚರಾಃ ನೀಚೋಚ್ಚಭಾವಂಗತಾಃ
ಮುಕ್ತಿರ್ನೈಜಸುಖಾನು | ಭೂತಿರಮಲಾ ಭಕ್ತಿಶ್ಚತತ್ಸಾಧನಂ
ಹ್ಯಕ್ಷ್ಯಾದಿತ್ರಿತ ಯಂಪ್ರಮಾಣ| ಮಖಿಳಾಮ್ನಾಯೈಕವೇದ್ಯೋಹರಿಃ ||

॥ ಶ್ರೀರಾಮ ಸಹಾಯಂ ॥

ಶ್ರೀಮನ್ಮಧ್ವಮತೋದ್ಧಾರಕರಾದ

# ಶ್ರೀಮಟ್ಟೀಕಾಚಾರ್ಯರು

## ಅಧ್ಯಾಯ ೧ "ದ್ವೈತಮತಸ್ಥಾಪನೆ"

**ಪವಿತ್ರತಮವಾದ** ನಮ್ಮ ಮಾತೃಭೂಮಿ - ಭಾರತದೇಶದಲ್ಲಿ, ಧರ್ಮಪ್ರಚಾರಕ್ಕಾಗಿ ಅವತರಿಸಿದ ಮಹಾಮಹಿಮರ ಚರಿತ್ರೆಯೇ ಆದಿಕಾಲದಿಂದಲೂ ವಿಶೇಷವಾಗಿ ಜನಮನವನ್ನಾಕರ್ಷಿಸುವಲ್ಲಿ ಪ್ರಬಲಸಾಧನವಾಗಿದೆ. ಒಬ್ಬನು ಕೋಟ್ಯಾಂತರ ದ್ರವ್ಯಸಂಪಾದನೆಮಾಡಿರಬಹುದು, ವಿಶೇಷ ಧನಧಾನ್ಯ ಸಂಗ್ರಹಣಮಾಡಿರಬಹುದು, ಲಕ್ಷ್ಮೀಪುತ್ರನೆನ್ನಿಸಿರಬಹುದು ! ಆದರೆ ಯಾವ ಪುಣ್ಯಶೀಲನು ಧರ್ಮಪ್ರಚಾರಕ್ಕಾಗಿ ಸರ್ವಸ್ವವನ್ನೂ ತ್ಯಜಿಸಿ, ಭಿಕ್ಷುಕವೃತ್ತಿಯನ್ನು ಸ್ವೀಕರಿಸಿ ಕೌಪೀನಧಾರಿಯಾಗಿ ಗ್ರಾಮೈಕರಾತ್ರಿಯಂತೆ ಸಂಚರಿಸಿ, ತನ್ಮೂಲಕ ಲೋಕಸೇವಾಕಾರ್ಯಕ್ಕೆ ಸಿದ್ಧನಾಗುವನೋ ಆ ಮಹನೀಯನ ವಿಷಯದಲ್ಲಿ ತೋರಿಸುವಂತಹ ಗೌರವವನ್ನೂ ಪೂಜ್ಯಬುದ್ಧಿಯನ್ನೂ-ಕುಬೇರಸದೃಶನಾದ ಧನವಂತನಿಗಾಗಲೀ, ರಾಜಾಧಿರಾಜನಿಗಾಗಲೀ ನಮ್ಮ ದೇಶೀಯರು ತೋರಿಸಲಾರರು. ಪೃಥ್ವಿಯಲ್ಲಿ ಅರ್ಥಕಾಮಗಳ ಲಾಭಕ್ಕಾಗಿಯೇ ಜೀವಿಸುವ ಕೆಲವು ಜನಾಂಗಗಳಿರಬಹುದು. ಆದರೆ ನಮ್ಮ ದೇಶಕ್ಕೇನೋ ಧರ್ಮ-ಮೋಕ್ಷಗಳೇ ಸ್ವಾಭಾವಿಕವಾದ ಅಪೇಕ್ಷೆಗಳು. ಧರ್ಮಮೋಕ್ಷಗಳ ಸಾಧನಾಮಾರ್ಗವು, ಅರ್ಥಕಾಮಗಳ ಸಾಧನಾಮಾರ್ಗದಷ್ಟು ಸುಗಮವಾದುದಲ್ಲ-ಸುಲಭವಾದುದಲ್ಲ. ಆದುದರಿಂದಲೇ ದುರ್ಗಮವಾದ ಆ ಮಾರ್ಗದ ಸಾಧನೆಯಲ್ಲಿ ಎಡಹಿ ಮುಗ್ಗರಿಸಿ ಬೀಳುವುದು ಹೆಚ್ಚು. ಈ ಕಾರಣದಿಂದ ನಮ್ಮ ದೇಶದಲ್ಲಿ

ಮೇಲೆಮೇಲೆ ಧರ್ಮಮಾಲಿನ್ಯತೆಯು ಕಂಡುಬರುವಂತೆ ತೋರುತ್ತಿರುವುದು. ಅಧರ್ಮವು ಅಭಿವೃದ್ಧಿಯಾದಂತೆ ತೋರುವುದಕ್ಕಾದರೂ ಇದೇ ಕಾರಣವು. ಈ ಅಧರ್ಮವನ್ನು ಅಡಗಿಸಿ, ಧರ್ಮಕ್ಕೆ ಲೇಪವಾಗಿರುವ ಮಾಲಿನ್ಯತೆಯನ್ನು ನಿವಾರಿಸಿ, ಧರ್ಮಪ್ರಚಾರಕಾರ್ಯವನ್ನು ವಿಶೇಷರೀತಿಯಿಂದ ಸಾಗಿಸುವ ಮಹತ್ಕಾರ್ಯಕ್ಕಾಗಿಯೇ, ಸಾಧುಪುಂಗವರು ಮೇಲೆ ಮೇಲೆ ಜನ್ಮವೆತ್ತುತ್ತಿರುವುದು ನಮ್ಮಲ್ಲಿ ಕಂಡುಬರುತ್ತದೆ 'ವಿಶೇಷ ಅಧರ್ಮ ಪ್ರಾಚುರ್ಯವಿರುವುದರಿಂದಲಲ್ಲವೆ, ಧರ್ಮಪ್ರಚಾರೋದ್ದೇಶದಿಂದ ಭಗವಂತನೂ ಭಗವದ್ವಿಭೂತಿಯುಳ್ಳವರೂ ಜನ್ಮವೆತ್ತುವುದು ! ಇತರ ದೇಶಗಳಲ್ಲಿ ಇಷ್ಟು ಮೇಲೆ ಮೇಲೆ, ಧರ್ಮಸ್ಥಾಪನೆಗಾಗಿ ಮಹನೀಯ ವ್ಯಕ್ತಿಗಳ ಅವತಾರಗಳಾಗಿಲ್ಲವಾದುದರಿಂದ, ಭಾರತದೇಶವು ಧರ್ಮಕ್ಷೇತ್ರವೆಂಬುದೂ, ಇದು ತತ್ತ್ವವಿದರ ತೌರೂರು ಎಂಬ ಪ್ರಶಂಸೆಗಳೂ ಶುದ್ಧಪೊಳ್ಳುಪ್ರಶಂಸೆಗಳು' ಎಂದು ಮುಂತಾಗಿ ಆಕ್ಷೇಪಿಸುವವರು ಈಗೀಗ ಅಲ್ಲಲ್ಲಿ ದೃಷ್ಟಿಗೋಚರರಾಗುತ್ತಿದ್ದಾರೆ

ಈ ಸಂದರ್ಭದಲ್ಲಿ ನಾವು ಹೇಳಲಾಶಿಸುವ ಪ್ರತ್ಯುತ್ತರವಿಷ್ಟೆ ! ಸ್ವಾಭಾವಿಕವಾಗಿಯೇ ಬಿಳುಪಾದ-ಶುಭ್ರವಾದ ಬಟ್ಟೆಯಮೇಲೆ, ಲೇಶಮಾತ್ರ ಕೊಳೆಯಿದ್ದರೂ ಅದು ಕೊಳೆಯಾದಂತೆ ಒಡನೆ ತೋರುವುದು. ಅದನ್ನು ಶುದ್ಧಿಗೊಳಿಸಬೇಕಾದುದು ಒಡನೆ ಆವಶ್ಯಕವೆನ್ನಿಸುವುದು ಭಾರತದೇಶದ ಮಾನಸಿಕ ಸ್ಥಿತಿಯು ಹೀಗಿದೆ ಇತರ ದೇಶಗಳಲ್ಲಿ, ಪಾಪ ಪುಣ್ಯ, ಇಹಪರ, ಸುಗತಿ ದುರ್ಗತಿ, ಬಂಧ ಮೋಕ್ಷ ಮುಂತಾದುವುಗಳ ನಿಜಸ್ವರೂಪವನ್ನು ತಿಳಿದು ಸತ್ಯಾನ್ವೇಷಣೆಯಲ್ಲಿ ತೊಡಗುವ ವಿಷಯದಲ್ಲಿ ಜನಮನದಲ್ಲಿ ಇರುವ ಉತ್ಕಟೇಚ್ಛೆಗಿಂತಲೂ ಈ ದೇಶದಲ್ಲಿ ಇರುವ ಪ್ರಮಾಣವು ಹೆಚ್ಚಾದುದು ಜನಮನವು ಇಹಕ್ಕಿಂತಲೂ ಪರದ ಕಡೆಗೆ ಒಲಿಯುವಿಕೆಯೇ ಹೆಚ್ಚು ಭೋಗೇಚ್ಛೆಗಿಂತಲೂ ವೈರಾಗ್ಯಪರ ಚಿತ್ತವೃತ್ತಿಯ ಕಡೆಗೇ ಜನರ ಒಲವು ಹೆಚ್ಚು. ಜ್ಞಾನಭಕ್ತಿವೈರಾಗ್ಯಾದಿಸಾಧನಾಮಾರ್ಗಗಳು, ಭೋಗಸಾಧನಾಮಾರ್ಗಗಳಿಗಿಂತಲೂ ಅತ್ಯಂತ ಕಠಿಣವಾದುವು ಎಂದು ಮೇಲೆಯೇ ಹೇಳಿದೆಯಲ್ಲವೆ! ಆದುದರಿಂದಲೇ ಈ ಮಾರ್ಗಗಮನದಲ್ಲಿ ತೊಡಗುವವರು ಮೇಲೆ ಮೇಲೆ ಎಡಹಿಮುಗ್ಗರಿಸಿ ಬೀಳುವುದು ವಿಶೇಷವಾಗಿ ದೃಷ್ಟಿಗೋಚರವಾಗಬಹುದು. ಇದನ್ನು ದುರ್ಭಾವದಿಂದ ಅರ್ಥಮಾಡಿಕೊಳ್ಳುವುದಾದರೆ, ಅವ

ರೆಲ್ಲರೂ ಪರಮನೀಚರೆಂದೂ ಧಾರ್ಮಿಕವೇಷಧಾರಿಗಳೆಂದೂ, ಧಾರ್ಮಿಕ ಕವಚದಿಂದ ಸ್ವಾರ್ಥಸಾಧನೆಯಲ್ಲಿ ತೊಡಗಿರುವ ವ್ರಾತ್ಯರೆಂದೂ ತೋರಬಹುದು. ಆದರೆ ಅವರನ್ನು ನೋಡಬೇಕಾದ ದೃಷ್ಟಿಯು ಅದಲ್ಲ. ಅವರ ಮನೋವೃತ್ತಿಯು ವಾಸ್ತವವಾಗಿ ಧರ್ಮಪರವಾಗಿದ್ದು, ಅಭ್ಯಾಸವೂ ದಾರ್ಢ್ಯವೂ ಸಾಲದುದರಿಂದ ಜಾರಿಬೀಳುತ್ತಿರುವ ತಮ್ಮ ಅಶಕ್ತತೆಗಾಗಿ ಅವರು ಪರಿತಾಪ ಪಶ್ಚಾತ್ತಾಪಗಳಿಂದ ವ್ಯಥೆಪಡದಿರುವುದಿಲ್ಲ. ಈ ಪಶ್ಚಾತ್ತಾಪವು ಅವರನ್ನು ಶೀಘ್ರವಾಗಿಯೇ ಶುದ್ಧಿಗೊಳಿಸಿ, ಅವರ ಮನಸ್ಸು ನಿಶ್ಚಲವೂ ನಿಷ್ಕಲ್ಮಷವೂ ಆಗಲೂ, ಮುಂದೆ ದೃಢಪ್ರಯತ್ನ ಮಾಡಲೂ ಅವರನ್ನು ಪ್ರೇರಿಸುವುದು. ಆದರೆ ಪರದೇಶಗಳಲ್ಲಿರುವ ಸ್ಥಿತಿಯು ಹೀಗಿಲ್ಲ. ವಿಶೇಷವಾಗಿ ಅವರ ದೃಷ್ಟಿಯು ಐಹಿಕಪರವಾಗಿಯೇ ಇರುವುದು. ಎಲ್ಲೋ ಒಬ್ಬರಿಬ್ಬರು ಸುಸಂಸ್ಕೃತಜೀವಿಗಳು ಪಾರತ್ರಿಕಮಾರ್ಗವನ್ನನುಸರಿಸಲು ಇಚ್ಛಿಸಿ ವಿಶೇಷವಾಗಿ ಪ್ರಯತ್ನಿಸುವರಲ್ಲದೆ, ಜನಸಮೂಹದ ಮನೋಗತಿಯು ಭಕ್ತಿ ಜ್ಞಾನವೈರಾಗ್ಯಾದಿಗಳು, ಧರ್ಮಾಧರ್ಮಗಳು, ಇಹಲೋಕ ಪರಲೋಕಗಳು, ಪುಣ್ಯಪಾಪಗಳು ಮುಂತಾದ ವಿಚಾರಗಳನ್ನು ಒಲಿಯುವುದಾಗಿರುವುದಿಲ್ಲ. ಇದೇ ಭಾರತದೇಶಕ್ಕೂ ಇತರ ದೇಶಗಳಿಗೂ ಇರುವ ಪ್ರಬಲವ್ಯತ್ಯಾಸವೆಂದರೆ ಅದು ಅಪರಾಧವಲ್ಲವೆಂದೆಣಿಸುವೆವು

ಇತರ ದೇಶಗಳಲ್ಲಿ ಮತ-ಧರ್ಮಾದಿಗಳೂ ಸಹ ಲೌಕಿಕವಾದ ಇತರ ಹಲವು ವೃತ್ತಿಗಳಂತೆಯೇ ಇದ್ದು, ರಾಜಕೀಯದ ಪ್ರಯೋಜನಕ್ಕಾಗಿ ಉಪಯೋಗವಾಗುವ ಒಂದು ಪ್ರಬಲಸಾಧನವಾಗಿ ಪರಿಣಮಿಸುವ ಸ್ಥಿತಿಗೆ ಇಳಿದಿವೆ. ಈಗೀಗ ಪಾಶ್ಚಾತ್ಯ ನಾಗರಿಕತೆಯ ಅನುಕರಣಮಾಡುತ್ತಿರುವ ನಮ್ಮಲ್ಲಿಯ ಕೆಲಮಂದಿ ಅಪ್ರಬುದ್ಧರ ದೃಷ್ಟಿಯಲ್ಲಿ ಈ ಭಾವನೆಯು ಸೂಕ್ತವೆಂದು ನೆಲೆಸಿರುವುದಾದರೂ, ನಮ್ಮ ಪೂರ್ವಿಕರಾದ ಧರ್ಮನೇತೃರೂ, ಮತಾಚಾರ್ಯರುಗಳೂ, ಸಾಧುಸಂತರೂ, ಧರ್ಮವನ್ನೂ ಜ್ಞಾನಭಕ್ತಿವೈರಾಗ್ಯಗಳನ್ನೂ, ರಾಜಕೀಯದ ಪ್ರಶ್ನೆಗೆ ಸಂಬಂಧಪಡಿಸದೆ-ಅದಕ್ಕಿಂತಲೂ ಅತ್ಯುನ್ನತ ಸ್ಥಿತಿಯಲ್ಲಿಟ್ಟು ರಕ್ಷಿಸಿಕೊಂಡು ಬಂದರು. ಇಂತಹ ಧರ್ಮವು ಸಮುದ್ರದ ಉಬ್ಬರವಿಳಿತಗಳಂತೆ ಒಂದು ಕಾಲದಲ್ಲಿ ಅಭಿವೃದ್ಧಿ ಸ್ಥಿತಿಯಲ್ಲಿರುವುದೂ, ಮತ್ತೊಂದು ಕಾಲದಲ್ಲಿ ಇಳಿತದಲ್ಲಿರುವುದೂ ಪ್ರಪಂಚ ಸ್ವಾಭಾ

ವಿಕವಾಗಿರುವುದು. ಹೀಗೆ ಸಾರ್ವತ್ರಿಕವಾಗಿ ಧರ್ಮವು ಅವನತಿಯನ್ನು ಹೊಂದಿರುವ ಚಿನ್ಹೆಯು ಕಂಡುಬಂದೊಡನೆಯೇ, ಮಹಾಮಹಿಮೋಪೇತರಾದ ಮಹಾನುಭಾವರೊಬ್ಬರು ಅವತರಿಸಿ ಧರ್ಮವನ್ನು ಪರಿಷ್ಕರಿಸಿ, ಅವಶ್ಯ ಗ್ರಂಥರಚನೆಮಾಡಿ, ಸ್ವತಃ ತಾವು ನಿರ್ಮಮರಾಗಿ ಜೀವಿಸಿ, ತಮ್ಮ ಜೀವಿತಾಚರಣೆಯಿಂದಲೇ ತಾವು ಪ್ರತಿಪಾದಿಸುವ ಧರ್ಮಕ್ಕೊಂದು ರೂಪವನ್ನು ತಂದಿತ್ತು ಧರ್ಮೋದ್ಧಾರಮಾಡುವರು. ದ್ವಾಪರಯುಗಾಂತ್ಯದಲ್ಲಿ ಹೀಗೆ ಧರ್ಮೋದ್ಧರಣ ಮಹತ್ಕಾರ್ಯಕ್ಕಾಗಿ ಅವತರಿಸಿದವರೇ ಶ್ರೀವ್ಯಾಸಮಹರ್ಷಿಗಳು. ಈ ಮುನಿಶ್ರೇಷ್ಠರು ವೇದವಿಭಜನೆಮಾಡಿ, ಅದು ಸುಬೋಧವಾಗುವಂತೆ ಬ್ರಹ್ಮಸೂತ್ರಗಳನ್ನು ರಚಿಸಿ, ಅವುಗಳ ಅರ್ಥವು ಸ್ಪಷ್ಟರೀತಿಯಿಂದ ಗೋಚರವಾಗುವಂತೆಯೂ ತ್ರಿಗುಣ ವಿಶಿಷ್ಟರಾದ ಜೀವರ ರುಚಿಭೇದವನ್ನನುಸರಿಸಿ ಪ್ರಯೋಜನವಾಗುವಂತೆಯೂ ಅಷ್ಟಾದಶಪುರಾಣಗಳನ್ನು ರಚನೆಮಾಡಿ ಅಗಾಧರೀತಿಯಲ್ಲಿ ಧರ್ಮೋದ್ಧಾರಮಾಡಿದರು ಇವರಿಂದ ರಚಿಸಲ್ಪಟ್ಟ ಬ್ರಹ್ಮಸೂತ್ರಗಳು, ಮಹಾಭಾರತ ಗ್ರಂಥಸಾಗರದಲ್ಲಡಗಿದ ರತ್ನಪ್ರಾಯವಾದ ಭಗವದ್ಗೀತೆ ಮತ್ತು ಶ್ರುತ್ಯರ್ಥಗಳನ್ನು ನಿರೂಪಿಸುವ ಉಪನಿಷತ್ತುಗಳು ಇವುಗಳೂ, ಕಾಲಕ್ರಮದಲ್ಲಿ ಜನಮನಕ್ಕೆ ಸುಬೋಧವಾಗದಿರಲು, ಇವುಗಳಿಗೆ ಭಾಷ್ಯರಚನೆಮಾಡಿ, ಇವುಗಳ ಅಂತರಾರ್ಥಗಳನ್ನು ವ್ಯಕ್ತಗೊಳಿಸುವ ಪ್ರಯತ್ನವು ನಡೆಯಸಾಗಿತು. ಶ್ರೀಶಂಕರ-ರಾಮಾನುಜಾಚಾರ್ಯರುಗಳು ತಮ್ಮ ತಮ್ಮ ಸಿದ್ಧಾಂತಗಳಂತೆ ಈ ಗ್ರಂಥತ್ರಯಗಳಿಗೂ ವ್ಯಾಖ್ಯಾನಮಾಡಿ ತಮ್ಮತಮ್ಮ ಮತಗಳನ್ನು ಲೋಕದಲ್ಲಿ ಪ್ರಚಾರಗೊಳಿಸಿದರು. ಇಷ್ಟಾದರೂ, ಶ್ರೀ ವೇದವ್ಯಾಸರ ನಿಶ್ಚಯೋದ್ದೇಶವು ಈ ವ್ಯಾಖ್ಯಾನಗಳಿಂದ ಹೊರಪಡದಿರಲು, ಮತ್ತೊಂದು ಸ್ಪಷ್ಟಾರ್ಥಕ್ಕಾಗಿ ಆಸ್ತಿಕ ಜನಮನಶ್ಚಕೋರವು ಆಸಿಸುತ್ತಿದ್ದ ಸ್ಥಿತಿಯು ತೋರಿಬಂದಿತು. ಆಗ-ಎಂದರೆ, ಹನ್ನೆರಡನೆಯ ಶತಮಾನದ ಅಂತ್ಯಭಾಗದಲ್ಲಿ, ಶ್ರೀ ಉಡುಪೀ ಕ್ಷೇತ್ರದ, ಸಮೀಪದಲ್ಲಿ, ಮಧ್ಯಗೇಹಭಟ್ಟನೆಂಬ ವಿಪ್ರೋತ್ತಮನ ಮನೆಯಲ್ಲಿ, ಶ್ರೀ ವಾಯುದೇವರೇ- ಶ್ರೀಮನ್ಮಧ್ವಾಭಿಧಾನದಿಂದ ಅವತರಿಸಿ, ಬಾಲ್ಯದಲ್ಲೇ ಸರ್ವಸಂಗ ಪರಿತ್ಯಾಗಮಾಡಿ ಸನ್ಯಾಸಾಶ್ರಮವನ್ನು ಸ್ವೀಕರಿಸಿ, ಶ್ರೀವ್ಯಾಸಕೃತ ಗ್ರಂಥರತ್ನಗಳಿಗೆಲ್ಲ-ಅವರ ಉದ್ದೇಶಾನುಸಾರವಾಗಿ

ಅಂತರ್ಯಾರ್ಥಗಳನ್ನು ಶ್ರುತಿಸ್ಮೃತಿ ಪುರಾಣಾದಿ ವಾಕ್ಯಗಳಿಗೆ ಲೇಶಮಾತ್ರವೂ ವಿರೋಧವೆನ್ನಿಸದಂತೆ ವ್ಯಾಖ್ಯಾನಮಾಡಿ ತತ್ಪ್ರತಿಪಾದಕವಾದ ಮೂವತ್ತೇಳು ಗ್ರಂಥಗಳನ್ನು ರಚನೆಮಾಡಿದರು. ಗ್ರಂಥರಚನೆಮಾಡಿ ಅಷ್ಟಕ್ಕೇ ವಿರಮಿಸಲಿಲ್ಲ; ಅವುಗಳ ಪ್ರಚಾರಕ್ಕಾಗಿ ಅದ್ಯಂತ ಭಾರತದೇಶದಲ್ಲಿ ವಿಸ್ತಾರವಾಗಿ ಸಂಚರಿಸಿ, ಅನೇಕಸ್ಥಳಗಳಲ್ಲಿ ಪರಮತೀಯ ದಿಗ್ದಂತಿ ಪಂಡಿತರನ್ನು ವಾದದಲ್ಲಿ ಸೋಲಿಸಿ, ಅವರನ್ನೂ ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡು, ತನ್ಮೂಲಕ ತಮ್ಮ ಮತ-ಸಿದ್ಧಾಂತವನ್ನು ಚಿರಸ್ಥಾಯಿಯನ್ನಾಗಿಸಿದರು. ಶ್ರೀಮನ್ಮಧ್ವಾಚಾರ್ಯರಿಂದ ಪುನರುದ್ಧೃತವಾದ - ಸ್ಥಾಪಿತವಾದ ದ್ವೈತಸಿದ್ಧಾಂತವು, ಸರ್ವಸ್ಥಳಗಳಲ್ಲೂ ವ್ಯಾಪಿಸಿ ಜನಗಳಿಂದ ವಿಶೇಷ ಪೂಜ್ಯಭಾವದಿಂದ ಆದರಿಸಲ್ಪಟ್ಟಿತು. ಅನೇಕಾನೇಕರು ಆ ಮತದ ಅನುಯಾಯಿಗಳಾಗಿ, ಗ್ರಂಥಪಠನದಿಂದ ತಮ್ಮ ಪಾರತ್ರಿಕಗತಿಯನ್ನು ಸಾಧಿಸಿಕೊಂಡರು. ಶ್ರೀಮದಾಚಾರ್ಯರು ಕ್ರಿ. ಶ. ೧೩೧೭ರಲ್ಲಿ ಜನಾಂಗದ ದೃಷ್ಟಿಗಗೋಚರರಾಗಿ ಹಿಮಾಚಲದಲ್ಲಿ ಶ್ರೀ ವ್ಯಾಸಾಶ್ರಮವನ್ನು ಕುರಿತು ಗಮಿಸಿದ ತರುವಾಯ, ಅವರ ಪ್ರಥಮ ಶಿಷ್ಯರಾದ ಶ್ರೀ ಪದ್ಮನಾಭತೀರ್ಥರು ತಮ್ಮ ಆಚಾರ್ಯರ ಸ್ಥಾನದಲ್ಲಿ ಕುಳಿತು, ಏಳುವರ್ಷಕಾಲ ದ್ವೈತಸಾಮ್ರಾಜ್ಯ ಪೀಠವನ್ನು ಆಳಿ ವೃಂದಾವನಸ್ಥರಾದರು.

ಶ್ರೀ ಪದ್ಮನಾಭತೀರ್ಥರ ತರುವಾಯ ಶ್ರೀ ನರಹರಿತೀರ್ಥರು ವೇದಾಂತ ಸಾಮ್ರಾಜ್ಯ ಪೀಠವನ್ನೇರಿ ಒಂಬತ್ತು ವರ್ಷಕಾಲ ಲೋಕಕ್ಕೆ ಜ್ಞಾನಬೋಧೆಮಾಡಿ ದಿವಂಗತರಾದರು. ಅವರ ತರುವಾಯ ಶ್ರೀ ಮಾಧವತೀರ್ಥರು ಹದಿನೇಳು ವರ್ಷಕಾಲವೂ, ಶ್ರೀ ಅಕ್ಷೋಭ್ಯತೀರ್ಥರು ಹದಿನೇಳು ವರ್ಷಕಾಲವೂ ದ್ವೈತವೇದಾಂತ ಸಾಮ್ರಾಜ್ಯವನ್ನಾಳಿ ಯಶಃಕಾಯರಾದರು. ಶ್ರೀ ಪದ್ಮನಾಭತೀರ್ಥರು ಈಗಿನ ಮುಳಬಾಗಿಲಲ್ಲಿ ಮಠವನ್ನು ಸ್ಥಾಪಿಸಿದರು ಶ್ರೀ ಮಾಧವತೀರ್ಥರು ಮಜ್ಜಿಗೇಹಳ್ಳಿಯೆಂಬಲ್ಲಿ ಮಠವನ್ನು ಸ್ಥಾಪಿಸಿದರು. ಶ್ರೀಮದಕ್ಷೋಭ್ಯತೀರ್ಥರು ಶಿವಮೊಗ್ಗಾ ಡಿಸ್ಟ್ರಿಕ್ಟಿಗೆ ಸೇರಿದ ಕೂಡ್ಲಿ ಎಂಬ ಸ್ಥಳದಲ್ಲಿ ತಮ್ಮ ಮಠವನ್ನು ಸ್ಥಾಪಿಸಿದರು. ಈ ಮೂರು ಮಠಗಳ ಶಿಷ್ಯಸಂತತಿಯೂ ಈಗ್ಗೂ ನಡೆದುಬರುತ್ತಿದೆ. ಶ್ರೀ ನರಹರಿತೀರ್ಥರು ಮಾತ್ರ ಪ್ರತ್ಯೇಕ ಮಠವನ್ನು ಸ್ಥಾಪಿಸಿದಂತೆ ಕಂಡು

ಬಂದಿಲ್ಲ. ಹೀಗೆ ಶ್ರೀಮದಾಚಾರ್ಯರಿಂದ ಸ್ಥಾಪಿತವಾದ ದ್ವೈತಮತವು ಅವರ ಶಿಷ್ಯರಿಂದ ಊರ್ಜಿತಗೊಳಿಸಲ್ಪಟ್ಟು ದಿನದಿನಕ್ಕೆ ಪ್ರವರ್ಧಮಾನ ವಾಗುತ್ತಿದ್ದಿತು.



## ಅಧ್ಯಾಯ ೨ 'ಧೋಂಡೂ ರಘುನಾಥರಾವ್'

ಶ್ರೀಮನ್ಮಧ್ವಾಚಾರ್ಯರ ತರುವಾಯ ಈ ನಾಲ್ಕುಮಂದಿ ಶಿಷ್ಯರೂ ಐವತ್ತು ವರ್ಷಕಾಲ, ತಮ್ಮ ಗುರುಗಳಿಂದ ಸ್ಥಾಪಿತವಾದ ದ್ವೈತಸಿದ್ಧಾಂತ ಕಲ್ಪವೃಕ್ಷಕ್ಕೆ ವಾದಿಗಳೆಂಬ ಮದಗಜಗಳಿಂದ ಯಾವ ವಿಧವಾದ ಬಾಧೆಯೂ ಉಂಟಾಗದಂತೆ ರಕ್ಷಿಸಿಕೊಂಡು ಬಂದರು. ಆದರೆ, ಶ್ರೀಮದಕ್ಷೋಭ್ಯ ತೀರ್ಥರ ಕಾಲದ ವೇಳೆಗೆ ಅದರ ಪ್ರಚಾರವು ಕುಂಠಿಸುವಂತಹ ಒಂದು ಪ್ರಬಲ ಪ್ರತಿಪಕ್ಷವು ತಲೆಯೆತ್ತಿ, ಅದ್ವೈತಮತಪ್ರಚಾರಕ್ಕಾಗಿ ಆ ಸಿದ್ಧಾಂತವು ಸುಲಭಸಾಧ್ಯವಾಗುವಂತೆ ಶಂಕರಾಚಾರ್ಯರ ಗ್ರಂಥಗಳಿಗೂ, ಇತರ ವೈದಿಕ ಗ್ರಂಥಗಳಿಗೂ ಟೀಕೆಗಳನ್ನು ರಚಿಸುವ ಪ್ರಯತ್ನವು ನಡೆಯಸಾಗಿತು. ಕರ್ಣಾಟಕ ಸಿಂಹಾಸನ ಸ್ಥಾಪನಾಚಾರ್ಯರೆಂದು ಅಜರಾಮರ ಕೀರ್ತಿಯನ್ನು ಪಡೆದಿರುವ ಶ್ರೀ ವಿದ್ಯಾರಣ್ಯ ಮುನೀಶ್ವರರು, ಚತುಶ್ಶಾಸ್ತ್ರ ಪಾರಂಗತರಾಗಿದ್ದು ತಮ್ಮ ಅಸದೃಶ ವಿದ್ಯಾವೈಭವದಿಂದ ಅನೇಕಮಂದಿ ವಿದ್ವಾಂಸರನ್ನು ವಾದದಲ್ಲಿ ಜಯಿಸಿ, ಅನೇಕ ಗ್ರಂಥಗಳಿಗೆ ವ್ಯಾಖ್ಯಾನ ಗಳನ್ನು ಬರೆದು, ಪ್ರಸಿದ್ಧಪಡಿಸಿದರು. ಅಸದೃಶ ಪಾಂಡಿತ್ಯದ ಬೆಂಬಲ ದೊಂದಿಗೆ, ತಮ್ಮಿಂದಲೇ ಪ್ರತಿಷ್ಠಿತರಾದ ರಾಜ್ಯಾಧಿಪರ ಬೆಂಬಲವೂ ವಿಶೇಷ ವಾಗಿರಲು, ಯಾವ ವಿಷಯದಲ್ಲೂ ಅವರ ಮಾತಿಗೆ ಪ್ರತ್ಯುತ್ತರವೇ ಇಲ್ಲದಂ ತಾಯಿತು. ಅವರು ಪಟ್ಟ ಅಭಿಪ್ರಾಯವನ್ನು ಅಲ್ಲವೆಂಬುವ ಧೈರ್ಯವುಳ್ಳವ ನೊಬ್ಬನೂ ಇಲ್ಲದಂತಾಯಿತು. ವಿದ್ಯಾರಣ್ಯರು ಅದ್ವೈತಮತಾನುಯಾ ಯಿಗಳಾಗಿ, ಅದರ ತತ್ವಗಳನ್ನು ಪ್ರತಿಪಾದಿಸುವುದಕ್ಕಾಗಿಯೇ ಗ್ರಂಥರಚನೆ ಯಲ್ಲಿ ತೊಡಗಿರಲು ಅವರನ್ನು ಎದುರಿಸಿ, ತಮ್ಮ ಅಭಿಪ್ರಾಯವನ್ನೂ ಮತ ತತ್ವವನ್ನೂ ಸಮರ್ಥಿಸಿ, ವಾದಿಸಿ ಜಯಿಸಲು ಮತ್ತಾವನಿಗೆ ಸಾಧ್ಯವಿದ್ದೀತು!

ಸ್ಥಿತಿಯು ಹೀಗಾದುದರಿಂದ, ರಾಜಾಶ್ರಯವನ್ನು ಪಡೆದ ಶ್ರೀ ಶೃಂಗಗಿರಿ ಸಂಸ್ಥಾನವೂ, ಅದ್ವೈತಮತವೂ ಅವ್ಯಾಹತವಾಗಿ ಅಭಿವೃದ್ಧಿಯ ಸೋಪಾನಗಳನ್ನು ಏರಲಾರಂಭಿಸಿದುವು. ಶ್ರೀಮನ್ಮಧ್ವಾಚಾರ್ಯರ ತರುವಾಯ ಅರ್ಧಶತಮಾನ ಕಾಲದೊಳಗಾಗಿಯೇ, ಅವರಿಂದ ಸ್ಥಾಪಿತವಾದ ದ್ವೈತ ಸಿದ್ಧಾಂತ ಪ್ರಚಾರಕ್ಕೆ ಒದಗಿದ ವಿಘ್ನವನ್ನು ಕುರಿತು, ಅವರ ನಾಲ್ವರು ಶಿಷ್ಯರಲ್ಲಿ ಕೊನೆಯವರಾದ ಶ್ರೀ ಅಕ್ಷೋಭ್ಯತೀರ್ಥರು, ವಿಶೇಷವಾಗಿ ವಿಚಾರಪಟ್ಟುಕೊಂಡರು — ಹಾಗೆ ವಿಚಾರಪಟ್ಟುಕೊಂಡು ವ್ಯಸನಾಕ್ರಾಂತರಾಗಿ ಸುಮ್ಮನೆ ಕುಳ್ಳಿರಲಿಲ್ಲ. ವಿದ್ಯಾರಣ್ಯರೊಂದಿಗೆ ವಾದಮಾಡಿ, ತಮ್ಮ ದ್ವೈತ ಸಿದ್ಧಾಂತದ ಸತ್ಯತೆಯನ್ನು ಸ್ಥಾಪಿಸಲಿಚ್ಛಿಸಿ, ವಿದ್ಯಾನಗರೀ ರಾಜಧಾನಿಗೆ ಪ್ರಯಾಣಮಾಡಿದರು. ಮತ್ತು ತಾವು ವಾದಿನಿಗ್ರಹಾರ್ಥವಾಗಿ ಬಂದಿರುವುದಾಗಿ ವಿದ್ಯಾರಣ್ಯರ ಬಳಿಗೆ ವರ್ತಮಾನವನ್ನೂ ಕಳುಹಿಸಿದರು.

ಶ್ರೀ ವಿದ್ಯಾರಣ್ಯರಿಗೂ ಅಕ್ಷೋಭ್ಯತೀರ್ಥರಿಗೂ ನಡೆದ ವಿವಾದ ವಿಚಾರದಲ್ಲಿ ಒಂದು ದಂತಕಥೆಯು ಹೀಗೆ ನಿರೂಪಿಸುತ್ತದೆ. ಶ್ರೀಮದ್ವಿಜಯನಗರೀ ಸಂಸ್ಥಾನಾಧೀಶ್ವರನಿಂದ ಪೂಜಿತರೂ, ರಾಜಮಾನ್ಯರೂ ಆಗಿದ್ದ ಶ್ರೀ ವಿದ್ಯಾರಣ್ಯರೆಲ್ಲಿ; ಕೇವಲ ನಾಲ್ಕುಮಂದಿ ಶಿಷ್ಯರೊಂದಿಗೆ ಗ್ರಾಮೈಕ ರಾತ್ರಿಯಾಗಿ ತಿರುಗುತ್ತಾ ಶಿಷ್ಯರ ಭಿಕ್ಷೆಗಳಿಂದ ಲೌಕಿಕವನ್ನು ಸಾಗಿಸುತ್ತಿದ್ದ ಬಡ ಸನ್ಯಾಸಿ ಅಕ್ಷೋಭ್ಯತೀರ್ಥರೆಲ್ಲಿ! ಅವರು ವಾದಭಿಕ್ಷೆಯನ್ನು ಕೋರಿ, ಹೇಳಿಕಳುಹಿಸಿದ ವಾರ್ತೆಗೆ ತಕ್ಕ ಪ್ರತ್ಯುತ್ತರವು ಶ್ರೀವಿದ್ಯಾರಣ್ಯರ ಕಡೆಯಿಂದ ದೊರೆಯಲಿಲ್ಲ. ಅದಕ್ಕೆ ಕಾರಣವೇನೆಂಬುದು ಅಕ್ಷೋಭ್ಯತೀರ್ಥರಿಗೆ ತಿಳಿಯದಿರಲಿಲ್ಲ. ಲೌಕಿಕದೃಷ್ಟಿಯಿಂದ ತಮ್ಮ ರಿಕ್ತತೆಯು ಈ ಕಾರ್ಯಕ್ಕೊಂದು ದೊಡ್ಡ ಪ್ರತಿಬಂಧಕವೆಂದೂ, ಅದನ್ನು ಪರಿಹರಿಸಿಕೊಂಡು, ರಾಜಯೋಗ್ಯವಾದ ವೈಭವಗಳಿಂದ ಬಂದರೆ, ಆಗ ಮಾತ್ರವೇ ತಮ್ಮ ಪಾಂಡಿತ್ಯಕ್ಕೆ ಬೆಲೆ ದೊರೆಯುವುದೆಂದೂ ಮನಸ್ಸಿಗೆ ತೋರಿತು. ತರುವಾಯ ಹರಿಚಿತ್ತದಲ್ಲಿ ಇದ್ದಂತಾಗಲೆಂದುಕೊಂಡು ಕೆಲಕಾಲ ಸುಮ್ಮನಿದ್ದರು.

ಪರಮವೈರಾಗ್ಯಶಿಖಾಮಣಿಗಳಾಗಿದ್ದ ಅಕ್ಷೋಭ್ಯತೀರ್ಥರ ಮಠವು ರಿಕ್ತದೆಸೆಯಲ್ಲಿದ್ದಿತಾದರೂ, ಅದರಿಂದ ಅವರ ಮಹಿಮೆಗಾಗಲೀ, ಜ್ಞಾನ ಭಕ್ತಿವೈರಾಗ್ಯಾದಿ ಸಂಪತ್ತಿಗಾಗಲೀ ಯಾವ ವಿಧವಾದ ಕುಂದುಕೊರತೆ

ಗಳೂ ಉಂಟಾಗಿರಲಿಲ್ಲ. ಅವರು ಮಹದಾನಂದದಿಂದ ಶ್ರೀ ಹರಿಸೇವೆಯನ್ನೆಸಗುತ್ತ, ಶಿಷ್ಯರಿಗೆ ಪಾಠಪ್ರವಚನಗಳು, ಸಾಮಾನ್ಯರಿಗೆ ಧರ್ಮಬೋಧೆ ಮುಂತಾದುವುಗಳನ್ನಿಟ್ಟುಕೊಂಡು, ಸ್ತ್ರೀಯರನ್ನೂ - ಅತಿಥ್ಯಭ್ಯಾಗತರನ್ನೂ ತೀರ್ಥಪ್ರಸಾದಾದಿಗಳಿಂದ ಅನುಗ್ರಹಿಸುತ್ತ ಭಗವದ್ಭಕ್ತಿಯನ್ನು ಪ್ರಚಾರಗೊಳಿಸುತ್ತಲಿದ್ದರು. ಅವರ ತಪೋಮಹಿಮೆಯು ಎಷ್ಟುಮಟ್ಟಿನದಿತ್ತು ಎಂಬುದನ್ನು ಪ್ರಕಟಿಸುವ ಒಂದು ಸಂಗತಿಯು ನಡೆಯಿತೆಂದು ಅವರ ಚರಿತ್ರೆಯಲ್ಲಿ ಉಲ್ಲೇಖಿಸಲ್ಪಟ್ಟಿದೆ. ಒಂದಾನೊಂದು ಸಂದರ್ಭದಲ್ಲಿ ಇಬ್ಬರು ಬ್ರಹ್ಮಬಂಧುಗಳು ಶ್ರೀಗಳವರ ಸನ್ನಿಧಿಯನ್ನು ಸೇರಿ, ತಾವು ಪುರಾಕೃತ ದುಷ್ಕರ್ಮ ಪ್ರಾಬಲ್ಯಕ್ಕೆ ವಶರಾಗಿ ಬ್ರಹ್ಮಹತ್ಯೆಯನ್ನು ಮಾಡಿಬಿಟ್ಟುದಾಗಿಯೂ, ಅದಕ್ಕಾಗಿ ವಿಶೇಷ ಪಶ್ಚಾತ್ತಾಪಗೊಂಡಿರುವುದಾಗಿಯೂ ತಮ್ಮ ನಿಜಸ್ಥಿತಿಯನ್ನು ವಿಜ್ಞಾಪಿಸಿ, ಮುಂದೆ ನರಕವಾಸವೇ ಮುಂತಾದ ದುರ್ಧರಸಂಕಟಗಳನ್ನನುಭವಿಸುವುದಕ್ಕಿಂತಲೂ, ತಮ್ಮಾ ದುರಂತ ಪಾಪಕ್ಕೆ ಇಲ್ಲೇ ತಕ್ಕ ಶಿಕ್ಷೆಯನ್ನು ವಿಧಿಸಿ ತಮ್ಮನ್ನು ಪುನೀತರನ್ನಾಗಿ ಮಾಡಬೇಕೆಂದು ಬೇಡಿಕೊಂಡರು. ತಮ್ಮ ಪಾಪಕ್ಕಾಗಿ ನಿಶ್ಚಯವಾಗಿಯೂ ಹೃದಯವೇದನೆಪಟ್ಟು ನರಳುತ್ತಿರುವ ಆ ಪಾಪಿಗಳನ್ನು ಕಂಡು, ದಯಾರ್ದ್ರಹೃದಯರಾದ ಶ್ರೀಗಳವರು ಪರಿತಾಪಪಟ್ಟು - ಹಾಗೆ ನಿಮ್ಮ ಪಾಪದ ವಿಷಯದಲ್ಲಿ ನಿಶ್ಚಯವಾಗಿಯೂ ಪಶ್ಚಾತ್ತಾಪವುಂಟಾಗಿರುವುದಾದರೆ ಇಲ್ಲೇ ಸಮೀಪದಲ್ಲಿರುವ ಈ ಉದ್ದವಾದ ವೃಕ್ಷವನ್ನೇರಿ ಮೇಲಿನಿಂದ ತಲೆಕೆಳಗಾಗಿ ಧುಮುಕಿರಿ; ಹಾಗಾದರೆ ನಿಮ್ಮ ಪಾಪವು ಪರಿಹಾರವಾಗುವುದು, ಎಂದು ನುಡಿದರು. ಅಪರೋಕ್ಷಜ್ಞಾನಿಗಳಾದ ಅವರ ಈ ಮಾತು, ಆ ಪಾಪಿಬ್ರಾಹ್ಮಣರಿಗೆ ತಮ್ಮ ಪಾಪದ ವಿಷಯದಲ್ಲಿ ತಕ್ಕ ಶಿಕ್ಷೆಯೆಂದು ತೋರಿತು. ಒಡನೆ ಲೇಶಮಾತ್ರವೂ ಸಂಶಯವೆಂಬುದಿಲ್ಲದೆ ಇಬ್ಬರೂ ಆ ಮರವನ್ನು ಹತ್ತಿ, ಧುಮುಕಲು ಆಜ್ಞೆಯನ್ನು ಬೇಡಿದರು. ಅವರ ಚಿತ್ತವೃತ್ತಿಯನ್ನು ತಿಳಿದ ಶ್ರೀಗಳವರು, ಅವರ ದಾರ್ಢ್ಯವನ್ನು ಕಂಡು ಸಂತೋಷಿಸಿ, ಕೆಳಕ್ಕೆ ಇಳಿದು ಬನ್ನಿರೆಂದು ಆಜ್ಞಾಪಿಸಿ, ಸ್ನಾನಾದಿಗಳಿಂದ ಶುದ್ಧರಾದ ತರುವಾಯ ಅವರಮೇಲೆ ಶಂಖೋದಕವನ್ನು ಪ್ರೋಕ್ಷಿಸಿ-'ನೀವಿನ್ನು ಶುದ್ಧರಾದಿರಿ- ಬ್ರಹ್ಮಹತ್ಯೆಯಿಂದ ಮುಕ್ತರಾದಿರಿ' ಎಂದು ಅನುಗ್ರಹಿಸಿ, ಆ ದಿನ ತಮ್ಮೊಂ

ದಿಗೆ ಸಹಪಙ್ಕ್ತಿಯಲ್ಲೇ ಕುಳ್ಳಿರಿಸಿಕೊಂಡು ಭೋಜನಮಾಡಿದರು. ಶ್ರೀಗಳವರ ಈ ಕಾರ್ಯವು ಎಲ್ಲರಿಗೂ ಪರಮಾಶ್ಚರ್ಯವನ್ನುಂಟುಮಾಡಿತು. ಬ್ರಹ್ಮಹತ್ಯೆಯಂತಹ ಮಹಾಪಾತಕವು ಶಂಖೋದಕ ಪ್ರೋಕ್ಷಣೆಯಿಂದ ಪರಿಹಾರವಾಗಬಲ್ಲುದೇ, ಎಂದು ಕೆಲವರು ಆಕ್ಷೇಪಿಸಿದರು. ಆಗ ಶಂಖೋದಕದ ಮಹಿಮೆಯೆಷ್ಟೆಂಬುದನ್ನು ಅವರ ತಿಳಿವಳಿಕೆಗೆ ತಂದುಕೊಡಬೇಕೆಂದು ಶ್ರೀಗಳವರಿಗೆ ಅಪೇಕ್ಷೆಯಾಯಿತು. ಒಡನೆ ಚೆನ್ನಾಗಿ ಮಡಿಮಾಡಿದ ಎರಡು ಬಿಳುಪಾದ ಬಟ್ಟೆಯಮಡಿಕೆಗಳನ್ನು ತರಿಸಿ, ಅವುಗಳಲ್ಲೊಂದನ್ನು ಬೀಗಮುದ್ರೆಗಳಿಂದ ಭದ್ರವಾದ ಪೆಟ್ಟಿಗೆಯಲ್ಲಿಡಿಸಿ, ಮತ್ತೊಂದನ್ನು ಗೇರೆಣ್ಣೆಯಲ್ಲಿ ಅದ್ದಿಸಿ, ಅದನ್ನು ಪವಿತ್ರತೀರ್ಥಗಳೆಂದು ಪ್ರಖ್ಯಾತವಾದ ನದಿಗಳಲ್ಲಿ ಒಗೆದು ಶುದ್ಧಿಪಡಿಸಿ ತರಬೇಕೆಂದು ಕಳುಹಿಸಿದರು. ಯಾವ ನದಿಯಲ್ಲಿ ಹೇಗೆ ಒಗೆದಾಗ್ಯೂ, ಗೇರೆಣ್ಣೆಯು ಬಟ್ಟೆಯಿಂದ ಹೋಗಿ ಅದು ಶುದ್ಧಿಯಾಗಬಲ್ಲುದೆ? ಗಟ್ಟಿ ಕಪ್ಪುಬಣ್ಣದಿಂದಲೇ ಹಿಂದಿರುಗಿದ ಆ ಬಟ್ಟೆಯನ್ನು, ಆಕ್ಷೇಪಿಸಿದ ಜನರಿಗೆ ತೋರಿಸಿ, ಆ ಬಟ್ಟೆಯಮೇಲೆ ಶ್ರೀ ಹರಿಸ್ಮರಣಪೂರ್ವಕ ಶಂಖೋದಕವನ್ನು ಪ್ರೋಕ್ಷಿಸಿದರು. ಆ ಆಶ್ಚರ್ಯವನ್ನೇನೆಂದು ಹೇಳಲಾದೀತು? ಗೇರೆಣ್ಣೆಯ ಲೇಶಮಾತ್ರ ಕಲೆಯೂ ಸಹ ನಿಲ್ಲದೆ ಅದು ಶುಭ್ರವಾಗಲು ಪೆಟ್ಟಿಗೆಯೊಳಗಿದ್ದ ಮೊದಲಿನ ಬಟ್ಟೆಯನ್ನೂ ತರಿಸಿನೋಡಲಾಗಿ, ಆ ಎರಡಕ್ಕೂ ಎಷ್ಟುಮಾತ್ರವೂ ವ್ಯತ್ಯಾಸವು ಕಂಡುಬರಲಿಲ್ಲ ಇದನ್ನು ಕಂಡು ಸಕಲರೂ ಶ್ರೀಗಳವರ ಅದ್ಭುತಸಾಮರ್ಥ್ಯವನ್ನೂ - ಶಂಖೋದಕದ ಮಹಿಮೆಯನ್ನೂ ಪರಿಪರಿಯಿಂದ ಕೊಂಡಾಡಿದರು.

ಇಂತಹ ಮಹಾಮಹಿಮಾನ್ವಿತರಾದ ಶ್ರೀಅಕ್ಷೋಭ್ಯತೀರ್ಥ ಶ್ರೀಪಾದಂಗಳವರ ಕೀರ್ತಿಯು ಹತ್ತಿರದ - ದೂರದ ಸ್ಥಳಗಳಲ್ಲೆಲ್ಲ ಪ್ರಚಾರವಾಗಲು, ಸಮೀಪದಲ್ಲೇ ಇದ್ದ ಒಬ್ಬ ರಾಜ್ಯಾಧಿಪತಿಯು, ಸಂತಾನಾಪೇಕ್ಷೆಯಿಂದ ಶ್ರೀಗಳವರನ್ನು ಆಶ್ರಯಿಸಿ - ಪ್ರಾರ್ಥಿಸಿದನು. ದಯಾಮಯರಾದ ಶ್ರೀಗಳವರು ಆತನ ಪ್ರಾರ್ಥನೆಯನ್ನು ಮನ್ನಿಸಿ, ಒಂದು ಫಲವನ್ನು ಅಭಿಮಂತ್ರಿಸಿ ಕೊಟ್ಟು, ಈ ಫಲಭಕ್ಷಣೆಯಿಂದ, ನಿನಗೆ ವಿಷ್ಣುವೈಷ್ಣವಭಕ್ತನಾದ ಒಬ್ಬ ಪುತ್ರನು ಉದಯಿಸುವನೆಂದು ಆಶೀರ್ವದಿಸಿ ಕಳುಹಿಸಿದರಂತೆ! ಮುಂದೆ ಯುಕ್ತಕಾಲದಲ್ಲಿ ಆ ರಾಜನಪತ್ನಿಯು ಗರ್ಭಿಣಿಯಾಗಿ, ನವಮಾಸಗಳು

ಕಳೆಯಲು ಒಂದು ಶುಭ ಮುಹೂರ್ತದಲ್ಲಿ ಪುತ್ರನನ್ನು ಪ್ರಸವಿಸಿದಳು. ಇದನ್ನು ಕಂಡು ರಾಜನು ಪರಮಾನಂದಸ್ವಾಂತನಾಗಿ, ತನ್ನ ರಾಜಮರ್ಯಾದೆಗಳೊಂದಿಗೂ ಚತುರ್ಬಲದೊಂದಿಗೂ ದಿವ್ಯವೈಭವದಿಂದ ಶ್ರೀಗಳವರ ಸನ್ನಿಧಿಗೆ ಬಂದು, ಅವರ ಪಾದಪೂಜೆಮಾಡಿ, ವಿಶೇಷ ಧನಕನಕಾದಿಗಳನ್ನು ಪಾದಗಾಣಿಕೆಯನ್ನಾಗಿತ್ತು ತನ್ನ ರಾಜ್ಯವೂ ತನುಮನಧನಗಳೂ ಶ್ರೀಗಳವರ ಪಾದಕ್ಕೆ ಸಮರ್ಪಿತವಾದುವೆಂದೂ ಅನುಗ್ರಹಿಸಬೇಕೆಂದೂ ದೀರ್ಘದಂಡನಮಸ್ಕಾರಮಾಡಿದನು. ಕೃತಜ್ಞನಾದ ಆತನ ವಿನೀತಭಾವವನ್ನು ಕಂಡು, ಅಕ್ಷೋಭ್ಯತೀರ್ಥರು ಸಂತುಷ್ಟರಾಗಿ, ಆತನನ್ನು ಆಶೀರ್ವಾದಪೂರ್ವಕ ಮನ್ನಿಸಿದರು. ನಿಸ್ಪೃಹಶಿರೋಮಣಿಗಳಾದ ಶ್ರೀಗಳವರು ಅವನ ರಾಜ್ಯವೈಭವಗಳನ್ನು ತೆಗೆದುಕೊಂಡು ಏನು ಮಾಡಿಯಾರು? ಆದರೆ, ರಾಜಾಶ್ರಯದ ಬೆಂಬಲವಿಲ್ಲದೆ, ಕೇವಲ ಬಿಡಿಸನ್ಯಾಸಿಯಂತೆ ಹೋಗಿದ್ದುದರಿಂದಲೇ, ವಿಜಯನಗರ ಸಂಸ್ಥಾನದ ರಾಜರ ಗುರುಸ್ಥಾನದಲ್ಲಿದ್ದ ವಿದ್ಯಾರಣ್ಯರಲ್ಲಿ ತಮಗೆ ವಾದಭಿಕ್ಷೆಯು ದೊರೆಯದಾಯಿತಾದುದರಿಂದ ಕೆಲವುಕಾಲ ಈ ಸೈನ್ಯಾದಿಗಳನ್ನು ಬಳಿಯಲ್ಲಿಟ್ಟುಕೊಂಡಿದ್ದು ತರುವಾಯ ಕಳುಹಿಸುತ್ತೇವೆಂದರು. ರಾಜನು ಅವರ ಆ ಆಜ್ಞೆಯನ್ನು ಶಿರಸಾ ಮಾನ್ಯಮಾಡಿ, ತನ್ನ ರಾಜ್ಯಕ್ಕೆ ಹೊರಟುನಡೆದನು.

ಶ್ರೀ ಅಕ್ಷೋಭ್ಯತೀರ್ಥರು ಹೀಗೆ ದೊರೆತ ಸೈನ್ಯಪರಿವಾರಸಮೇತರಾಗಿ ಹೊರಟು, ವಿಜಯನಗರ ರಾಜಧಾನಿಯನ್ನು ಸೇರಿದರು. ವಿದ್ಯಾರಣ್ಯರಿಗೆ ಶ್ರೀ ಅಕ್ಷೋಭ್ಯತೀರ್ಥರು ತಮ್ಮೊಂದಿಗೆ ವಾದಕ್ಕಾಗಿ ಬಂದಿದ್ದಾರೆಂದು ತಿಳಿಯಿತು. ಲೌಕಿಕವಾಗಿ ಸ್ವಲ್ಪಮಟ್ಟಿನ ಗಣ್ಯಸ್ಥಿತಿಯಲ್ಲಿ ಬಂದಿದ್ದ ಈಸಾರಿಯೂ ಉದಾಶೀನಭಾವದಿಂದ ಕಾಣಲು ಸಾಧ್ಯವಾಗಲಿಲ್ಲ. ಒಡನೆ ವಾದಕ್ಕೆ ಸಮ್ಮತಿ ದೊರೆಯಿತು. ತನ್ಮತಮ್ಮತವಾದಗಳ ತೀರ್ಮಾನವನ್ನು ನಿಷ್ಪಕ್ಷಪಾತವಾಗಿ ಹೇಳಲು, ಆಗ ದಿಗ್ದಂತಿಪಂಡಿತರೆಂದು ಪ್ರಖ್ಯಾತರಾಗಿ ಶ್ರೀರಂಗದಲ್ಲಿ ವಾಸವಾಗಿದ್ದ ವೇದಾಂತದೇಶಿಕರೆಂಬ ವಿಶಿಷ್ಟಾದ್ವೈತಪಂಥದ ಮಧ್ಯಸ್ಥಗಾರರೊಬ್ಬರು ಕರೆಯಿಸಲ್ಪಟ್ಟರು. ಅಕ್ಷೋಭ್ಯತೀರ್ಥರಿಗೂ ವಿದ್ಯಾರಣ್ಯರಿಗೂ ಬಹುಕಾಲ ಶಾಸ್ತ್ರ ಚರ್ಚೆಯು ಬಹು ಪ್ರೌಢರೀತಿಯಿಂದ ನಡೆಯಿತು. ಕೊನೆಗೆ ಶ್ರೀ ಅಕ್ಷೋಭ್ಯತೀರ್ಥರಿಂದ ವಿದ್ಯಾರಣ್ಯರ

ಮೇಲೆ ಹೊರಿಸಲ್ಪಟ್ಟ ಪ್ರಶ್ನ ಕೋಟಿಗಳನ್ನು ಇಳಿಸಿಕೊಳ್ಳುವುದು ಅವರಿಂದ ಸಾಧ್ಯವಾಗಲಿಲ್ಲ. ಛಾಂದೋಗ್ಯ ಉಪನಿಷತ್ತಿನಲ್ಲಿ ಉಕ್ತವಾಗಿರುವ 'ತತ್ವಮಸಿ' ಎಂಬ ವಾಕ್ಯವು ಅದ್ವೈತಪರವಾದ ಅರ್ಥವುಳ್ಳುದೆಂದು ವಿದ್ಯಾರಣ್ಯರು ವಾದಿಸಿದರು. ಆದರೆ ಅಕ್ಷೋಭ್ಯತೀರ್ಥರು ಅದೇ ತತ್ವಮಸಿ ವಾಕ್ಯವೇ ದ್ವೈತಾರ್ಥಪ್ರತಿಪಾದನೆ ಮಾಡತಕ್ಕುದೆಂದು ಹಲವು ಶ್ರುತಿ ಸ್ಮೃತ್ಯರ್ಥಗಳನ್ನು ಉದಾಹರಿಸಿ ಪ್ರತಿಪಕ್ಷಿಯ ಬಾಯಿಮುಚ್ಚಿಸಿಬಿಟ್ಟರು ಶ್ರೀ ಅಕ್ಷೋಭ್ಯರ ವಾದಗಳಿಗೆ ಪ್ರತ್ಯುತ್ತರ ಹೇಳಲು ವಿದ್ಯಾರಣ್ಯರಿಂದ ಸಾಧ್ಯವಾಗದಿರಲು, ಪರೀಕ್ಷಕ ಸ್ಥಾನದಲ್ಲಿ ಕುಳಿತಿದ್ದ ವೇದಾಂತದೇಶಿಕರು, ಆ ವಾದದ ವಿಷಯದಲ್ಲಿ ತಮ್ಮ ತೀರ್ಮಾನವನ್ನು ಹೇಳುತ್ತಾ, ಈ ಕೆಳಗೆ ಕಂಡ ಶ್ಲೋಕವನ್ನು ಹೇಳಿದರೆಂದು ಉಕ್ತವಾಗಿದೆ.

ಶ್ಲೋಕ:—ಅಸಿನಾತ್ತ ತತ್ವಮಸಿನಾ ಪರಜೀವ ಪ್ರಭೇದಿನಾ |
ವಿದ್ಯಾರಣ್ಯಂ ಮಹಾರಣ್ಯಂ ಅಕ್ಷೋಭ್ಯ ಮುನಿರಚ್ಛಿನತ್ ||

ಎಂದರೆ, 'ಅಕ್ಷೋಭ್ಯತೀರ್ಥರು, ವಿದ್ಯಾರಣ್ಯರೆಂಬ ಮಹಾರಣ್ಯವನ್ನು, ಜೀವೇಶ್ವರರಿಗೆ ಭೇದ ಹೇಳುವ 'ತತ್ವಮಸಿ' ಎಂಬ ವಾಕ್ಯದಿಂದ ನಿರ್ಮೂಲಮಾಡಿದರು' ಎಂಬೀ ಶ್ಲೋಕವು ಶ್ರೀವೈಷ್ಣವ ಗ್ರಂಥವಾದ 'ದೇಶಿಕ ಪ್ರಭಾವ'ವೆಂಬ ಗ್ರಂಥದಲ್ಲಿ ಉಲ್ಲೇಖಿತವಾಗಿದೆ. ಶ್ರೀ ಅಕ್ಷೋಭ್ಯರಿಂದ ಪರಾಜಿತರಾದ ವಿದ್ಯಾರಣ್ಯರೆಂದು, ಆ ವಿದ್ವಾಂಸರ ಅಗಾಧ ವಿದ್ವತ್ತಿಗಾಗಿ ಪರಮಾಶ್ಚರ್ಯಪಟ್ಟು, ವಂದಿಸಿ ಹೊರಟುಹೋದರು. ಶ್ರೀ ಅಕ್ಷೋಭ್ಯತೀರ್ಥರು, ತರುವಾಯ ಮೈಸೂರು ಪ್ರಾಂತದಲ್ಲಿ ಸಂಚರಿಸಿ, ಕೋಲಾರ ಡಿಸ್ಟ್ರಿಕ್ಟಿನ ಮುಳಬಾಗಿಲು ಎಂಬ ಸ್ಥಳದಲ್ಲಿ ತಮ್ಮ ವಿಜಯವನ್ನು ಕುರಿತು ಒಂದು ಶಿಲಾಶಾಸನವನ್ನು ಸ್ಥಾಪಿಸಿದರು.

ಹೀಗೆ ವಾದಿನಿಗ್ರಹಮಾಡಿ, ಹಲವು ಮಂದಿ ಸಚ್ಛಿಷ್ಯರಿಗೆ ದ್ವೈತ ಸಿದ್ಧಾಂತದಲ್ಲಿ ಪಾಠ ಪ್ರವಚನಗಳನ್ನು ನಡೆಯಿಸುತ್ತ ಸಂಚರಿಸುತ್ತಿದ್ದ ಶ್ರೀ ಅಕ್ಷೋಭ್ಯತೀರ್ಥರಿಗೆ, ವೃದ್ಧಾಪ್ಯದಿಂದ ದೇಹಶಕ್ತಿಯು ಕುಗ್ಗುತ್ತಿರಲು ತಮ್ಮ ತರುವಾಯ ಆ ಸ್ಥಾನಕ್ಕೆ ಯಾರನ್ನು ಕೂರಿಸಬೇಕೆಂಬ ಯೋಚನೆಯು ಬಾಧಿಸಹತ್ತಿತು. ನಾಲ್ಕು ದ್ವೈತಮಠಗಳಿದ್ದು ಮತಪ್ರಚಾರ

ಕಾರ್ಯವನ್ನು ಸಾಗಿಸುತ್ತಿದ್ದರೂ, ವಿಜಯನಗರ ಸಾಮ್ರಾಜ್ಯದ ರಾಜಾಶ್ರಯದಿಂದ ಬೆಂಬಲಹೊಂದಿ ನಡೆಯುತ್ತಿದ್ದ ಅದ್ವೈತ ಮತಪ್ರಚಾರಕಾರ್ಯವು ವಿಶೇಷವಾಗುತ್ತಿದ್ದುದು ಶ್ರೀಯವರ ಮನಸ್ಸಿಗೆ ಚಿಂತಾಜನಕವಾಗಿದ್ದಿತು. ಮುಂದೆ ತಮ್ಮ ಪೀಠಕ್ಕೆ ಬರತಕ್ಕವರು ಸಕಲ ವಿಷಯಗಳಲ್ಲೂ ಸಮರ್ಥರಾಗಿದ್ದು ದ್ವೈತಸಿದ್ಧಾಂತ ಜ್ಯೋತಿಯನ್ನು ಬೆಳಗಿಸತಕ್ಕವರಾಗಿರಬೇಕೆಂದು ಹಾರೈಸುತ್ತಿದ್ದರು. ಆದರೆ, ಅವರ ದೃಷ್ಟಿಯಲ್ಲಿ ಅಂತಹ ಮಹತ್ಕಾರ್ಯವನ್ನು ಸಾಧಿಸಬಲ್ಲ ಪುರುಷಶ್ರೇಷ್ಠರಾರೂ ಕಂಡುಬರಲಿಲ್ಲವಾದುದರಿಂದ ಸರ್ವಚೈತನ್ಯಸ್ವರೂಪನಾದ ಶ್ರೀವರನು ಯಾವ ಪುಣ್ಯಜೀವಿಯನ್ನು ಆ ಮಹತ್ಕಾರ್ಯಕ್ಕಾಗಿ ನಿಯಮಿಸಿರುವನೋ ಆತನೆಲ್ಲಿರುವನೋ ಎಂದುಕೊಂಡು, ಶ್ರೀಹರಿಯ ಇಚ್ಛೆಯಿದ್ದಂತಾಗಲಿ ಎಂದು ಎಲ್ಲಾ ಭಾರವನ್ನೂ ಆತನಮೇಲೆ ಬಿಟ್ಟು ನಿಶ್ಚಿಂತರಾಗಿರುತ್ತಿದ್ದರು.

ಹೀಗಿರುತ್ತಿರುವಲ್ಲಿ, ಪಂಢರಾಪುರವೆಂಬ ಪುಣ್ಯಕ್ಷೇತ್ರ ಸಮೀಪದಲ್ಲಿ ಪ್ರವಹಿಸುವ ಭೀಮರಥೀ ನದೀತೀರದಲ್ಲಿರುವ ಮಂಗಳವೇಢೆ ಎಂಬ ಗ್ರಾಮದಲ್ಲಿ ರಘುನಾಥರಾಯನೆಂಬ ಹೆಸರಿನ ದೇಶಸ್ಥ ಬ್ರಾಹ್ಮಣನು, ಹೈದರಾಬಾದು ಸಂಸ್ಥಾನದ ಆಡಳಿತಕ್ಕೆ ಒಳಪಟ್ಟು ಕೆಲವು ಸೈನ್ಯವನ್ನಿಟ್ಟುಕೊಂಡು, ಚಿಕ್ಕದೊಂದು ರಾಷ್ಟ್ರಕ್ಕೆ ಅಧಿಪತಿಯಾಗಿ, ದೇವಬ್ರಾಹ್ಮಣಾರಾಧಕನಾಗಿರುತ್ತಿದ್ದನು. ಈತನಿಗೆ ಸಖೂಬಾಯಿ ಎಂಬೊಬ್ಬ ಧರ್ಮಪತ್ನಿಯಿದ್ದು, ದಂಪತಿಗಳು ಅನ್ಯೋನ್ಯ ಪ್ರೀತಿವಿಶ್ವಾಸಗಳಿಂದ ಬಾಳ್ವೆಮಾಡುತ್ತಿದ್ದರಾದರೂ ಅವರಿಗೆ ಬಹು ದಿನಗಳವರೆಗೆ ಪುತ್ರಸಂತಾನವಾಗದೆ, ಉಭಯರೂ ವಿಶೇಷ ಚಿಂತಾಪರರಾಗಿದ್ದರು. ಸಖೂಬಾಯಿಯು ಕಂಡ ದೇವರಿಗೆಲ್ಲ ಕೈಮುಗಿದು ತನಗೊಂದು ಪುತ್ರಸಂತಾನವನ್ನು ಕರುಣಿಸೆಂದು ಬೇಡಿಕೊಳ್ಳುತ್ತಿದ್ದಳು. ಮಂತ್ರಾಲಯವೇ ಮುಂತಾದ ಗುರುಸನ್ನಿಧಾನಗಳಿಗೆ ಯಾತ್ರೆ ಹೋದಾಗ್ಗೆ, ಶ್ರೀ ಹರಿಗುರುಗಳ ಭಕ್ತನಾಗುವಂತಹ ಸತ್ಪುತ್ರನನ್ನು ಕರುಣಿಸಿರೆಂದು, ಶ್ರೀ ಗುರುಗಳನ್ನು ಪ್ರಾರ್ಥಿಸಿಕೊಳ್ಳುವಳು. ಹೀಗೆ ಕೆಲವು ದಿನಗಳು ಕಳೆದ ಮೇಲೆ, ಆಕೆಯ ಪುಣ್ಯತರುವು ಫಲಿಸಿತೋ ಎಂಬಂತೆ ಗರ್ಭಧಾರಣಮಾಡಿದಳು. ಗರ್ಭವು ದಿನ ದಿನಕ್ಕೆ ಅಭಿವೃದ್ಧಿಯಾಗಿ, ನವಮಾಸಗಳು ತುಂಬಲು ಮುಂದೊಂದು ಶುಭದಿನದ ಶುಭ ನಕ್ಷತ್ರದಲ್ಲಿ ಒಬ್ಬ ಸುಂದರನಾದ

ಕಂದನನ್ನು ಹೆತ್ತಳು. ರಘುನಾಥರಾಯನು, ತನ್ನಾ ಮುದ್ದು ಕಂದನನ್ನು ಕಂಡು ಪರಮಾನಂದಗೊಂಡು, ಜಾತಕರ್ಮ ನಾಮಕರಣಾದಿ ಮಹೋತ್ಸವಗಳನ್ನು ನಡೆಯಿಸಿ, ಆ ಚಿಕ್ಕ ಮಗುವಿಗೆ ತನ್ನ ಹಿರಿಯರ ನಾಮಾಂಕಿತವನ್ನನುಸರಿಸಿ ಧೋಂಡೂರಾವ್ ಎಂದು ಹೆಸರಿಟ್ಟು ಕರೆದನು. ಮಗು ಧೋಂಡೂರಘುನಾಥರಾಯನು ತನ್ನ ಬಾಲಲೀಲೆಗಳಿಂದ ತಾಯಿತಂದೆಗಳಿಗೂ ಆಪ್ತೇಷ್ಟರಿಗೂ, ನೆರೆಹೊರೆಯವರಿಗೂ ನೇತ್ರಾನಂದದಾಯಕನಾಗಿ, ಶುಕ್ಲ ಪಕ್ಷದ ಚಂದ್ರಕಾಂತಿಯಂತೆ ದಿನದಿನಕ್ಕೆ ಅಭಿವೃದ್ಧಿಯಾಗುತ್ತಿದ್ದನು.



## ಅಧ್ಯಾಯ ೩　　'ಅಪೂರ್ವರಾಹುತ'

'ಕತ್ತಲೆಯಮನೆಗೆ ಮಣಿದೀಪವಾದಂತೆ ಸಲೆ
ಬತ್ತಿದ ಸರೋವರಕೆ ನವಜಲವೊದವಿದಂತೆ
ಬಿತ್ತರದ ಕಾವ್ಯರಚನೆಗೆ ದೇವತಾಸ್ತುತಿನೆಗಳ್ದಂತೆ ...........'

ಸಂತಾನಸೌಭಾಗ್ಯವನ್ನು ಕಾಣಲಿಲ್ಲವಲ್ಲಾ ಎಂದು ಮರುಗಿ ಕೊರಗುತ್ತಿದ್ದ, ರಘುನಾಥರಾಯ ಮತ್ತು ಸಖೂಬಾಯಿ ಎಂಬೀ ದಂಪತಿಗಳಿಗೆ ಪೂರ್ವಾಧ್ಯಾಯದ ಅಂತ್ಯಭಾಗದಲ್ಲಿ ಹೇಳಿದಂತೆ ಸುಕುಮಾರನು ಜನಿಸಿ ಅವರ ದಾಂಪತ್ಯಜೀವನವನ್ನು ಸಾರ್ಥಕವೆನ್ನಿಸಿದನು. ತಾಯಿತಂದೆಗಳು ಅಂಬೆಗಾಲು ತೊದಲ್ನುಡಿಗಳಿಂದ - ನಡೆದಾಡುತ್ತ ನಲಿದಾಡುತ್ತಲಿದ್ದ ತಮ್ಮಾಕಂದನನ್ನು ಕಂಡು ಎರಡು ಬಾಹುಗಳಿಂದಲೂ ಬಾಚಿ ತಬ್ಬಿಕೊಂಡು, ಸ್ವರ್ಗಸುಖವನ್ನು ಅನುಭವಿಸುವರು. ಯುಕ್ತವಯಸ್ಸು ಪ್ರಾಪ್ತವಾದಂತೆಲ್ಲ, ಧೋಂಡೂರಘುನಾಥರಾಯನಿಗೆ, ಚೂಡಾಕರ್ಮ ಅಕ್ಷರಾಭ್ಯಾಸ ಕರ್ಮಗಳನ್ನು ನೆರವೇರಿಸಿ, ತಂದೆಯು ವಯಸ್ಸಿಗೆ ತಕ್ಕಂತೆ ವಿದ್ಯಾಬುದ್ಧಿಗಳನ್ನು ಕಲಿಸಲು ಪ್ರಯತ್ನಿಸಿದನು. ಬಾಲ್ಯವಿದ್ಯಾಭ್ಯಾಸವು ಅಲ್ಪಸ್ವಲ್ಪವಾಗಿ ನಡೆಯಿತು. ಬಾಲಕನಿಗೆ ಎಂಟನೆಯ ಸಂವತ್ಸರವು ಪ್ರಾಪ್ತವಾಗುತ್ತಿರಲು, ರಘುನಾಥರಾಯನು ಅತ್ಯಂತ ಆಸ್ಥೆಯಿಂದ ಉಪನಯನ ಮಹೋ

ತ್ಸವವನ್ನು ನೆರವೇರಿಸಿ, ಸಹಸ್ರಾರುಮಂದಿ ಬ್ರಾಹ್ಮಣ ಸುಮಂಗಲೆಯರನ್ನು ಗಂಧಪುಷ್ಪ ತಾಂಬೂಲಗಳು, ದಕ್ಷಿಣೆದಾನಗಳು, ಮೃಷ್ಟಾನ್ನ ಭೋಜನ ಮುಂತಾದುವುಗಳಿಂದ ದಣಿಸಿದನು. ತರುವಾಯ ಬಾಲಕನಿಗೆ ಕಲಿಸಬೇಕೆಂದು ಪ್ರಯತ್ನಿಸಿದ ಅಕ್ಷರವಿದ್ಯೆಯಾಗಲೀ, ಅಥವ ಧಾರ್ಮಿಕವಿದ್ಯಾಭ್ಯಾಸವಾಗಲೀ ಅಷ್ಟುಮಟ್ಟಿನ ಸಾರ್ಥಕತೆಯನ್ನು ಹೊಂದಲಿಲ್ಲ. ಸರದಾರನ ಮಗನಾದ ಘೋಂಡೂರಘುನಾಥರಾಯನು, ಯಾವಾಗಲೂ ಕುದುರೆಯನ್ನೇರಿ ಓಡಿಸುವುದು, ಹಾರಿಸುವುದು, ಗರಡೀಮನೆಯಲ್ಲಿ ಅಂಗಸಾಧನೆ, ಮಲ್ಲಯುದ್ಧಮಾಡೋಣ, ಈಜುವಿಕೆ, ದೊಣ್ಣೆ ಕತ್ತಿ ಮುಂತಾದುವುಗಳನ್ನು ತಿರುಗಿಸುವಿಕೆ ಮುಂತಾದ ವೀರೋಚಿತ ವಿದ್ಯೆಗಳನ್ನೇ ಅಭ್ಯಸಿಸುತ್ತಬಂದು, ಆ ವಿಚಾರಗಳಲ್ಲಿ ಪ್ರವೀಣನೆನ್ನಿಸಿಕೊಂಡನು. ಬ್ರಾಹ್ಮಣವರ್ಣೋಚಿತವಾದ ಸೌಮ್ಯವಿದ್ಯಾಭ್ಯಾಸಕ್ಕಿಂತಲೂ, ಘೋಂಡೂರಾಯನಿಗೆ ಈ ವೀರವಿದ್ಯೆಗಳೇ ರುಚಿಕರವಾಗಿ ತೋರುತಿದ್ದುದರಿಂದ ಆತನು ತನ್ನ ಮಗನು, ಆ ವಿದ್ಯೆಗಳಲ್ಲಿ ತೇಜಸ್ವಿಯಾಗಿದ್ದುದನ್ನು ಕಂಡು ಪರಮಾನಂದಗೊಂಡು, ತನ್ನ ಸಮಾನ ಭಾಗ್ಯಶಾಲಿಯೇ ಇಲ್ಲವೆಂದು ಹೆಚ್ಚಳಪಟ್ಟುಕೊಳ್ಳುತ್ತಿದ್ದನು.

ಹೀಗಿರುವಲ್ಲಿ ಘೋಂಡೂರಘುನಾಥರಾಯನಿಗೆ ಬಾಲ್ಯಕಳೆದು ಯೌವನಪ್ರಾಪ್ತಿಯಾಯಿತು. ಮುಖದಲ್ಲಿ ದಿವ್ಯಕಳೆಯು ಉಕ್ಕುತ್ತಿತ್ತು. ದೇಹದ ಪ್ರತ್ಯಂಗವೂ ಪುಷ್ಟವಾಗಿ ನೇತ್ರಾನಂದಕರವಾಗಿ ಪ್ರಕಾಶಿಸುತ್ತಿತ್ತು. ಮುಖದಲ್ಲಿ ಕುಡಿಮೀಸೆಯಿಂದಲೂ, ಉಬ್ಬಿದ ಎದೆಯಿಂದಲೂ, ಗಂಭೀರವಾದ ನಡಿಗೆ-ದೃಷ್ಟಿಗಳಿಂದಲೂ, ಆ ಯುವಕನು ನೋಡಿದವರ ಮನಸ್ಸಿಗೆ ಬಾಯಿಂದ ಹೇಳಲಾಗದ ಒಂದು ಬಗೆಯ ಆನಂದವನ್ನು ಉಂಟುಮಾಡತಕ್ಕವನಾದನು. ತನ್ನ ಮಗನು ಯುಕ್ತ ವಯಸ್ಸಂಪನ್ನನಾದುದನ್ನು ತಿಳಿದು, ರಘುನಾಥರಾಯನು ಐಶ್ವರ್ಯಪದವಿಗಳಲ್ಲಿ ತಮಗೆ ಸಮಾನ ಯೋಗ್ಯತೆಯಲ್ಲಿದ್ದ ಒಂದಾನೊಂದು ಕುಟುಂಬದಿಂದ, ಗುಣರೂಪಶೀಲ ಸ್ವಭಾವಾದಿಗಳಲ್ಲಿ ಅನುರೂಪಗಳಾಗಿದ್ದ ಕನ್ಯೆಯನ್ನು ತಂದು ಅತ್ಯಂತ ವಿಜೃಂಭಣೆಯಿಂದ ವಿವಾಹಮಹೋತ್ಸವವನ್ನೂ ನೆರವೇರಿಸಿದನು. ಆ ವೃದ್ಧ ದಂಪತಿಗಳಿಗೆ ತಮ್ಮ ಮಗನ ಉದರದಲ್ಲಿ ಉದಯವಾಗುವ ಮೊಮ್ಮಕ್ಕಳನ್ನು ಎತ್ತಿ ಆಡಿಸಿ ನಲಿಯಬೇಕೆಂಬ ಅಪೇಕ್ಷೆಯೇ ಆ ಕಾಲದಲ್ಲಿ ವಿಶೇಷವಾಗಿದ್ದು ಅವರ ಲೌಕಿಕ

ಜೀವನವು ಸುಖಮಯವೆನ್ನಿಸಿದ್ದಿತು. ಮಗ ಸೊಸೆಯರ ಅನುರೂಪದಾಂಪತ್ಯವು ಉಭಯರ ಕಣ್ಣುಗಳಿಗೂ ಆನಂದಕರವಾಗಿದ್ದು, ತಮ್ಮ ಜನ್ಮವು ಸಾರ್ಥಕವಾಯಿತು, ತಮ್ಮ ವಂಶವು ಉದ್ಧೃತವಾಯಿತು, ಎಂದು ಧನ್ಯತೆಯನ್ನು ಹೊಂದಿದರು. ಸೊಸೆಯು ಪುಷ್ಪವತಿಯಾಗಿ ಮನೆಗೆ ಬರಲು ಇನ್ನೂ ಮೂರು ನಾಲ್ಕು ಸಂವತ್ಸರಗಳ ಅವಧಿಯಿದ್ದುದರಿಂದ, ಮಗನನ್ನು ಸರ್ವವಿಧದಿಂದಲೂ-ಕಣ್ಣನ್ನು ರೆಪ್ಪೆಯಂತೆ ಪೋಷಿಸುತ್ತ, ರಘುನಾಥರಾಯನು ಕಾಲಯಾಪನೆಮಾಡುತ್ತಿದ್ದನು. ಸುಖಸಾಗರದಲ್ಲಿ ಓಲಾಡುತ್ತಲಿದ್ದ ರಘುನಾಥರಾಯನು, ಸಂಸಾರದಲ್ಲಿ ಸುಖದ ಪರಮಾವಧಿಯನ್ನು ಕಂಡುದು ಆ ಸಂದರ್ಭವಲ್ಲೀ! 'ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ' ಎಂಬುದೇ ಸಂಸಾರದ ಮುಖ್ಯಸ್ವಭಾವವಲ್ಲವೆ? ಪರಮಾವಧಿ ಸುಖಾನುಭವವಾಯಿತೆಂದು ತೋರಿದೊಡನೆಯೇ, ದುಃಖಾನುಭವಕ್ಕೆ ಪ್ರಾರಂಭವಾಗುವುದೂ, ಪರಮಾವಧಿ ದುಃಖಾನುಭವವಾದೊಡನೆಯೇ ಸುಖಪ್ರಾಪ್ತಿಯ ಲಕ್ಷಣಗಳು ತೋರಿಬರುವುದೂ ಸಂಸಾರದ ಲಕ್ಷಣವಾಗಿದ್ದು ಅನೇಕ ಸಂದರ್ಭಗಳಲ್ಲಿ ಇದರ ಅನುಭವವು ಕಂಡು ಬಂದಿರುವುದು. ರಘುನಾಥರಾಯನು, ಅಮಿತ ಐಶ್ವರ್ಯ, ಅಧಿಕಾರ, ನಿರೋಗಿಯಾದ ದೇಹದಾರ್ಢ್ಯ, ಪತ್ನೀಪುತ್ರ ಪರಿವಾರ ಪಶುಕ್ಷೇತ್ರಾದಿ ಸಂಪತ್ತು, ಸರೀಕರಲ್ಲೂ-ಸಹಜಾತೀಯರಲ್ಲೂ ಗೌರವಸ್ಥಾನ, ಗ್ರಾಮದಲ್ಲಿ ಮೂರ್ಧನ್ಯತ್ವ, ಸತ್ಸಂತಾನ ಸೌಭಾಗ್ಯ ಮುಂತಾಗಿ ಎಲ್ಲಾ ವಿಷಯಗಳಲ್ಲೂ ತನ್ನ ಸಮಾನ ಧನ್ಯನು ಮತ್ತಾರೂ ಇಲ್ಲವೆಂದು ಭಾವಿಸಿಕೊಂಡಿದ್ದ ಈ ಸಂದರ್ಭವೇ ಆತನ ಜನ್ಮದಲ್ಲಿ ಪರಮಾವಧಿ ಸುಖಾನುಭವದ ಕಾಲವೆನ್ನಿಸಿರಲು, ಸಂತೋಷಾಂತರಂಗನಾಗಿ ಕೆಲದಿನಗಳನ್ನು ಕಳೆದನು. ಪ್ರಾತಃಕಾಲದಿಂದ ಕ್ರಮಕ್ರಮವಾಗಿ ಮೇಲ ಮೇಲಕ್ಕೆ ಏರುತ್ತಾ ಬಂದ ಸೂರ್ಯನು, ಮಧ್ಯಾಹ್ನದಲ್ಲಿ ಅಂತರಿಕ್ಷದ ಪರಮಾವಧಿ ಉನ್ನತ ಸ್ಥಳವನ್ನು ಅಧಿರೋಹಿಸಿ-ಒಡನೆ ಇಳಿಯತೊಡಗುವನಲ್ಲವೆ! ಮನುಷ್ಯನ-ಪ್ರತಿಯೊಂದು ಪ್ರಾಣಿಯ ಜೀವಮಾನವೂ ಈ ಪ್ರಕೃತಿ ಧರ್ಮಕ್ಕೆ ಬದ್ಧವಾಗಿಯೇ ನಡೆಯುವುದು. ಆದರೆ ಅಜ್ಞಾನಿಯಾದ ಮಾನವಪ್ರಾಣಿಗೆ ಉತ್ತರ ಕ್ಷಣದಲ್ಲಿ ಏನಾಗುವುದೆಂದು ತಿಳಿವ ಬಗೆ ಹೇಗೆ?

ಯೌವನಸ್ಥನೂ, ಬಲಿಷ್ಟನೂ, ಅಶ್ವಾರೋಹಿಗಳಲ್ಲಿ ಅಗ್ರಗಣ್ಯನೂ,

ತೇಜಸ್ವಿಯೂ ಆಗಿದ್ದ ಧೋಂಡೂರಘುನಾಥರಾಯನು ಸಕಲ ವಿಷಯಗಳ ಲ್ಲೂ ತನ್ನ ಸ್ಥಾನವನ್ನು ತೆಗೆದುಕೊಳ್ಳಲು ಅರ್ಹನಾಗಿರುವನೆಂದು ತಿಳಿದು, ರಘುನಾಥರಾಯನು ತನ್ನ ಸೈನ್ಯವನ್ನೂ ಮನೆತನದ ಆಡಳಿತವನ್ನೂ ಆತನ ಸ್ವಾಧೀನಕ್ಕೆ ಕೊಟ್ಟು ಇನ್ನು ವಿಶ್ರಾಂತನಾಗಬೇಕೆಂದು ಅಪೇಕ್ಷಿಸಿದ್ದನು. ಗೃಹಕೃತ್ಯದ ಸಂಪೂರ್ಣ ಸ್ವಾಮ್ಯವನ್ನೂ ವಹಿಸುವುದಕ್ಕೆ ಮೊದಲು, ಒಂದು ಸಾರಿ ದೇಶದಲ್ಲಿ ಜೈತ್ರಯಾತ್ರೆಗಾಗಿ ಹೋಗಿಬರಲೆಂದು ಕಳುಹಿಸಿದನು. ಧೋಂಡೂ ರಘುನಾಥರಾಯನು, ಉಚಿತಪರಿವಾರದೊಂದಿಗೂ ಅಶ್ವಾರೋಹಿ ಗಳೊಂದಿಗೂ ಪ್ರಯಾಣಮಾಡಿ ಕರ್ಣಾಟಕದ ಮುಖ್ಯ ಮುಖ್ಯ ಪ್ರದೇಶಗಳ ನ್ನು ಸಂದರ್ಶಿಸಿ, ಪ್ರಭುಗಳಿಂದಲೂ ಪ್ರಜಾಪ್ರಮುಖರಿಂದಲೂ ಸನ್ಮಾನ ಹೊಂದಿ ಹಿಂದಿರುಗಿ ಸ್ವಗ್ರಾಮಾಭಿಮುಖವಾಗಿ ಪ್ರಯಾಣಮಾಡುತ್ತಿದ್ದನು. ಅಷ್ಟರಲ್ಲಿ ಆತನ ಧರ್ಮಪತ್ನಿಯು ಪುಷ್ಪವತಿಯಾದಳೆಂಬ ಶುಭಸಮಾಚಾರ ವನ್ನು ತಂದೆಯಾದ ರಘುನಾಥರಾಯನು ಸೇವಕರೊಂದಿಗೆ ಕಳುಹಿಸಿದನು. ತುಂಬು ಯೌವನದಲ್ಲಿದ್ದ ಧೋಂಡೂರಾಯನು, ಆ ಸಂತೋಷಕರ ವಾರ್ತೆ ಯನ್ನು ಕೇಳಿ ಪರಮೋತ್ಸಾಹಯುಕ್ತನಾಗಿ, ಆ ಸಂಗತಿಯನ್ನು ತಂದು ಹೇ ಳಿದ ಸೇವಕನಿಗೆ, ಮುಕ್ತಹಸ್ತನಾಗಿ ಬಹುಮಾನಕೊಟ್ಟು, ಸಾಧ್ಯವಾದಷ್ಟು ಶೀಘ್ರವಾಗಿ ತನ್ನ ಊರನ್ನು ಸೇರಬೇಕೆಂದು ಆತುರದಿಂದ ಹೊರಟು ಪ್ರಯಾಣಮಾಡುತ್ತಿದ್ದನು.

ಹಿಂದೆ ಹೇಳಿದಂತೆ ಮಧ್ವಮತಪ್ರಚಾರಕಾರ್ಯವನ್ನೇ ಜನ್ಮದ ಸರ್ವೋತ್ಕೃಷ್ಟ ಧ್ಯೇಯವನ್ನಾಗಿ ಕೈಕೊಂಡಿದ್ದ ಶ್ರೀ ಅಕ್ಷೋಭ್ಯತೀರ್ಥ ಮುನಿಶ್ರೇಷ್ಠರು, ತಮ್ಮ ಆ ಸತ್ಕಾರ್ಯಸಾಧನೆಯ ಮಹೋದ್ದೇಶದಿಂದ ಪ್ರಯಾಣ ಮಾಡುತ್ತ ಮಾಡುತ್ತ, ಭೀಮರಥೀ ನದೀ ತೀರದಲ್ಲಿದ್ದ ಘಂಡ ರಾಪುರ ಕ್ಷೇತ್ರದ ಸಮೀಪದಲ್ಲಿ ಬಂದಿಳಿದು, ಶ್ರೀ ಸೀತಾರಾಮರ ಆರಾಧನಾ ತತ್ಪರರಾಗಿ ಕೆಲವು ದಿನಗಳಿಂದ ತಂಗಿದ್ದರು. ದಿನದಿನಕ್ಕೆ ಅಶಕ್ತವಾಗು ತ್ತಿದ್ದ ತಮ್ಮ ದೇಹಸ್ಥಿತಿಯ ವಿಚಾರದಲ್ಲೂ, ಅವರೆಗೆ ತಮ್ಮ ಪೀಠಕ್ಕೆ ಬಂದು ಮುಂದೆ ಮಠವನ್ನು ನಡೆಯಿಸಿಕೊಂಡು ಹೋಗುವ ಶಕ್ತರು ಯಾ ದರೂ ದೊರೆಯಲಿಲ್ಲವಲ್ಲಾ ಎಂಬ ವಿಚಾರದಲ್ಲೂ ಅವರಿಗೆ ವಿಶೇಷ ಯೋಚ ನೆಯುಂಟಾಗಿ, ಏನು ಮಾಡಲೂ ತೋರದೆ ಶ್ರೀರಾಮನೇಗತಿ ಎಂದುಕೊಂಡು

ದಿನಕ್ಷಣಗಳನ್ನು ಎಣಿಸುತ್ತಿದ್ದರು – 'ದೇವಾ, ನನ್ನ ಮೊರೆಯು ಅರಿಕೆಯಾಗಲಿಲ್ಲವೆ? ದಿನದಿನಕ್ಕೆ ಹೆಚ್ಚುತ್ತಿರುವ ಮಾಯಾವಾದಿಗಳ ಪ್ರಾಬಲ್ಯವನ್ನು ತಗ್ಗಿಸಿ, ಶ್ರೀ ಸರ್ವಜ್ಞರಾಯರ ಸನ್ಮತವನ್ನು ವಿಶೇಷರೀತಿಯಿಂದ ಪ್ರಚುರಗೊಳಿಸುವಂತಹ ಭಕ್ತಾಗ್ರೇಸರನಾರೋ, ಯಾರು-ವೃದ್ಧಾಪ್ಯದಿಂದ ಅಶಕ್ತನಾಗಿರುವ ನನ್ನ ಈ ಸ್ಥಾನದಲ್ಲಿ ಕುಳಿತು, ಈ ಪೀಠದ ಗೌರವವನ್ನು ದಶಮಡಿ ಶತಮಡಿ ಹೆಚ್ಚಿಸಿ, ಲೋಕದಲ್ಲಿ ಆಸ್ತಿಕ ಮತದ ಜಯಭೇರಿಯನ್ನು ಹೊಡೆಯಲು ಶಕ್ತರೋ ಆ ಮಹಾನುಭಾವರನ್ನು ಏಕೆ ನನ್ನ ದೃಷ್ಟಿಗೆ ಬೀಳಗೊಡಲೊಲ್ಲೆ? ಪ್ರಭೋ, ಶ್ರೀರಾಮಾ ವಿವಿಧ ರುಚಿ ಭೇದವನ್ನುಂಟಾಗಿ ಯೋಗ್ಯರಾರು ಅಯೋಗ್ಯರಾರು, ಆಸ್ತಿಕನಾರು ನಾಸ್ತಿಕನಾರು ಎಂದು ತಿಳಿಯಲಸದಳವಾಗಿರುವ ಈ ಲೋಕದಲ್ಲಿ ನನ್ನ ಮನಸ್ಸಿನಲ್ಲಿರುವ ಈ ಘನಕಾರ್ಯವನ್ನು ನೆರವೇರಿಸುವ ಶಕ್ತಿಸಂಪನ್ನನಾರೆಂಬುದನ್ನು ನಾನು ಹೇಗೆ ಕಂಡುಹಿಡಿಯಲಿ? ಪ್ರಭೋ ಈ ವಿಷಯದಲ್ಲಿ ನನಗೆ ಮಾರ್ಗದರ್ಶಕನಾಗಲಾರೆಯಾ?' ಎಂದು ಮುಂತಾಗಿ ದಿನವೂ ಪ್ರಾರ್ಥಿಸಿಕೊಳ್ಳುತ್ತಿದ್ದರು. ಹೀಗಿರುವಲ್ಲಿ ಒಂದು ದಿನ ರಾತ್ರಿ ಮೇಲ್ಕಂಡಂತೆ ಪ್ರಾರ್ಥಿಸಿಕೊಂಡು ಮಲಗಿ ನಿದ್ರಾಸಕ್ತರಾಗಿರುವಾಗ ಒಂದು ಸ್ವಪ್ನವಾಯಿತು. ಅದರಲ್ಲಿ ಶ್ರೀ ಅಕ್ಷೋಭ್ಯತೀರ್ಥರ ಗುರುಗಳಾದ ಶ್ರೀಮದಾಚಾರ್ಯರು ಕಾಣಿಸಿಕೊಂಡು – 'ಯತಿಶೇಖರಾ, ಚಿಂತಿಸುವಿರೇಕೆ? ನಿಮ್ಮ ಇಷ್ಟಾರ್ಥವು ಶೀಘ್ರದಲ್ಲೇ ನೆರವೇರುವುದು. ನಾಳಿನದಿನ ಇದೇ ನಿಮ್ಮಾಶ್ರಮದ ಪಕ್ಕದಲ್ಲಿ ಹರಿಯುತ್ತಿರುವ ನದಿಯಲ್ಲಿ, ಕುದುರೆಯಿಂದ ಇಳಿಯದೆಯೇ – ಬೊಗಸೆಯಿಂದಲಲ್ಲದೆ, ಬಾಯನ್ನೇ ನದಿಗೊಡ್ಡಿ ನೀರುಕುಡಿಯುತ್ತಾ ಬರುವ ಒಬ್ಬ ರಾಹುತನನ್ನು ನೋಡುವಿರಿ. ಆತನೇ ನಿಮ್ಮ ಪೀಠದಲ್ಲಿ ಕುಳಿತು, ನಿಮ್ಮ ಅಪೇಕ್ಷಾನುಸಾರ ದ್ವೈತಸಿದ್ಧಾಂತಪ್ರಚಾರಕ್ಕಾಗಿ ಅಗಾಧ ಪರಿಶ್ರಮಮಾಡಲುಳ್ಳ ಅಪೂರ್ವ ವ್ಯಕ್ತಿಯು ಆತನನ್ನು ಕರೆಯಿಸಿಕೊಂಡು, ಯತ್ಯಾಶ್ರಮವನ್ನಿತ್ತು ಕೃತಾರ್ಥರಾಗಿರಿ. ಶ್ರೇಯೋಸ್ತು,' ಎಂದು ನುಡಿದು ಅದೃಶ್ಯರಾದಂತಾಯಿತು. ಅಪೂರ್ವ ರೀತಿಯ ಈ ಸ್ವಪ್ನವನ್ನು ಕಂಡೊಡನೆಯೇ ಎಚ್ಚತ್ತ ಶ್ರೀಗಳವರು, ಮನಸ್ಸು ಅತಿಶಯ ಪ್ರಸನ್ನತೆಯನ್ನು ಹೊಂದಿರಲು – ಸರ್ವಶಕ್ತನಾದ ಶ್ರೀರಾಮಮೂರ್ತಿಯನ್ನು ಹಲವು ಪರಿಯಿಂದ

ಹೊಗಳಿ, ಪ್ರಾತಃಕಾಲದವರೆಗೂ ಪುನಃ ನಿದ್ರಿಸದೆ, ಧ್ಯಾನಾಸಕ್ತರಾಗಿ ಕುಳಿತೇ ಇದ್ದರು. ಪ್ರಾತಃಕಾಲದಲ್ಲಿ ಎಂದಿನಂತೆ ಶೌಚಾದಿ ನಿತ್ಯ ವಿಧಿಗಳನ್ನು ತೀರಿಸಿಕೊಂಡು, ಸ್ನಾನಮಾಡಿ ಶಿಷ್ಯರಿಗೆ ಪಾಠಪ್ರವಚನಗಳನ್ನು ನಡೆಯಿಸುತ್ತ ಬೆಳಗಿನ ಮೂರುನಾಲ್ಕು ಗಂಟೆಗಳನ್ನು ಕಳೆದರು ಆ ವೇಳೆಗೆ ಮಾಧ್ಯಾಹ್ನದ ಸ್ನಾನಾಹ್ನಿಕ ದೇವತಾರ್ಚನಾದಿಗಳ ವೇಳೆಯೊದಗಲು, ಸ್ನಾನಕ್ಕಾಗಿ ನದಿಗೆ ಪ್ರಯಾಣಮಾಡಿಕೊಂಡಿದ್ದರು. ಆ ವೇಳೆಗೆ ಹಿಂದೆ ಹೇಳಿದಂತೆ, ಸ್ವಗ್ರಾಮಾಭಿಮುಖವಾಗಿ ಧಾವಿಸಿಕೊಂಡು ಹೊರಟಿದ್ದ ನಮ್ಮ ಧೋಂಡೂರಘುನಾಥರಾಯನು ತನ್ನ ಹೆಚ್ಚಿನ ಪರಿವಾರವು ಹಿಂದೆ ಬರುತ್ತಿರಲು, ತಾನೊಬ್ಬನೇ ಕುದುರೆಯನ್ನೋಡಿಸುತ್ತಾ ನದಿಯ ಬಳಿಗೆ ಬಂದನು. ಪ್ರಾತಃಕಾಲದಿಂದ ಎಲ್ಲೂ ನಿಲ್ಲದೆ ಏರುಬಿಸಿಲಿನಲ್ಲಿ ಸವಾರಿಮಾಡಿಕೊಂಡು ಬಂದ ಆತನಿಗೆ ನಿರ್ಮಲೋದಕದ ಆ ನದಿಯನ್ನು ಕಂಡೊಡನೆಯೇ, ವಿಶೇಷ ಬಾಯಾರಿಕೆ ತೋರಿದಂತಾಗಿ ಕೆಳಕ್ಕೆ ಇಳಿವವರೆಗೂ ಸಾವಕಾಶವಿಲ್ಲದೆ, ಕುದುರೆಯನ್ನೇ ನೀರಿನೊಳಕ್ಕೆ ತರುಮಿದನು. ಯಜಮಾನನ ಇಂಗಿತವನ್ನರಿತ ಆ ಜಾತ್ಯಶ್ವವು ಒಡನೆ ನೀರಿನಲ್ಲಿಳಿದು ಹೊರಟಿತು. ಬರುತ್ತ ಬರುತ್ತ ನೀರಿನ ಆಳವು ಹೆಚ್ಚುತ್ತಿರಲು, ಅಶ್ವದ ದೇಹದ ಬಹುಭಾಗವು ನೀರಿನಲ್ಲಿ ಮುಳುಗಿತು. ಆ ಸಂದರ್ಭವನ್ನು ಅರಿತು, ಮೇಲೆ ಕುಳಿತ್ತಿದ್ದ ಧೋಂಡೂರಘುನಾಥರಾಯನು ಒಡನೆ ಮುಂದಕ್ಕೆ ಬಗ್ಗಿ, ಕುದುರೆಯ ಒಂದು ಪಾರ್ಶ್ವದ ನದೀಜಲಕ್ಕೆ ಮುಖವನ್ನೊಡ್ಡಿ ಜಲಪಾನಮಾಡತೊಡಗಿದನು. ಎದುರು ದಡದ ಕಡೆಯಿಂದ ನದಿಯ ಸೋಪಾನಗಳ ಕಡೆಗೆ ಸಾವಧಾನದಿಂದ ನಡೆದುಬರುತ್ತಿದ್ದ ಶ್ರೀ ಅಕ್ಷೋಭ್ಯತೀರ್ಥ ಯತಿವರ್ಯರು ಈ ಅಶ್ವಾರೋಹಿಯ ವಿಚಿತ್ರ ಚರ್ಯೆಯನ್ನು ಕಂಡು ವಿಸ್ಮಿತರಾದರು. ಭವ್ಯಾಕಾರದ ಅರಬ್ಬೀದೇಶದ ಕುದುರೆಯಮೇಲೆ ಕುಳಿತ, ಆ ತೇಜಸ್ವೀ ರಾಹುತನೇ ತಮ್ಮ ಸ್ವಪ್ನದಲ್ಲಿ ನಿರ್ದೇಶಿಸಲ್ಪಟ್ಟ ವ್ಯಕ್ತಿ ಶ್ರೀಪ್ಪನಿರಬಹುದೇ ಎಂದು ಮನಸ್ಸಿಗೆ ಬೋಧೆಯಾಯಿತು. ಸ್ವಪ್ನವೃತ್ತಾಂತವೆಲ್ಲವೂ ಸ್ಪಷ್ಟವಾಗಿ ಜ್ಞಾಪಕಕ್ಕೆ ಬರಲು, ಆತನನ್ನು ಕರೆಸಿ ಆತನಿಗೆ ತಮ್ಮ ನಿಶ್ಚಯವನ್ನು ತಿಳಿಸಬೇಕೆನ್ನಿಸಿತು. ಒಡನೆ, ಮೇಲ್ಕಂಡಂತೆ ನೀರುಕುಡಿದು ಬಾಯಾರಿಕೆಯನ್ನು ನೀಗಿಸಿಕೊಂಡು ಹಿಂದಿರುಗಿ ದಡಕ್ಕೆ ನಡೆದು ತನ್ನ ಪರಿ

ವಾರದವರಿಗಾಗಿ ಕಾದು ನಿಂತಿದ್ದ ಆ ಸರದಾರನ ಬಳಿಗೆ ತಮ್ಮ ಶಿಷ್ಯರಲ್ಲೊಬ್ಬನನ್ನು ಕಳುಹಿಸಿ, ಆ ದಿನ ಮಧ್ಯಾಹ್ನದ ದೇವಪೂಜಾಸಂದರ್ಶನಕ್ಕೂ, ತೀರ್ಥಪ್ರಸಾದಾದಿಗಳಿಗೂ ಮಠಕ್ಕೇ ಬರಬೇಕೆಂದು ಹೇಳಿಕಳುಹಿಸಿದರು.

ಶಿಷ್ಯನು ಗುರುಗಳ ಆಜ್ಞೆಯಂತೆ ಧೋಂಡೂರಾಯನ ಬಳಿಗೆ ಹೋಗಿ, ಶ್ರೀ ಅಕ್ಷೋಭ್ಯತೀರ್ಥಸ್ವಾಮಿಗಳವರ ಆಜ್ಞೆಯನ್ನು ಆತನಿಗೆ ತಿಳಿಸಿ ಆಹ್ವಾನಿಸಿದನು. ತಾನು ಕುದುರೆಯಮೇಲಿದ್ದಂತೆಯೇ ಪಶುವಿನಂತೆ ಮುಖವನ್ನೇ ನದೀಜಲಕ್ಕೆ ಒಡ್ಡಿ ನೀರುಕುಡಿದುದನ್ನು ಎದುರು ದಡದಲ್ಲಿ ಬರುತ್ತಿದ್ದ ಸನ್ಯಾಸಿಗಳು ಕಂಡರೋ ಎಂಬ ಶಂಕೆಯು ಆತನ ಮನಸ್ಸಿನಲ್ಲಿ ಉತ್ಪನ್ನವಾಗಿ ಆಗಲೇ ಕೆಲಸಮಾಡತೊಡಗಿದ್ದಿತು. ಆದರೆ ಚಿಕ್ಕಂದಿನಿಂದಲೂ, ಸುಳಿವು ಸೂಕ್ಷ್ಮತೆಗಳ - ನಯನಾಗರಿಕತೆಗಳ ಗೋಜನ್ನರಿಯದೆ, ತಂದೆತಾಯಿಗಳ ಮುದ್ದು ಮಮತೆಗಳಲ್ಲೇ ಬೆಳೆದಿದ್ದ ಧೋಂಡೂರಾಯನು, ಅದನ್ನು ಕುರಿತು ಹೆಚ್ಚಾಗಿ ಚಿಂತಿಸದೆ, ಹಾಗೇ ಆಗಲೆಂದು ಒಪ್ಪಿಕೊಂಡನು. ಆ ವೇಳೆಗೆ ಪರಿವಾರದವರೂ ಬಂದು ಸೇರಲು ಸ್ವಲ್ಪಹೊತ್ತು ವಿಶ್ರಾಂತಿಹೊಂದಿ, ತರುವಾಯ ಸ್ನಾನಾದಿಗಳನ್ನು ತೀರಿಸಿಕೊಂಡು ದೇವರ ಪೂಜೆಯವೇಳೆಗೆ ಸರಿಯಾಗಿ, ದಿವ್ಯವಸ್ತ್ರ ವಿಭೂಷಿತನಾಗಿ ಮಠಕ್ಕೆ ಬಂದನು.

ಶ್ರೀಗಳವರು ಶ್ರೀ ಮೂಲರಾಮರ ಅರ್ಚನೆ ಧ್ಯಾನಾದಿಗಳಲ್ಲಿ ಮಗ್ನರಾಗಿದ್ದು, ನೈವೇದ್ಯ ಮಂಗಳಾರತಿಗಳಾದ ತರುವಾಯ, ತೀರ್ಥಕೊಡುವ ವೇಳೆಯಲ್ಲಿ ಆತನನ್ನು ಕಂಡು ಕುಶಲಪ್ರಶ್ನೆಮಾಡಿ, ಕುಲಗೋತ್ರಗಳನ್ನು ಕುರಿತು ವಿಚಾರಿಸಿದರು. ಧೋಂಡೂರಘುನಾಥರಾಯನ ಪ್ರತ್ಯುತ್ತರದಿಂದ ಆತನು ಮಾಧ್ವ ಸಂಪ್ರದಾಯದ ವೈಷ್ಣವ ಬ್ರಾಹ್ಮಣನೇ ಎಂಬ ಸಂಗತಿಯು ತಿಳಿಯಿತು. ತಮಗೆ ರಾತ್ರಿಯಲ್ಲಾದ ಸ್ವಪ್ನದಂತೆಯೇ ದೃಷ್ಟಿಗೋಚರನಾದ ಆ ಅಪೂರ್ವರಾಹುತನು, ಆತನ ಬಾಹ್ಯ ರೂಪಿನಿಂದ ಯಾವಮತಸ್ಥನೆಂಬುದು ತಿಳಿಯದೆ ಕಳವಳಗೊಂಡಿದ್ದ ಶ್ರೀಗಳವರು ಈ ವಾರ್ತೆಯನ್ನು ಕೇಳಿ ಸಂತೋಷಚಿತ್ತರಾದರು.



## ಅಧ್ಯಾಯ ೪ 'ಯತ್ಯಾಶ್ರಮಸ್ವೀಕಾರ'

ಧೋಂಡೂರಘುನಾಥರಾಯನ ಆಜಾನಬಾಹು ಭವ್ಯಾಕೃತಿಯನ್ನೂ, ತೇಜಸ್ವೀ ನೇತ್ರಗಳನ್ನೂ, ದೇಹಸಂಪತ್ತಿಯನ್ನೂ ಕಂಡು ಮಠದಲ್ಲಿದ್ದ ಸಕಲರೂ ಪರಮಾನಂದಗೊಂಡರು. ಶ್ರೀಗಳವರ ಪಙ್ಕ್ತಿಯಲ್ಲಿ ರಾಯನಿಗೆ ಮೃಷ್ಟಾನ್ನ ಭೋಜನವಾಯಿತು ಭೋಜನೋತ್ತರದಲ್ಲಿ ಶ್ರೀಗಳವರು ಒಂದು ಏಕಾಂತಸ್ಥಳವನ್ನೈದಿ, ಅಲ್ಲಿಗೆ ಧೋಂಡೂರಾಯನನ್ನು ಕರೆಯಿಸಿ ಕೊಂಡರು. ಪೂಜ್ಯರಾದ ಯತಿವರ್ಯರ ಈ ವಿಶೇಷ ಆಹ್ವಾನವು ಧೋಂಡೂರಾಯನಿಗೆ ಕೌತುಕಜನಕವಾಯಿತು. ಆದರೂ, ಶ್ರೀಗಳವರ ಮಹದಾಜ್ಞೆಯನ್ನು ಮೀರಲಾರದೆ ಭಯಭಕ್ತಿಯುತನಾಗಿ ಅಲ್ಲಿಗೆ ನಡೆದು, ವಿನಯ ವಿಧೇಯತೆಗಳಿಂದ ವಂದಿಸಿ ಯುಕ್ತಸ್ಥಳದಲ್ಲಿ ಕುಳಿತನು. ಶ್ರೀಗಳು,-'ರಾಯರೇ, ಈ ದಿನ ನಿಮ್ಮ ಆಗಮನವಾದುದು ಪರಮಸಂತೋಷಕರವಾದುದು. ನಿನ್ನೆಯ ರಾತ್ರಿ ನಮ್ಮ ಸ್ವಪ್ನದಲ್ಲಿ ನಮ್ಮ ಗುರುಗಳು ಸಂದರ್ಶನವನ್ನಿತ್ತು, ಈ ದಿನದ ನಿಮ್ಮ ಬರುವಿಕೆಯನ್ನು ಸೂಚಿಸಿದ್ದರು. ಇನ್ನು ಮುಂದೆ ಶ್ರೀ ಮಠದ ಮೂಲರಾಮರ ಪಾದಾರ್ಚನೆಯ ಮಹತ್ಕಾರ್ಯವು ನಿಮ್ಮಿಂದ ನಡೆಯತಕ್ಕದ್ದಿದೆ ಅದಕ್ಕಾಗಿ ನೀವು ಯತ್ಯಾಶ್ರಮ ಸ್ವೀಕಾರ ಮಾಡಿ, ಲೋಕಾನುಗ್ರಹಾರ್ಥವಾಗಿ ಈ ಕಾರ್ಯವನ್ನು ಕೈಗೊಳ್ಳಬೇಕು. ಇದು ಅತ್ಯಂತ ಶ್ರೇಯಸ್ಕರವಾಗುವುದು' ಎಂದು ನುಡಿದರು.

ಈ ಮಾತುಗಳು ಕಿವಿಗೆ ಬಿದ್ದೊಡನೆಯೇ ಧೋಂಡೂರಾಯನು ಪರಮಾಶ್ಚರ್ಯದಿಂದ ಶ್ರೀಗಳವರ ಮುಖವನ್ನೇ ನೋಡುತ್ತ ಕೆಲಹೊತ್ತು ಕುಳಿತಿದ್ದು, ತರುವಾಯ-'ಪೂಜ್ಯಪಾದರೇ, ಇದು ಮಹದಾಶ್ಚರ್ಯಕರವಾಗಿದೆ! ದೀನನಾದ ನಾನೆಲ್ಲಿ; ಶ್ರೀರಾಮಚಂದ್ರಮೂರ್ತಿಯ ಪೂಜಾಭಾಗ್ಯವೆಲ್ಲಿ? ಕೇವಲ ಅನಧಿಕಾರಿಯಾದ ನಾನು ಯತ್ಯಾಶ್ರಮವನ್ನು ಸ್ವೀಕರಿಸೋಣವೆಂದರೆ ಅದು ಹಾಸ್ಯಾಸ್ಪದವಲ್ಲವೆ? ಅಲ್ಲದೆ, ವಂಶಕ್ಕೆ ಏಕಮಾತ್ರ ಪುತ್ರನಾದ ನನ್ನನ್ನೇ ನಂಬಿಕೊಂಡಿರುವ ನಮ್ಮ ತಂದೆ ತಾಯಿಗಳು ಇದಕ್ಕೆ ಒಪ್ಪುವರೆ! ಅಷ್ಟುಮಾತ್ರವಲ್ಲ-ನಾನಿನ್ನೂ ಕೇವಲ ಬಾಲಕ, ಅಪ್ರಬುದ್ಧ. ಸಾಂಸಾರಿಕ ಸುಖದುಃಖಗಳ ವಿಚಾರವರಿಯದವನು. ಮನಸ್ಸಾದರೋ

ಇನ್ನೂ ವಿಷಯಭೋಗೇಚ್ಛೆಯಿಂದ ತೃಪ್ತಿಹೊಂದಿಲ್ಲ. ಇಂತಹ ಅಪ್ರಬುದ್ಧ ಸ್ಥಿತಿಯಲ್ಲಿ ಯತ್ಯಾಶ್ರಮ ಸ್ವೀಕಾರಮಾಡುವುದು ಸಾಧುವೆನ್ನಿಸೀತೆ? ಪ್ರಾಜ್ಞರಾದ ತಮ್ಮಲ್ಲಿ ಅಜ್ಞಾನಿಯಾದ ನಾನು ಏನು ವಿಜ್ಞಾಪಿಸತಕ್ಕದ್ದಿದೆ!' ಎಂದು ಸುಮ್ಮನಾದನು. ಧೋಂಡೂರಾಯನ ಆ ಯುಕ್ತಿಯುಕ್ತವಾದ ಮಾತುಗಳು, ಶ್ರೀಗಳವರಿಗೆ ಸಮಂಜಸವೆಂದು ತೋರದಿರಲಿಲ್ಲ. ಆದರೆ ಮಾಡುವುದೇನು? ಅಗಲವರು-'ಅಪ್ಪಾ, ನೀವು ಹೇಳುವುದು ವಾಸ್ತವ. ಆದರೆ ನಮಗೆ ಗುರುಗಳ ಆಜ್ಞೆಯಾಗಿದೆ! ನಿನ್ನೆ ರಾತ್ರಿಯಲ್ಲಿ ನಮ್ಮ ಗುರುಗಳು ಸ್ವಪ್ನದಲ್ಲಿ ದರ್ಶನವಿತ್ತು, ನಾಳೆ ಕುದುರೆಯಮೇಲೆ ಕುಳಿತಂತೆಯೇ, ಪಶುವಿನಂತೆ ಮುಖವನ್ನು ನದೀಜಲಕ್ಕೊಡ್ಡಿ ನೀರುಕುಡಿಯುತ್ತಾ ಬರುವ ಸವಾರನೇ ನಿಮ್ಮ ಪೀಠಕ್ಕೆ ಸನ್ಯಾಸತೆಗೆದುಕೊಂಡು, ಶ್ರೀರಾಮಚಂದ್ರಸ್ವಾಮಿಯ ಪೂಜೆಮಾಡತಕ್ಕವನು, ಎಂದು ಸಂದೇಶವನ್ನಿತ್ತಿರುವರು. ಇದು ಹರಿಚಿತ್ತ. ಜೀವೋತ್ತಮರಾದ 'ಶ್ರೀ ಸರ್ವಜ್ಞರಾಯರ ಮತ್ತು ಶ್ರೀ ಲಕ್ಷ್ಮೀಪತಿಯ ಚಿತ್ತಕ್ಕೆ ಬಂದರೆ ಅಜ್ಞಾನಿಯು ಬ್ರಹ್ಮಜ್ಞಾನಿಯಾಗಲು ವಿಳಂಬವೆನ್ನಿಸೀತೆ? ಇನ್ನು ಸಾಂಸಾರಿಕ ಭೋಗ-ಅನುಭವಗಳ ವಿಚಾರವಲ್ಲವೆ? ಧೋಂಡೂರಾಯರೇ, ನಿಮಗೆ ನಾನು ಈ ವಿಚಾರದಲ್ಲಿ ಹೇಳತಕ್ಕದ್ದೇನಿದೆ! ವಿಷಯಭೋಗಾನುಭವಕ್ಕೆ ಕೊನೆಮೊದಲೆಲ್ಲಿದೆ? ಪಶುಸಹಜವ್ಯಾಪಾರವದು. ಪ್ರಾಜ್ಞರಾದವರು ತಂಬುಲದಂತೆ ತುಚ್ಛವಾಗಿ ಕಾಣುವ ವಿಷಯೇಚ್ಛೆಯನ್ನು ಹರಿಗುರುಗಳ ಅನುಗ್ರಹಕ್ಕೆ ಪಾತ್ರರಾದ ನಿಮ್ಮಂತಹ ಸುಕೃತ ಜೀವಿಗಳು ಕ್ಷಣಮಾತ್ರದಲ್ಲಿ ತುಳಿದು ಜಿತೇಂದ್ರಿಯರೆನ್ನಿಸುವುದೇನು ಅಸಾಧ್ಯವಲ್ಲ. ನಿಮ್ಮ ವಂಶಕ್ಕೆ ನೀವು ಏಕಮಾತ್ರ ಸಂತಾನರೆಂದಿರಲ್ಲವೆ? ಅದಕ್ಕಾಗಿ ಚಿಂತಿಸಲವಶ್ಯವಿಲ್ಲ. ಶ್ರೀಹರಿಯು ದಯಾಮಯನಿರುವನು' ಎಂದು ಪ್ರತ್ಯುತ್ತರವಿತ್ತರು.

ಶ್ರೀಗಳವರ ಪ್ರತ್ಯುತ್ತರವು ಧೋಂಡೂರಾಯನ ಮನಸ್ಸಿನಲ್ಲಿ ಕೆಲಸಮಾಡತೊಡಗಿತು. ತಾನು ಆ ದಿನ ಪೂರ್ವಾಹ್ನದಲ್ಲಿ ಪಶುವಿನಂತೆ ನೀರು ಕುಡಿಯುತ್ತಾ ಬಂದುದು ಶ್ರೀಗಳವರ ದೃಷ್ಟಿಗೆ ಬಿದ್ದಿತೆಂದು ಮನಸ್ಸಿಗೆ ಬೋಧೆಯಾಯಿತು. ಒಡನೆಯೇ ತನ್ನ ನಿತ್ಯಾಚರಣೆಗಳೂ, ಸ್ನಾನ ಸಂಧ್ಯಾದಿಗಳ ಗಮನವಿಲ್ಲದೆ ಮನಬಂದಂತೆ ತಿಂದು ಮೆರೆದುಕೊಂಡಿದ್ದ ಪಶುಸಹಜ

ವ್ಯಾಪಾರಗಳೂ ಗೋಚರಕ್ಕೆ ಬಂದುವು. ಈವರೆಗೆ ಅಜ್ಞಾನವಸ್ಥೆಯಲ್ಲಿ ಸುಪ್ತವಾಗಿದ್ದ ಮನಸ್ಸು, ಈಗ ಶ್ರೀಗಳವರ ನಿಶಿತವಾಕ್ಯಗಳೆಂಬ ಸಾಣೆಗೆ ಇಡಲ್ಪಟ್ಟು ಚುರುಕಾಯಿತು. ಯೋಚನೆಯು ಮನಸ್ಸನ್ನು ವ್ಯಾಪಿಸಿತು. ಧೋಂಡೂರಘುನಾಥರಾಯನು ಚಿಂತಾಮಗ್ನನಾದನು.

ಈ ಸಂದರ್ಭದಲ್ಲಿ ಆತನ ಜನ್ಮಾಂತರಕ್ಕೆ ಸಂಬಂಧಿಸಿದ್ದೆಂದು ಹೇಳುವ ಒಂದು ಕಥೆಯು ಉದಹರಣಯೋಗ್ಯವಾಗಿದೆ. ಅದು ಕೇವಲ ದಂತಕಥೆಯೆಂದು ಲಘುದೃಷ್ಟಿಯಿಂದ ಕಾಣತಕ್ಕದಲ್ಲ. ಅದಕ್ಕೆ ಶ್ರೀಮತ್ಸುಮಧ್ವವಿಜಯ ಗ್ರಂಥರತ್ನದ ಪವಿತ್ರ ಸಂಬಂಧವುಂಟು. ಆ ಕಥೆಯು ಹೀಗೆ ಸಾಗುತ್ತದೆ. ಜೀವೋತ್ತಮರಾದ ಶ್ರೀ ವಾಯುದೇವರು ಶ್ರೀ ಹರಿಯ ಅಜ್ಞಾನುಸಾರ ಕಲಿಯುಗದಲ್ಲಿ ಶ್ರೀಮದಾನಂದತೀರ್ಥಯತೀಶ್ವರರಾಗಿ ಅವತಾರವೆತ್ತಿ ಶ್ರೀಹರಿಸರ್ವೋತ್ತಮತ್ವವನ್ನೂ, ಪಂಚಭೇದತಾರತಮ್ಯ ಜಗತ್ಸತ್ಯತ್ವ ಮುಂತಾದ ಅಮೌಲ್ಯ ಸಿದ್ಧಾಂತಗಳನ್ನೂ ಸ್ಥಾಪಿಸಿ, ಆ ಸಿದ್ಧಾಂತಗಳನ್ನು ಪ್ರಚುರಗೊಳಿಸಲಿಕ್ಕಾಗಿ ದೇಶದೇಶಾಂತರಗಳಲ್ಲಿ ಸಂಚಾರ ಮಾಡುತ್ತಿದ್ದ ಮಹದ್ವೈಭವವನ್ನು ಪ್ರತ್ಯಕ್ಷ ಕಂಡು, ಅವರ ಸನ್ನಿಧಿಯಲ್ಲೇ ಇದ್ದು, ಅವರು ದಿವ್ಯವಾಣಿಯಿಂದ ತಮ್ಮ ಶಿಷ್ಯರಿಗೆ ಪಾಠಪ್ರವಚನ ನಡೆಯಿಸುವಾಗ ಅದನ್ನು ಶ್ರವಣಮಾಡಬೇಕೆಂದು ಇಚ್ಛೆಗೊಂಡ ಇಂದ್ರದೇವರು ಒಂದು ಎತ್ತಾಗಿ ಜನ್ಮವೆತ್ತಿ ಬಂದು ಮಠದಲ್ಲಿ ವಾಸಿಸಿಕೊಂಡಿದ್ದರಂತೆ! ಮನುಷ್ಯರಾಗಿಯೇ ಹುಟ್ಟಿದ್ದರೆ, ಇತರ ಹಲವು ತಾಪತ್ರಯಗಳು, ಹೇಳಲಾಗದ ಹಲವು ವ್ಯವಹಾರಗಳು ಮುಂತಾದುವುಗಳಲ್ಲಿ ಮನಸ್ಸು ತಗುಲಿ ಗ್ರಂಥಶ್ರವಣ ಕಾರ್ಯವು ಸಾಂಗವಾಗಿ ನಡೆಯಲಾರದೆಂದು ಭಾವಿಸಿ ಜ್ಞಾನಸಂಪನ್ನರಾದ ಇಂದ್ರದೇವರು ಹಾಗೆ ವೃಷಭ ರೂಪವನ್ನೆತ್ತಿದ್ದರೆಂದು ಉಕ್ತವಾಗಿದೆ. ಆ ವೃಷಭವೂ ಮಠದಲ್ಲೇ ವಾಸಿಸಿದ್ದು, ನಿತ್ಯವೂ ಶ್ರೀಗಳವರ ಬಳಿ ಶಿಷ್ಯರು ಪಾಠಪ್ರವಚನಾದಿಗಳಿಗೆ ಕುಳಿತರೆಂದೊಡನೆಯೇ, ಎಲ್ಲಿದ್ದರೂ ಬಂದು ಶ್ರೀಮದಾಚಾರ್ಯರ ಸಮ್ಮುಖದಲ್ಲಿ ಕುಳಿತುಕೊಂಡು ಏಕಾಗ್ರ ಮನಸ್ಸಿನಿಂದ ಶ್ರವಣ ಮಾಡುತ್ತಲಿದ್ದು, ಪಾಠ ಮುಗಿದೊಡನೆಯೇ ಎದ್ದು ಹೋಗುತ್ತಿದ್ದಿತು. ಗೊತ್ತಾಗಿ ಮಠದಲ್ಲೇ ವಾಸಿಸುವ ಪ್ರಾಣಿಯೆಂದಾದ ಬಳಿಕ ಅದರ ಯೋಗಕ್ಷೇಮವೂ ಮಠೀಕರ ಪಾಲಿಗೇ ಬಿದ್ದಂತಾ

ಗಳು, ಅದಕ್ಕೆ ನಿತ್ಯವೂ ಹುಲ್ಲು ನೀರುಗಳ ವ್ಯವಸ್ಥೆಯೂ ಪ್ರಸಾದಾದಿಗಳನ್ನು ತಿನ್ನಲು ಕೊಡುವಿಕೆಯೂ ನಡೆಯುತ್ತಾ ಬಂದುವು. ಪ್ರಯಾಣ ಹೊರಟ ಸಂದರ್ಭದಲ್ಲಿ ಶ್ರೀಮದಾಚಾರ್ಯಕೃತಗ್ರಂಥಗಳ ಹೊರೆಯನ್ನು ಹಸಬಿ ಚೀಲಗಳಲ್ಲಿ ತುಂಬಿ ಅದರ ಬೆನ್ನಮೇಲೆ ಹೇರಿ ಪ್ರಯಾಣ ಮಾಡುವ ಪದ್ಧತಿಯುಂಟಾಯಿತು. ಯಾರಿಂದಲೂ ಕಟ್ಟಿಸಿಕೊಳ್ಳದೆ, ಯಾರನ್ನೂ ತೊಂದರೆಗೊಳಿಸದೆ, ಆ ವೃಷಭರಾಜವು ಗೊತ್ತಾಗಿ ಶ್ರೀಮದಾಚಾರ್ಯರ ಗ್ರಂಥ ಸಮೂಹದ ವಾಹಕ ಕಾರ್ಯಕ್ಕಾಗಿಯೇ ಜನ್ಮವೆತ್ತಿತೋ ಎಂಬಂತೆ ಆವಶ್ಯಕವಿದ್ದ ಸಂದರ್ಭಗಳಲ್ಲೆಲ್ಲ ಆ ಕಾರ್ಯಕ್ಕೆ ತಪ್ಪದೆ ಸಿದ್ಧವಾಗಿರುತ್ತಿದ್ದಿತು. ಹೀಗೆಯೇ ಬಹುದಿನಗಳವರೆಗೆ ನಡೆದು ಬಂದಿತು.

ಹೀಗಿರುತ್ತಿರುವಲ್ಲಿ ಒಂದುದಿನ ಶ್ರೀಮದಾಚಾರ್ಯರ ಶಿಷ್ಯರಲ್ಲೊಬ್ಬರು-'ಮಹಾಸ್ವಾಮಿ, ತಮ್ಮ ಮುಖದಿಂದ ಉಪದಿಷ್ಟವಾಗಿರುವ ಈ ದಿವ್ಯ ಗ್ರಂಥಗಳು, ಸರ್ವಶಾಸ್ತ್ರಾರ್ಥ ಸಮ್ಮತವಾಗಿವೆ. ಗಹನವಾದ ಅಮೌಲ್ಯ ವೇದಾಂತ ವಿಚಾರಗಳನ್ನೊಳಕೊಂಡು, ದುರವಗಾಹವೆನ್ನಿಸುವಂತಿವೆ! ಈ ಮಹಾಗ್ರಂಥಗಳಿಗೆ ಈ ಮಾನವ ಲೋಕದಲ್ಲಿ ಭಾಷ್ಯಮಾಡತಕ್ಕ ಮಹಾತ್ಮನುಂಟೆ? ಹಾಗೆ ಭಾಷ್ಯರಚನೆಯಾಗದಿದ್ದಲ್ಲಿ, ಇವು ಅಜ್ಞಮನುಷ್ಯಲೋಕಕ್ಕೆ ಬೋಧವಾಗುವ ಪರಿಯೆಂತು! ಅನುಗ್ರಹಿಸಬೇಕು' ಎಂದು ವಿಜ್ಞಾಪಿಸಿಕೊಂಡರು. ಆತನ ಆ ಮಾತು ಶ್ರೀಗಳವರಿಗೆ ಉಚಿತವಾದುದೆಂದು ತೋರಿತು. ಒಡನೆ ಆ ದಯಾಮಯರು, ಹಸನ್ಮುಖದಿಂದ ಅಲ್ಲೇ ಎದುರಿನಲ್ಲಿ, ಅರೆದೆರೆದ ಕಣ್ಣುಗಳ ಮಂದದೃಷ್ಟಿಯಿಂದ ನೋಡುತ್ತ, ಮೆಲುಕು ಹಾಕುತ್ತ ಮಲಗಿದ್ದ ವೃಷಭವನ್ನು ನೋಡಿ-'ನಿಜ, ಗ್ರಂಥಗಳಿಗೆ ಭಾಷ್ಯ ಮಾಡತಕ್ಕವರೊಬ್ಬರು ಬೇಕು- ಎಂದು ಕ್ಷಣ ತಡೆದು- 'ಇಗೋ ನಮ್ಮೆದುರಿಗಿರುವ ಈ ವೃಷಭವು, ನಮ್ಮ ಈ ಗ್ರಂಥಗಳಿಗೆ ಭಾಷ್ಯಮಾಡುತ್ತದೆ' ಎಂದು ನಿರೂಪಿಸಿದರು. ಶಿಷ್ಯರು ಶ್ರೀಮದಾಚಾರ್ಯರವರಿಂದ ಈ ಪ್ರತ್ಯುತ್ತರವನ್ನು ಎದುರುನೋಡಿರಲಿಲ್ಲ. ಪ್ರೌಢಪಾಂಡಿತ್ಯದಿಂದ ಮಹಾಶಾಸ್ತ್ರಜ್ಞರೆಂದು ಹೆಸರಾಗಿದ್ದ ತಮ್ಮಲ್ಲಿ ಯಾರಾದರೊಬ್ಬರು ಆ ಕೆಲಸಮಾಡಲು ಅರ್ಹರೆಂದು ನಿರ್ದೇಶಿಸುತ್ತಾರೆಂದು ಅವರ ಎಣಿಕೆಯಿದ್ದಿತು. ಆದರೆ, ಶ್ರೀಮದಾಚಾರ್ಯರ ಪ್ರತ್ಯುತ್ತರದಿಂದ ತಾವು ಆ ಎತ್ತಿಗಿಂತಲೂ ಕಡಮೆ ಯೋಗ್ಯತೆ

ಯವರೆಂದು ಪರಿಗಣಿತರಾದೆವೆಂದು ಅವರ ಮನಸ್ಸಿಗೆ ಬೋಧೆಯಾಯಿತು. ಆ ಮಾತು ಕರ್ಣರಂಧ್ರಗಳನ್ನು ಬಹು ಕಟುವಾಗಿ ಪ್ರವೇಶಮಾಡಿದುವು. ಆದರೆ, ತಮ್ಮ ಮನಸ್ಸಿನಲ್ಲುಂಟಾದ ಅಸಮಾಧಾನವನ್ನು ಯಾವ ಬಗೆಯಿಂದಲೂ ಶ್ರೀಗಳವರಮೇಲೆ ತೋರಿಸಲು ಸಾಧ್ಯವಿಲ್ಲದಿದ್ದುದರಿಂದ, ಆ ಎತ್ತನ್ನು ಚುರಚುರನೆಂದು ಒಬ್ಬೊಬ್ಬರೂ ನೋಡಲಾಗಿದರು. ಮತ್ತು 'ತುಚ್ಛವಾದ ಈ ಎತ್ತು - ನಮಗೆಲ್ಲ ಅಪಮಾನಕರವಾಗುವಂತೆ ಶ್ರೀಮದಾಚಾರ್ಯರ ಇಷ್ಟುಮಟ್ಟಿನ ಕಟಾಕ್ಷಕ್ಕೆ ಪಾತ್ರವಾಯಿತೇ! ಇದು ಮಾರನೆಯ ದಿನದ ಪ್ರವಚನಕಾಲದೊಳಗಾಗಿ ಸರ್ಪದಷ್ಟವಾಗಿ ಮೃತವಾಗಲಿ' ಎಂದು ಶಾಪಕೊಟ್ಟರು.

ತಾವು ವೃಷಭನನ್ನು ಕುರಿತು ನುಡಿದ ಮಾತು, ತಮ್ಮ ಶಿಷ್ಯರ ಮನಸ್ಸಿನಲ್ಲಿ ವಿಕಲ್ಪವನ್ನುಂಟುಮಾಡಿ, ಆ ನಿರಪರಾಧಿಯಾದ ಎತ್ತಿಗೆ ಮೃತ್ಯುವನ್ನುಂಟುಮಾಡಲು ಕಾರಣವಾಯಿತೆಂಬ ಸಂಗತಿಯು ಸರ್ವಜ್ಞರಾದ ಶ್ರೀಮದಾಚಾರ್ಯರವರಿಗೆ ಬೋಧವಾಯಿತು. ಒಡನೆ ಅವರು, ಲೇಶಮಾತ್ರ ಚಿಂತೆಗೊಂಡು, ಆ ಪ್ರಾಣಿಯನ್ನು ಆ ದುರ್ಮರಣದಿಂದ ತಪ್ಪಿಸಿ ಕಾಪಾಡತಕ್ಕುದು ತಮ್ಮ ಕರ್ತವ್ಯವೆಂದು ಸಂಕಲ್ಪಿಸಿಕೊಂಡರು. ಮಾರನೆಯ ದಿನ ಪ್ರವಚನಕಾಲದಲ್ಲಿ ಅದು ಸರ್ಪದಷ್ಟವಾದರೂ, ಸರ್ಪವಿಷಪರಿಹಾರಕವಾದ ಶ್ರೀ ಹರಿಯ ದಿವ್ಯ ನಾಮಸುಧೆಯನ್ನು ಶ್ರವಣಮಾಡಿಸಿ ವಿಷಬಾಧೆಯನ್ನು ನಿವಾರಿಸಲುದ್ದೇಶಿಸಿ, ಶ್ರೀ ದ್ವಾದಶಸ್ತೋತ್ರವೆಂದು ಸುಪ್ರಸಿದ್ಧವಾದ ಒಂದು ಸ್ತೋತ್ರರಾಜವನ್ನು ರಚಿಸಿ, ಮಾರನೆಯದಿನ ಎಂದಿನಂತೆ ಹೇಳತಕ್ಕಪಾಠವನ್ನಲ್ಲದೆ, ಆ ದ್ವಾದಶಸ್ತೋತ್ರವನ್ನೇ ಹೇಳಿ ವಿವರಿಸಿ, ಆ ಎತ್ತಿಗೆ ಶ್ರವಣಮಾಡಿಸಿದರು. ಎತ್ತು, ಕುಪಿತರಾದ ಆ ಬ್ರಾಹ್ಮಣರ ಶಾಪದಂತೆ ಆ ದಿನ ಸರ್ಪದಷ್ಟವಾಯಿತಾದರೂ, ಶ್ರೀ ಸರ್ವಜ್ಞರಾಯರ ಪರಮಾನುಗ್ರಹಕ್ಕೆ ಪಾತ್ರವಾದುದರಿಂದ, ಶ್ರೀ ದ್ವಾದಶಸ್ತೋತ್ರ ಶ್ರವಣ ಪ್ರಭಾವದಿಂದ ಮೃತಿಯನ್ನೈದದೆ, ವಿಷಬಾಧೆಯಿಂದ ನಿವೃತ್ತಿಯನ್ನು ಹೊಂದಿ ಬದುಕಿತು. ಹೀಗೆ ದುರ್ಮರಣದಿಂದುಳಿದು, ಮುಂದೆ ಕೆಲವು ಕಾಲವಾದಮೇಲೆ ಕಾರಣಾಂತರದಿಂದ ದೇಹವನ್ನು ನೀಗಿತು. ಈ ಕಾರಣದಿಂದಲೇ, ಮಾಧ್ವರ ಮಠಗಳಲ್ಲೂ ಮನೆಗಳಲ್ಲೂ ದೇವರಿಗೆ ನೈವೇದ್ಯಸಮ

ರ್ಪಣೆಯಕಾಲದಲ್ಲಿ, ಆಹಾರಾದಿಗಳಲ್ಲಿ ಜ್ಞಾತಾಜ್ಞಾತವಾಗಿ ಮಿಶ್ರಣವಾಗಿ ರಬಹುದಾದ ವಿಷಬಾಧೆಯು ಪರಿಹಾರವಾಗಲೆಂಬ ಉದ್ದೇಶದಿಂದ, ಈ ದ್ವಾದಶಸ್ತೋತ್ರವನ್ನು ಪಠಣೆಮಾಡುವ ಸಂಪ್ರದಾಯವುಂಟಾಗಿದೆಯೆಂದು ಪ್ರಾಜ್ಞರು ಹೇಳುತ್ತಾರೆ.

ಹೀಗೆ ಶ್ರೀಮದಾಚಾರ್ಯರ ಮುಖಕಮಲದಿಂದಲೇ ಗ್ರಂಥಶ್ರವಣ ಮಾಡಿ, ಏಕಾಗ್ರಚಿತ್ತದಿಂದ ಅದನ್ನು ಮನನಮಾಡಿ, ಶ್ರೀಯವರ ಆಶ ಯವೇನೆಂಬುದನ್ನು ಸಾಗ್ರವಾಗಿ ಗ್ರಹಿಸಿದ್ದರಿಂದ ಆ ವೃಷಭವೇ ಅವ ರಿಂದ ರಚಿತವಾದ ಗ್ರಂಥಗಳಿಗೆ- ಅವರ ಹೇಳಿಕೆಯಂತೆ, ಭಾಷ್ಯರಚನೆಮಾ ಡಲು ತಕ್ಕ ಯೋಗ್ಯತೆಯನ್ನು ಗಳಿಸಿಕೊಂಡಿದ್ದಂತಾಯಿತಷ್ಟೆ! ಈ ಎತ್ತೇ ತನ್ನಮುಂದಿನ ಜನ್ಮದಲ್ಲಿ ಮೇಲ್ಕಂಡಂತೆ ದೇಶಪಾಂಡೆಯವರ ಮನೆತನದಲ್ಲಿ ಪುತ್ರನಾಗಿ ಜನಿಸಿ ರಘುನಾಥರಾಯನೆಂಬ ಹೆಸರಿನಿಂದ ಬೆಳೆಯಿತೆಂದು ಪ್ರತೀತಿ. ಈ ಸಂಸ್ಕಾರಾವೇಶದಿಂದಲೋ ಎಂಬಂತೆ ಧೋಂಡೂರಾಯನು ಈಗ-ನದೀತೀರಕ್ಕೆ ಬಂದು ಅಲ್ಲಿ ಬಾಯಾರಿಕೆಯನ್ನುಕಳೆದುಕೊಳ್ಳಲು ನದೀ ಜಲಕ್ಕೆ ಬಾಯೊಡ್ಡಿ ನೀರು ಕುಡಿದನು. ಅದನ್ನು ಕಂಡು ಅಪರೋಕ್ಷಜ್ಞಾ ನಿಗಳಾದ ಶ್ರೀ ಅಕ್ಷೋಭ್ಯತೀರ್ಥ ಶ್ರೀಪಾದಂಗಳವರು, ಅದು ಪಶುಕ್ರಿಯೆ ಯೆಂದು ಆಕ್ಷೇಪಿಸಿದೊಡನೆಯೇ, ರಘುನಾಥರಾಯನಿಗೆ ಹಿಂದಿನ ತನ್ನ ಪಶು ಜನ್ಮವನ್ನು ಸ್ಮರಣೆಗೆ ತಂದುಕೊಟ್ಟಂತಾಗಲು, ಒಡನೆ ತನ್ನ ಜನ್ಮೋದ್ದೇಶ ವೇನೆಂಬುದು ಮನಸ್ಸಿಗೆಹೊಳೆದಂತಾಗಿ, ಸಂಸಾರದಲ್ಲಿ ವಿರಕ್ತಿಯುಂಟಾಗಲು ಕಾರಣವಾಯಿತು. ಲೋಕದಲ್ಲಿ ನಡೆವ ಪ್ರತಿಯೊಂದು ಮಹತ್ಕಾರ್ಯಕ್ಕೂ ಗೊತ್ತಾದ ಒಂದು ಕಾರಣವಿಲ್ಲದೆ ಇರುವುದಿಲ್ಲವೆಂಬುದನ್ನು ಎಲ್ಲರೂ ಒಪ್ಪ ಬೇಕಲ್ಲವೆ! ಪ್ರತ್ಯಕ್ಷವಾಗಿ ನಡೆಯುತ್ತಿರುವ ಒಂದು ಕಾರ್ಯಕ್ಕೆ ಯಾವು ದೋ ಒಂದು ಕಾರಣವು - ನಮ್ಮ ಬಾಹ್ಯದೃಷ್ಟಿಗೆ ಅಜ್ಞಾತವಾದರೂ, ಎಂತೂ ಇರಲೇಬೇಕೆಂಬ ವಿಷಯದಲ್ಲಿ ಸಂದೇಹವಿಲ್ಲ. ನಾವು ಅದನ್ನು ತಿಳಿ ಯಲಾರದಿದ್ದ ಮಾತ್ರಕ್ಕೆ, ಕಾರಣವೇ ಇಲ್ಲವೆನ್ನಲಾಗದು. ಅವರಿಗೆ ಆ ವಯಸ್ಸಿನಲ್ಲಿ ವೈರಾಗ್ಯವುತ್ಪನ್ನವಾಗಲು ಹೀಗೆ ಇದು ಕಾರಣವೆಂದು ಈ ಕಥೆಯು ಹೇಳಲ್ಪಟ್ಟಿದೆ.

ಈ ಸಂಗತಿಯನ್ನು ಪೂರ್ವಿಕರಿಂದ ರಚಿತವಾಗಿರುವ ಒಂದು ಕೀರ್ತನೆಯು ಧೃಢೀಕರಿಸುತ್ತ ಶ್ರೀಮಜ್ಜಯತೀರ್ಥರ ಸಂಕ್ಷೇಪಚರಿತ್ರೆಯನ್ನೂ ಸೂಚಿಸುತ್ತದಾದ ಪ್ರಯುಕ್ತ ಅದನ್ನು ಇಲ್ಲಿ ಕೊಡಲೆಳೆಸುತ್ತೇವೆ.

ರಾಗ ಕಾಂಬೋದಿ ಆದಿತಾಳ

ದಯದಿ ಪಾಲಿಸೋ ಜಯತೀರ್ಥರಾಯ | ಅಕ್ಷೋಭ್ಯರ ತನಯ ಪ.
ನಯದೊಳು ನಮಿಸುತ ಸ್ತುತಿಸಲು ನಾನರಿಯೆ|ಗುರುರಾಜ ಧೊರೆಯೆ| ಅ.
ಅತ್ಯಂತ ಹರುಷದೊಳೆತ್ತಾಗಿರುತಿರಲು, ಆನಂದತೀರ್ಥರು
ನಿತ್ಯಪಠಿಸುವ ಪುಸ್ತಕ ಹೊರುತಿರಲು, ಗುರುರಾಯರು ಪೇಳುವ
ತತ್ವಗ್ರಂಥವ ಕಿವಿಯೊಳು ಕೇಳುತಲಿ, ತಲೆಯ ತೂಗುತಲಿ
ಮತ್ತೆ ಪುಟ್ಟಿದೆಯೊ ಮಂಗಳವೇಡೆಯಲಿ, ವೃತ್ತಿವಂತರಲ್ಲಿ ೧

ದೇಶಪಾಂಡೆಯ ಕೂಸಾಗಿ ಜನಿಸಿ, ಘನರಾವುತನೆನಿಸಿ,
ದೇಶದೇಶದೊಳು ಸೈನ್ಯವನು ಚರಿಸಿ, ಧನಗಳನು ಗಳಿಸಿ
ವಾಸವನೆಂಬ ಗುರುತವತಪ್ಪಿಸಿ, ನದಿಗೆ ನೀರಡಿಸಿ
ಶ್ರೀಶನಾಜ್ಞೆಯಲಿ ಗುರುಗಳ ಕರೆತರಿಸಿ, ಶಿಖಾಸೂತ್ರವ ತೆಗೆಸಿ ೨

ಹಿಂಡುಬಳಗಗಳಂಡಲೆಯುತ ಬಂದು, ಅಕ್ಷೋಭ್ಯತೀರ್ಥರ
ಕಂಡುಭೇಟಿಯ ಮಾಡುತಲಿ ನಿಂದು, ಧೋಂಡೂರಘುನಾಥನ
ಹೆಂಡತಿಯರೊಳು ಕೂಡಿಸಬೇಕೆಂದು, ತಂಧೆಯು ಕರೆತರಲು
ಚಂಡಸರ್ಪದ ರೂಪವ ತಾವ್ ಕಂಡು, ಭಯಪಟ್ಟರಂದು ೩

ಮಧ್ವಶಾಸ್ತ್ರವದು ಗದ್ಗದಿಸಿರೆಯದಕೆ, ಟೀಕವನುಮಾಡಿ
ವಿದ್ವಜ್ಜನರಿಗೆ ತಿದ್ದಿಪೇಳುತಲಿ, ನಾನಾಬಗೆಯಿಂದಲಿ
ಪದ್ಧತಿ ತಿಳಿಸುವ ಗುರುರಾಯರು ನೀವು, ನತಜನಸುರಧೇನು
ಅದ್ವೈತಕರಿಯೆಂಬ ವಿದ್ಯಾರಣ್ಯರನು, ಗೆದ್ದಸಿಂಹನೀವು ೪

ಆಷಾಢ ಬಹುಳ ಪಂಚಮಿಯು ಬರಲು, ಕಳೆಬರವನು ಬಿಡುತ
ಕೇಶವವಿಠಲನ ಧ್ಯಾನದೊಳಿರುತ, ಮಲಖೇಡೆಯಲ್ಲಿ
ವಾಸಮಾಡಿದನೆಂಬ ಪ್ರಖ್ಯಾತ, ನಿಜಗುಣಗಣಭರಿತ
ಬೇಸರದಲೆ ಕೊಂಡಾಡಿದರೆ ನಿರುತ, ಇಷ್ಟಾರ್ಥವನೀವ ೫

ವ್ಯತ್ಯಾಸವಾಯಿತು. ಹೇಮಭೂಮಿಕಾಮಿನಿಗಳಮೇಲಿನ ಆಶಾಪಾಶಗಳೆಲ್ಲವೂ ಕ್ಷಣಮಾತ್ರದಲ್ಲಿ ಕಡಿದುಹೋಗಿ, ಮನಸ್ಸು ವೈರಾಗ್ಯವನ್ನಾಶ್ರಯಿಸಿತು. ವಿಷಯಗಳು ಹೇಯವಸ್ತುಗಳೆಂದು ತೋರಸಾಗಿದುವು ಮನಸ್ಸಿನಲ್ಲಿದ್ದ ಚಾಪಲ್ಯವು ನಿವೃತ್ತವಾಗಿ ಗಂಭೀರಭಾವವುದಯಿಸಿತು. ದೃಷ್ಟಿಯು ಚಂಚಲತೆಯನ್ನು ನೀಗಿ ಸ್ಥಿರವಾಯಿತು. ಸಂಚಾರದಿಂದ ಸ್ವಗ್ರಾಮಾಭಿಮುಖವಾಗಿ ಪ್ರಯಾಣಹೊರಟಾಗ ಬಹು ಶೀಘ್ರಗತಿಯಿಂದ ಬಂದ ತಮ್ಮ ಪ್ರಭುವು ಇಲ್ಲಿ ಶ್ರೀಗಳವರ ಸನ್ನಿಧಿಯಲ್ಲಿ ಇಷ್ಟು ಸಮಾಧಾನದಿಂದ ಎರಡು ಮೂರು ದಿನಗಳವರೆಗೆ ನಿಂತುಬಿಟ್ಟುದು ಪರಿವಾರದವರಿಗೆ ಆಶ್ಚರ್ಯಕರವೆನ್ನಿಸಿದ್ದಿತು. ಮೊದಲನೆಯದಿನ ಶ್ರೀಗಳವರ ದರ್ಶನಮಾಡಿಕೊಂಡು ಹಿಂದಿರುಗಿದಾರಭ್ಯ ಯಾರೊಂದಿಗೂ ಮುಖಕೊಟ್ಟು ಮಾತನಾಡದೆ ಮೌನಭಾವವನ್ನು ವಹಿಸಿದ್ದ ತಮ್ಮ ಯಜಮಾನನ ಚಿತ್ತವೃತ್ತಿಯನ್ನು ತಿಳಿಯಲಾರದೆ, ಸಂಗತಿಯೇನೆಂದು ತಿಳಿಯದೆ ಎಲ್ಲರೂ ಚಿಂತಾಕ್ರಾಂತರಾಗಿದ್ದರು. ಸ್ವಪ್ನವಾದ ಮಾರನೆಯ ಪ್ರಾತಃಕಾಲ, ಮಠಕ್ಕೆಹೋಗಿ ಶ್ರೀಗಳವರಿಗೆ ತನಗಾದ ಸ್ವಪ್ನವೃತ್ತಾಂತವನ್ನು ತಿಳಿಸಿದೊಡನೆಯೇ ಶ್ರೀಗಳವರು '- ರಾಯರೇ ಸನ್ಯಾಸ ಗ್ರಹಣಮಾಡುವ ವಿಚಾರದಲ್ಲಿ ಈಗ ನಿಮ್ಮ ಅಭಿಪ್ರಾಯವೇನು?' ಎಂದು ಹಿಂದಿನ ಪ್ರಶ್ನೆಯನ್ನು ಪುನಃ ಒತ್ತಿ ಕೇಳಿದರು. ಧೋಂಡೂರಘುನಾಥರಾಯನ ಮನಸ್ಸು ಈಗಾಗಲೇ ವಿಷಯ ವಾಸನೆಯನ್ನು ನೀಗಿ, ಪರಿಶುದ್ಧವಾಗಿ ವೈರಾಗ್ಯವನ್ನಾಶ್ರಯಿಸಿತ್ತಾದಪ್ರಯುಕ್ತ, ಯತ್ಯಾಶ್ರಮಸ್ವೀಕಾರಕ್ಕೆ ಯಾವ ಪ್ರತಿಬಂಧಕವೂ ಉಳಿದಂತಿರಲಿಲ್ಲ. ಆದುದರಿಂದ ಒಡನೆ ಎದ್ದು ಶ್ರೀರಾಮಚಂದ್ರಸ್ವಾಮಿಗೂ ಯತೀಶ್ವರರಿಗೂ ದೀರ್ಘದಂಡ ನಮಸ್ಕಾರವನ್ನಾಚರಿಸಿ, ಮನಸಾ ದೀಕ್ಷಾಸ್ವೀಕಾರ ಮಾಡಿದನು. ಆ ಮಾರನೆಯ ದಿನವೇ ಸನ್ಯಾಸಸ್ವೀಕಾರ ಕಾಲದಲ್ಲಿ ಆಗಬೇಕಾದ ಆತ್ಮಶ್ರಾದ್ಧ, ಶಿಖಾಯಜ್ಞೋಪವೀತಾದಿ ವಿಸರ್ಜನ, ಕೌಪೀನ– ಕಾಷಾಯವಸ್ತ್ರಾದಿ ಧಾರಣ ಮುಂತಾದ ಬಾಹ್ಯಾಂಗಗಳೆಲ್ಲವೂ ನಡೆದು, ಶ್ರೀ ಅಕ್ಷೋಭ್ಯತೀರ್ಥರಿಂದ ಸಂಪ್ರದಾಯವನ್ನನುಸರಿಸಿ ಆಗಬೇಕಾದ ಮಹಾಮಂತ್ರೋಪದೇಶವೂ ಆಯಿತು.

ಮನಸ್ಸಿನಲ್ಲಿ ವೈರಾಗ್ಯವು ಉತ್ಪನ್ನವಾಗುವಿಕೆಯೇ ಸನ್ಯಾಸಗ್ರಹಣಕ್ಕೆ

ಯೋಗ್ಯಸಮಯವೆಂಬ ಆರ್ಯಸಂದೇಶವು ನಮ್ಮ ಕಥಾನಾಯಕರಲ್ಲಿ ಹೀಗೆ ಕಾರ್ಯಕಾರಿಯಾಯಿತು. ವಿಧ್ಯುಕ್ತ ರೀತಿಯಲ್ಲಿ ಸನ್ಯಾಸಾಶ್ರಮಸ್ವೀಕಾರ ಮಾಡಿ, ಆ ಆಶ್ರಮಕ್ಕೆ ಸಹಜವಾದ ಅಂತರ್ಬಾಹ್ಯ ಲಕ್ಷಣಗಳಿಂದಲೆಲ್ಲ ಶೋಭಿಸುತ್ತಿದ್ದ ಆ ನವಯೌವನ ಸಂಪನ್ನರಾದ ಯತಿಶಿರೋಮಣಿಯನ್ನು ಕಂಡು, ಶ್ರೀಮದಕ್ಷೋಭ್ಯತೀರ್ಥರು, ಶ್ರೀ ಹರಿಸ್ಮರಣಪೂರ್ವಕ ಅವರಿಗೆ **ಶ್ರೀ ಜಯತೀರ್ಥ**ರೆಂದು ನಾಮಕರಣಮಾಡಿದರು. ಜಯ – ಎಂದರೆ ವಾದಿಗಳನ್ನು ಜಯಿಸಿ, ತೀರ್ಥ -- ರೆಂದರೆ ಶ್ರೀಮನ್ಮಧ್ವಾಚಾರ್ಯಕೃತ ಗ್ರಂಥ ರತ್ನಗಳಿಗೆ ಹೃದಯಂಗಮವಾದ ಟೀಕೆಗಳನ್ನು ರಚಿಸತಕ್ಕವರು ಎಂದರ್ಥವು. ಅಕ್ಷೋಭ್ಯತೀರ್ಥರು, ಗುರ್ವನುಗ್ರಹಕ್ಕೆ ಪಾತ್ರರಾದ ತಮ್ಮ ಶಿಷ್ಯರಾದ ಜಯತೀರ್ಥರು ಮಾಯಾವಾದಮಾಡುವ .ಪರವಾದಿಗಳೊಡನೆ ವಾಗ್ಯುದ್ಧಮಾಡಿ ಜಯಿಸಿ, ಮಧ್ವಸಿದ್ಧಾಂತವನ್ನು ದೃಢವಾದ ತಳಹದಿಯ ಮೇಲೆ ಸ್ಥಾಪಿಸಿ, ಮಧ್ವಶಾಸ್ತ್ರದ ಸರ್ವೋತ್ಕೃಷ್ಟತೆಯನ್ನು ಚಿರಸ್ಥಾಯಿಗೊಳಿಸುವರೆಂಬ ಭವಿಷ್ಯವನ್ನು ಜ್ಞಾನದೃಷ್ಟಿಯಿಂದ ತಿಳಿದು, ಪರಮಾನಂದದಿಂದ ಇದ್ದರು.



ಅಧ್ಯಾಯ ೬ ‘ ವಿಘ್ನನಿವಾರಣೆ ’

ಅತುಳೈಶ್ವರ್ಯ, ರಾಜ್ಯಸಂಪದ, ಅತ್ಯಂತ ಪ್ರೀತ್ಯಾಸ್ಪದರಾದ ಮಾತಾಪಿತೃಗಳು, ನೆರೆದು ಋತುಶಾಂತಿ ಪ್ರಸ್ತಕ್ಕೆ ಸಿದ್ಧಳಾಗಿದ್ದ-ರತಿಗೆಣೆಯಾದ ಸೌಂದರ್ಯಶಾಲಿನಿಯಾದ ಪತ್ನಿ, ದಿವ್ಯಾರೋಗ್ಯಭಾಗ್ಯಯುಕ್ತವಾದ ತುಂಬುಯೌವನ ಹೀಗೆ ಮನಸ್ಸನ್ನು ಆಕರ್ಷಿಸಿ ವಿಷಯಭೋಗದ ತೊಡರಿನಲ್ಲಿ ತಗುಲಿಸಲು ಸಾಧಕವಾದ ಸಕಲ ಸಾಮಗ್ರಿಗಳೂ ಏಕತ್ರ ಸೇರಿದ್ದಾಗ, ಅವುಗಳನ್ನೆಲ್ಲ ವೈರಾಗ್ಯವೆಂಬ ನಿಶಿತ ಖಡ್ಗದಿಂದ ಒಂದೇ ಏಟಿಗೆ ಕತ್ತರಿಸಿ, ಯತ್ಯಾಶ್ರಮಸ್ವೀಕಾರಮಾಡಿದ ನಮ್ಮ ಕಥಾನಾಯಕರ ವಿರಕ್ತಿಯೇ ಸಾರ್ಥಕನಾಮಧೇಯವನ್ನುಳ್ಳದು. ಹಾಗಲ್ಲದೆ, ಸಕಲ ವಿಷಯಭೋಗಗಳನ್ನೂ

ಮನಸಾರೆ ಅನುಭವಿಸಿ, ಮಕ್ಕಳು ಮರಿಗಳಿಗೆ ಬೇಕಾದಷ್ಟು ಧನಕನಕಾದಿಗಳನ್ನು ಗಳಿಸಿಟ್ಟು, ಸಾಂಸಾರಿಕ ತಾಪತ್ರಯಗಳು ಹತ್ತುಕಡೆಯಿಂದಲೂ ಬಾಧಿಸುತ್ತಿರುವಾಗ್ಗೆ, ಹೆಂಡಿರು ಮಕ್ಕಳೆಂದರೆ ಬಂಧಕಸಾಮಗ್ರಿಗಳೆಂದು ಮನಸ್ಸು ಜಿಗುಪ್ಸಿತವಾಗಿ- ಈ ಕಾಟವು ತಪ್ಪಿದರೆ ಸಾಕೆಂದು-ತಲೆಯನ್ನು ಬೋಳಿಸಿಕೊಂಡು, ಬಣ್ಣದ ವಸ್ತ್ರವನ್ನುಟ್ಟುಕೊಂಡು, ದ್ರವ್ಯಸಂಪಾದನೆಗೆ ಅದೂ ಒಂದು ಗೌರವಯುಕ್ತವಾದ - ಲಾಭದಾಯಕವಾದ ವೃತ್ತಿಯೆಂಬ ಭಾವನೆಯಿಂದ ಸನ್ಯಾಸಗ್ರಹಣಮಾಡಿದರೆ ಅಂಥವರನ್ನು ವಿರಕ್ತರೆನ್ನಬಹುದೆ, ಸನ್ಯಾಸಿಗಳೆನ್ನಬಹುದೆ? ಛೆ, ಮಹನೀಯರಾದ ನಮ್ಮ ಕಥಾನಾಯಕರಂತಹ ವಿರಕ್ತ ಚಕ್ರವರ್ತಿಗಳ ವಿಚಾರವನ್ನು ಹೇಳುವ ಸಂದರ್ಭದಲ್ಲಿ, ಅಂತಹ ಪಾಮರರನ್ನು ಜ್ಞಾಪಿಸಿಕೊಳ್ಳುವುದೂ ಉಚಿತವಲ್ಲ. ಸನ್ಯಾಸದಂತಹ ಪರಮ ಪವಿತ್ರಪೀಠದ ಗೌರವಕ್ಕೇ ಹಾನಿಯನ್ನು ತರುವ ಅಂತಹ ಭ್ರಷ್ಟಯತಿಗಳ ಚರ್ಯೆಗೆ ಶತಶಃ ಧಿಕ್ಕಾರವಿರಲಿ ?

ಬಿಡಾರದಿಂದ ಹೊರಟು ಮಠಕ್ಕೆ ಹೋಗಿದ್ದ ತಮ್ಮ ಯಜಮಾನನಾದ ಘೋಂಡೂರಘುನಾಥರಾಯನು, ಆ ದಿನವೂ ಮಾರನೆಯ ದಿನವೂ ಹಿಂದಿರುಗಿ ಬಾರದೆ ಇದ್ದುದು, ಪರಿವಾರದವರಿಗೆ ಯೋಚನೆಗೆ ಕಾರಣವಾಯಿತು. ಒಡನೆ ಮಠಕ್ಕೆ ಹೋಗಿ ವಿಚಾರಿಸಲು, ತಮ್ಮ ಪ್ರಭುವು ಶಿರೋಮುಂಡನ ಮಾಡಿಸಿಕೊಂಡು, ಕಾಷಾಯವಸ್ತ್ರಗಳನ್ನುಟ್ಟುಕೊಂಡು ಯತಿಯಾದನೆಂಬ ವೃತ್ತಾಂತವು ತಿಳಿಯಬಂದಿತು. ಆ ಸಂಗತಿಯನ್ನು ಕೇಳಿದೊಡನೆಯೇ ಪರಿವಾರದವರು ಭ್ರಾಂತರಾಗಿ, ಏನುಮಾಡಲೂ ತೋರದೆ ಸ್ವಲ್ಪಹೊತ್ತು ಮಂಕರಂತಿದ್ದು, ತರುವಾಯ ಶೀಘ್ರಗಾಮಿಗಳಾದ ಕೆಲಮಂದಿ ಸವಾರರೊಂದಿಗೆ, ಆ ವಾರ್ತೆಯನ್ನು ತಮ್ಮ ಒಡೆಯನ ತಂದೆಯಾದ ರಘುನಾಥರಾಯನ ಬಳಿಗೆ ಕಳುಹಿಸಿದರು. ರಘುನಾಥರಾಯನು, ತನ್ನ ಏಕಮಾತ್ರ ಪುತ್ರನು ಸನ್ಯಾಸತೆಗೆದುಕೊಂಡನು ಎಂಬ ವಾರ್ತೆಯನ್ನು ಕೇಳಿದೊಡನೆಯೇ ಮೂರ್ಛೆ ಬಿದ್ದು, ಆ ಸಂಗತಿಯೇನೆಂದು ಸಂಪೂರ್ಣವಾಗಿ ವಿಚಾರಿಸಿ ತಿಳಿದು, ಅಗಾಧ ವ್ಯಸನಾಕ್ರಾಂತನಾದನು. ಘೋಂಡೂರಾಯನ ತಾಯಿಯೂ ಇತರ ಆಪ್ತೇಷ್ಟರೂ, ಈ ಸಂಗತಿಯನ್ನು ತಿಳಿದು ಅತಿಶಯ ಶೋಕಸಂತಪ್ತರಾಗಿ, ತಮ್ಮ ಮಗನು ಮೃತನಾದನೋ ಎಂಬಂತೆ ಹಾಹಾಕಾರ ಮಾಡತೊಡಗಿದರು.

ಬ್ರಾಹ್ಮಣನಾದರೂ ಯೋದ್ಧಮನೋವೃತ್ತಿಯ ರಘುನಾಥರಾಯನು ಕ್ರೋಧಸಂತಪ್ತ ಹೃದಯನಾಗಿ,- ಅರಿಯದ ತನ್ನ ಮಗನಿಗೆ ಅಲ್ಲಸಲ್ಲದುವನ್ನೆಲ್ಲ ಬೋಧಿಸಿ, ತಲೆಯಬೋಳಿಸಿ ಆಶ್ರಮಕೊಡಿಸಿದ ಆ ಮುದುಕ ಯತಿಯಾರೋ ಅವನನ್ನು ಶಿಕ್ಷಿಸಿ, ತನ್ನ ಮಗನನ್ನು ಕರೆದು ತರುತ್ತೇನೆಂದು, ತನ್ನನ್ನು ಕರೆಯಲು ಬಂದಿದ್ದ ಆ ಸೇವಕರೊಂದಿಗೇ ಹೊರಟು, ಶ್ರೀ ಅಕ್ಷೋಭ್ಯತೀರ್ಥರು ಬೀಡಾರಮಾಡಿದ್ದ ಆ ನದೀತೀರಕ್ಕೆ ಪ್ರಯಾಣಮಾಡಿದನು. ಕಡಗ ಕಂಕಣ ಕುಂಡಲಾದಿ ಆಭರಣಗಳನ್ನಿಟ್ಟು ದಿವ್ಯ ವಸ್ತ್ರಗಳನ್ನು ಉಟ್ಟು ಹೊದ್ದು, ಗಂಧಪುಷ್ಪಾದಿಗಳನ್ನು ಧರಿಸಿ ಮನೋಹರನೆನ್ನಿಸುತ್ತಿದ್ದ ತನ್ನ ಮಗನು, ಶಿರೋಮುಂಡನ ಮಾಡಿಸಿಕೊಂಡು, ಕಾಷಾಯವಸ್ತ್ರವನ್ನು ಧರಿಸಿ, ಪರದೇಶಿಯಂತೆ ಏಕಾಕಿಯಾಗಿ ಮಠದಲ್ಲಿದ್ದ ದೃಶ್ಯವು ಆತನಿಗೆ ಸಹಿಸಲಸದಳವಾಯಿತು. ಕೋಪತಾಪಗಳು ಮಿತಿಮೀರಿದುವು. ಕೋಪಶಿಖಿಯಿಂದ ಜ್ವಲಿಸುತ್ತಿದ್ದ ಆತನಿಗೆ ತಾನು ಮಾಡುತ್ತಿರುವ ಕಾರ್ಯವೇನೆಂಬುದರ ಪರಿಜ್ಞಾನವೇ ಉಂಟಾಗಲಿಲ್ಲ. ಮಠವನ್ನು ಕಂಡೊಡನೆಯೇ, ಕಟಕಟನೆಂದು ಹಲ್ಲುಡಿಯುತ್ತ,-'ಎಲ್ಲಿ ಆ ಸನ್ಯಾಸಿಯೆಲ್ಲಿ?'ಎಂದು ಕೇಳುತ್ತ ಶ್ರೀ ಅಕ್ಷೋಭ್ಯತೀರ್ಥರನ್ನು ಕಂಡೊಡನೆಯೇ, ತನ್ನ ಮನಸ್ಸಿನಲ್ಲಿ ತುಂಬಿದ್ದ ಖೇದ ಸಂತಾಪಗಳೆಲ್ಲವೂ, ಒಂದಾಗಿ ಸೇರಿ ಆತನ ಬುದ್ಧಿಯನ್ನೇ ನಾಶಮಾಡಿಬಿಡಲು, ಅವರು ಪೂಜ್ಯರು, ಯತೀಶ್ವರರು ಎಂಬ ಗೌರವ ಭಾವಮುಂತಾದ ಯಾವುದನ್ನೂ ಲಕ್ಷ್ಯಮಾಡದೆ-'ಎಲೈ ಸನ್ಯಾಸಿಯೇ, ಏನಿದು ನೀನು ಮಾಡಿದ ಕೆಲಸ? ಏನೂ ಅರಿಯದ ನನ್ನ ಮಗನಿಗೆ, ಏನೇನೋ ಬೋಧಿಸಿ ಆಶ್ರಯಕೊಟ್ಟು ಕೂಡಿಸಿದೆಯಾ? ಸಂಪದ್ಯುಕ್ತವಾದ ನನ್ನ ಮನೆತನವನ್ನು ನಾಶಮಾಡುವ ಈ ಕಾರ್ಯಮಾಡೆಂದು ನಿನಗಾರು ಹೇಳಿದರು. ತಂದೆಯಾದ ನನ್ನ ಅನುಮತಿಯಿಲ್ಲದೆ, ಆಪ್ತೇಷ್ಟರ ಒಪ್ಪಿತವಿಲ್ಲದೆ, ವಂಶಕ್ಕೆ ಏಕಮಾತ್ರ ದಿಕ್ಕಾದ ನನ್ನೀ ಮಗನಿಗೆ ಆಶ್ರಮಕೊಟ್ಟುದು ದುರ್ಮಾರ್ಗವೃತ್ತಿಯಲ್ಲವೆ?' ಎಂದು ಮುಂತಾಗಿ ಮನಬಂದಂತೆ ನಿಂದಿಸತೊಡಗಿದನು. ಅಕ್ಷೋಭ್ಯತೀರ್ಥರು ಕೋಪಾಕ್ರಾಂತನಾಗಿರುವ ಆತನೊಂದಿಗೆ ಮಾತನಾಡುವುದು ಉಚಿತವಲ್ಲವೆಂದು ಮೌನವಾಗಿದ್ದರು ಅದನ್ನು ಕಂಡು ಅಲ್ಲೇ ಪಾಠಕ್ಕಾಗಿ ಕುಳಿತಿದ್ದ ಶ್ರೀ ಜಯತೀರ್ಥರು, ಆತ

ನನ್ನು ಕುರಿತು-'ನಮ್ಮ ಗುರುವರ್ಯರಾದ ಶ್ರೀಗಳವರು ನನ್ನನ್ನು ಬಲಾತ್ಕಾರವಾಗಿ ಹಿಡಿದುಕೊಂಡುಬಂದು, ಆಶ್ರಮಕೊಟ್ಟವರಲ್ಲ. ಇದರಲ್ಲಿ ಅವರದೇನೂ ತಪ್ಪಿಲ್ಲ. ಶ್ರೀ ಹರಿಯ ಇಚ್ಛಾನುಸಾರವಾಗಿ ನಾನೇ ಒಪ್ಪಿ ಆಶ್ರಮತೆಗೆದುಕೊಂಡಿದ್ದೇನೆ. ಪೂಜ್ಯರನ್ನು ನಿಂದಿಸಿ, ಏಕೆ ಪಾಪಸಾಧನೆ ಮಾಡಿಕೊಳ್ಳಬೇಕು? ಈ ಸನ್ನಿಧಿಯಲ್ಲಿ ನಿಮ್ಮ ಬಾಯಿಂದ ಇಂತಹ ನೀಚ ಮಾತುಗಳು ಬರಬಾರದು' ಎಂದು ನುಡಿದರು. ಆ ಮಾತುಗಳಿಂದ ಶ್ರೀಗಳವರಲ್ಲಿ ತಪ್ಪಿಲ್ಲವೆಂದು ತೋರಿದರೂ ರಘುನಾಥರಾಯನು ಮುಂದೇನು ಪ್ರತ್ಯುತ್ತರಕೊಡಬೇಕೆಂಬುದು ತೋರದೆ, ಕೆಲಹೊತ್ತು ಸುಮ್ಮನೆ ನಿಂತಿದ್ದನು. ಆಗ ಶ್ರೀ ಅಕ್ಷೋಭ್ಯತೀರ್ಥರು ಆತನನ್ನು ಕುರಿತು -'ರಾಯರೇ, ಈಗಲಾದರೂ ನಿಮ್ಮ ಮನಸ್ಸಿಗೆ ತಿಳಿಯಿತೋ, ನಾವು ನಿಮ್ಮ ಮಗನಿಗೆ ಬಲಾತ್ಕರಿಸಿ ಸನ್ಯಾಸಕೊಟ್ಟು, ತನ್ಮೂಲಕ ನಿಮಗೆ ಅನ್ಯಾಯಮಾಡಲಿಲ್ಲವೆಂಬುದು! ಪುತ್ರಾಭಿಮಾನವನ್ನು ತ್ಯಜಿಸಿ ಸಮಾಧಾನದಿಂದಿರಲು ನಿಮಗೆ ಸಾಧ್ಯವಿಲ್ಲದ ಪಕ್ಷದಲ್ಲಿ, ಈಗಲೂ ನಿಮ್ಮ ಮಗನನ್ನು ನೀವು ಕರೆದುಕೊಂಡು ಹೋಗಲು ನಮ್ಮ ಅಭ್ಯಂತರವಿಲ್ಲ' ಎಂದು ನುಡಿದು ಸುಮ್ಮನಾದರು.

ಶ್ರೀಗಳವರ ಆ ಮಾತನ್ನು ಕೇಳಿ ರಘುನಾಥರಾಯನಿಗೆ ಜೀವಬಂದಂತಾಯಿತು. ಒಡನೆ ತನ್ನ ಬಿಡಾರದಿಂದ ದಿವ್ಯ ವಸ್ತ್ರಾದಿಗಳನ್ನು ತರಿಸಿ ಯತಿಗಳಾಗಿದ್ದ ಶ್ರೀ ಜಯತೀರ್ಥರನ್ನು ಆ ವಸ್ತ್ರಾಭರಣಾದಿಗಳಿಂದ ಸಿಂಗರಿಸಿ, ಪಾಲಕಿಯಲ್ಲಿ ಕೂರಿಸಿಕೊಂಡು ಒಡನೆ ಪ್ರಯಾಣಮಾಡಿ, ಮನೆಯನ್ನು ಸೇರಿದನು. ವಿಚಿತ್ರವೇಷದ ಆ ಯುವಕನನ್ನು ಕಂಡು ಎಲ್ಲರೂ ಅತ್ಯಂತ ಕೌತುಕಪಟ್ಟರು. ರಘುನಾಥರಾಯನು, ವೃದ್ಧನಾದ ಸನ್ಯಾಸಿಯ ಹುಚ್ಚುಹುರುಳು ಬೋಧನೆಗಳಿಂದ ವಿಕಲ್ಪಗೊಂಡಿದ್ದ ತನ್ನ ಮಗನ ಮನಸ್ಸು ಪುನಃ ವಿಷಯಮಗ್ನವಾಗುವಂತೆ ಮಾಡಬೇಕೆಂದು ಇಚ್ಛಿಸಿ, ಋತುಶಾಂತಿ ಪ್ರಸ್ತಕ್ಕೆ ಬಹು ಶೀಘ್ರದಲ್ಲೇ ಮುಹೂರ್ತವನ್ನಿಡಿಸಿ, ಆ ಶುಭಕಾರ್ಯವನ್ನು ವಿಶೇಷ ವೈಭವದಿಂದ ನಡೆಯಿಸಲು ಸಕಲ ಸಾಮಗ್ರಿಗಳನ್ನೂ ಅತಿಶಯ ಪ್ರಮಾಣದಿಂದ ಸಿದ್ಧಗೊಳಿಸಿದನು. ಪ್ರಾತಃಕಾಲದಲ್ಲಿ ನಡೆಯಬೇಕಾದ ಮಂಗಳಸ್ನಾನ, ಹೋಮಾದಿ ಶಾಂತಿಕ್ರಿಯೆಗಳೆಲ್ಲವೂ ವಿಧ್ಯುಕ್ತವಾಗಿ ನಡೆದುವು.

ಶ್ರೀಮಜ್ಜಯತೀರ್ಥರು, ಮಠವನ್ನು ಬಿಟ್ಟು ತಂದೆಯೊಂದಿಗೆ ಬಂದಾಗಿನಿಂದಲೂ ರಘುನಾಥರಾಯನ ಕೈಬೊಂಬೆಯಂತೆ ಕೇವಲ ಅವಶರಾಗಿದ್ದು ಮನೆಯವರು ಯಾವ ಹೊತ್ತಿಗೆ ಏನು ಕೆಲಸವಾಗಬೇಕೆಂದರೆ ಆ ಕೆಲಸಕ್ಕೆ ಸಿದ್ಧರಾಗಿರುತ್ತಿದ್ದರು. ಹೀಗೆಯೇ ಹಸೆಮಣೆಗೆ, ಎಣ್ಣೆಮಜ್ಜನಕ್ಕೆ ರಾತ್ರಿ ಹಗಲುಗಳ ಭೋಜನಕ್ಕೆ, ಯಾವುದಕ್ಕೂ ತಡೆಬಡೆಯಿಲ್ಲದೆ, ಹರಿಚಿತ್ತವಿದ್ದಂತೆ ನಡೆಯಲೆಂದು ಅವರ ಇಷ್ಟಾನುಸಾರವಾಗಿಯೇ ಆಯಾ ಕೆಲಸಗಳನ್ನು ಮಾಡುತ್ತಿದ್ದರು. ಹೀಗೆ ಕೇವಲ ಸೂತ್ರದ ಬೊಂಬೆಯಂತೆ ಕೈಕಾಲುಗಳು ಆಯಾ ಕೆಲಸವನ್ನು ಮಾಡುತ್ತಿದ್ದುವಾದರೂ, ಮನಸ್ಸು ಮಾತ್ರ ಬಾಹ್ಯದ ಯಾವ ಕೆಲಸದೊಂದಿಗೂ ಲಗ್ನವಾಗದೆ, ಮಠದಲ್ಲಿ ಶ್ರೀ ಅಕ್ಷೋಭ್ಯತೀರ್ಥರ - ಶ್ರೀ ರಾಮಚಂದ್ರಸ್ವಾಮಿಯ ಸನ್ನಿಧಿಯಲ್ಲಿದ್ದಾಗ ಇದ್ದಂತೆಯೇ ಪರಿಶುದ್ಧವಾಗಿದ್ದಿತು. ಹಗಲಿನ ಈ ಕಾರ್ಯಗಳೆಲ್ಲವೂ ನಡೆದ ತರುವಾಯ ರಾತ್ರಿ ಮೊದಲೇ ಗೊತ್ತಾಗಿದ್ದ ಮುಹೂರ್ತವನ್ನು ಮೀರದಂತೆ ಆರತೆಅಕ್ಷತೆಗಳೆಲ್ಲವೂ ನಡೆದ ತರುವಾಯ, ಗರ್ಭಾದಾನಕ್ಕೆಂದು ಶ್ರೀಮಜ್ಜಯತೀರ್ಥರನ್ನೂ - ಅವರ *ನವವಧುವನ್ನೂ ಶಯ್ಯಾಗೃಹಕ್ಕೆ ಕಳುಹಿಸಿ, ಮುತ್ತೈದೆಯರು ಹೊರಕ್ಕೆ ಬಂದು ಬಾಗಿಲುಮುಚ್ಚಿಕೊಂಡರು. ಆ ದಿವ್ಯ

---

* ಶ್ರೀಮಜ್ಜಯತೀರ್ಥಯತೀಶ್ವರರಿಗೆ ಪೂರ್ವಾಶ್ರಮದಲ್ಲಿ ಭಾರ್ಯೆಯರು ಇಬ್ಬರಿದ್ದರೋ ಅಥವ ಒಬ್ಬರೋ ಎಂಬ ವಿಷಯದಲ್ಲಿ ಸ್ವಲ್ಪ ಚರ್ಚೆಗೆ ಅವಕಾಶವುಂಟು. ಶ್ರೀಯವರ ಸಾಕ್ಷಾಚ್ಛಿಷ್ಯರಾದ ಶ್ರೀ ವ್ಯಾಸತೀರ್ಥರೆಂಬುವರು ತಮ್ಮ ಗುರುಗಳ ಚರಿತ್ರವನ್ನು 'ಶ್ರೀಜಯತೀರ್ಥವಿಜಯ' ಎಂಬ ಹೆಸರಿನಿಂದ ರಚಿಸಿರುತ್ತಾರೆ. ಅದರಿಂದ ಶ್ರೀಮಟ್ಟೀಕಾರಾಯರಿಗೆ ಪತ್ನಿ ಒಬ್ಬರೇ ಎಂಬುದು ಸಿದ್ಧವಾಗುತ್ತದೆಂದು ಈ ಕೆಳಗಿನ ಶ್ಲೋಕಗಳಿಂದ ತಿಳಿಯಬಹುದಾಗಿದೆ.

ಶ್ಲೋಕ:- ಅಥಸುತಸ್ಯ ವಿವಾಹ ಮಹೋತ್ಸವಂ
ವ್ಯತನುತ ಪ್ರಣಯೀನ ಶುಭಾವಹಮ್
ಪ್ರಣಯಿ ಬಂಧುಜನಸ್ಯ ತದಾಸುತಾಂ
ಸಪರಿಗೃಹ್ಯ ಸುರೂಪ ಗುಣಾನ್ವಿತಾಮ್ ॥ ಸರ್ಗ. ೨ ಶ್ಲೋ. ೧೯.

ಶಯನಗೃಹದಲ್ಲಿ ಹಂಸತೂಲಿಕಾಕಲ್ಪದಂತೆ ಮೃದುತರವಾಗಿದ್ದ ಆ ಶಯ್ಯೆಯಮೇಲೆ ಕುಳಿತೊಡನೆಯೇ ಶ್ರೀಮಜ್ಜಯತೀರ್ಥರು ಸ್ವಸ್ತಿಕಾಸನಾರೂಢರಾಗಿ ಧ್ಯಾನಮಗ್ನರಾಗಿ ಬಿಟ್ಟರು. ಪತ್ನಿಯು ಅವರ ಉಪಚಾರಕ್ಕೆಂದು ಹಾಲು ಹಣ್ಣುಗಳನ್ನೂ ತಾಂಬೂಲವನ್ನೂ ಸಿದ್ಧಗೊಳಿಸಿಕೊಂಡು, ಆವರೆಗೆ ಮೌನವಾಗಿ ಕುಳಿತಿದ್ದ ತನ್ನ ಪತಿಯೆಡೆಗೈದಿ, ಅವುಗಳನ್ನಿತ್ತು ಉಪಚರಿಸಬೇಕೆಂದು ಶಯ್ಯೆಯ ಬಳಿಯನ್ನು ಸೇರಿದಳು. ಆಗ ಆಕೆಗೆ ಶಯ್ಯೆಯಮೇಲೆ

---

ಶ್ಲೋಕ:- ಅಥ ಶಯನನಿಶಾಂತಂ ಯಾಪಯಿತ್ವಾ ಜಯಾರ್ಯಂ
ಕನಕರುಚಿರಭೂಷಾಮಾಪಯಿತ್ವಾ ಸ್ವಯೋಷಾಂ ।
ಯತಿನಿಕಟಮುಪಾಗಾತ್ಸಾಪಿ ಕಾಮಪ್ರಣುನ್ನಾ
ಶಯನ ಮಧಿವಸಂತೀ ರಂತುಕಾಮಾಹಸಂತೀ ॥
ಸರ್ಗ. ೪. ಶ್ಲೋ. ೪೩.

,, ಯತಿಮಪಿದದೃಶೇಸಾಭೋಗಿವತ್ಪೂತ್ಕೃತಂತಂ
ಜ್ವಲನಮಿವತಪಂತಂ ಶೋಭಯಾಸ್ವಾಂಸ್ಪೃಶಂತಂ ॥
ಜ್ವಲಿತತನುರುಪಾಗಾದ್ಘೋಷಯಂತೀಸ್ವಗೇಹಾ
ದ್ಭಯಭರವಿಕ್ಲತಾಂಗೀ ವೇಪಮಾನಾಕೃಶಾಂಗೀ
ಸರ್ಗ. ೪. ಶ್ಲೋ ೪೪.

ಇದರಂತೆಯೇ ಶ್ರೀ ಸಂಕರ್ಷಣಾಚಾರ್ಯರೆಂಬುವರಿಂದ ರಚಿತವಾದ 'ಬೃಹಜ್ಜಯತೀರ್ಥವಿಜಯ'ದಲ್ಲೂ ೩ನೆಯ ಸರ್ಗದ ೩೨-೩೩ ನೆಯ ಶ್ಲೋಕಗಳಲ್ಲಿ ಏಕಪತ್ನಿ ಎಂಬರ್ಥಕ್ಕೇ ಉಲ್ಲೇಖವಿದ್ದು, ೩ನೇ ಸರ್ಗದ ೨೨ ನೆಯ ಶ್ಲೋಕದಲ್ಲಿ ಮಾತ್ರ—

ಶ್ರೀಮನ್ಮಾತಾಪಿತೃಮುಖಜನೇ ಬಾಂಧವೇ ವರ್ತಮಾನೇ
ಕಾಂತಾಯುಗ್ಮೇ ಕಮಲವದನೇ . . . .

ಎಂದು ಹೇಳಲ್ಪಟ್ಟಿದೆ. ಅವರಿಗೆ ಇಬ್ಬರು ಪತ್ನಿಯರೆಂಬುವುದಕ್ಕೆ ಇದೊಂದೇ ಕಾರಣವೆಂದು ತೋರುತ್ತದೆ. ಜಯತೀರ್ಥರ ಸಾಕ್ಷಾಚ್ಛಿಷ್ಯರೇ-ತಮ್ಮ ಗುರುಗಳಿಗೆ ಏಕಪತ್ನಿಯಿದ್ದರೆಂದು ಹೇಳಿರುವಾಗ, ಬೃಹಜ್ಜಯತೀರ್ಥ ವಿಜಯದ ಈ ವಾಕ್ಯವನ್ನು ನಂಬುವುದು ಪ್ರಕೃತ ತೋರ

ಕಣ್ಣುಮುಚ್ಚಿ ಕುಳಿತಿದ್ದ ಆ ತಪೋಧನರ ತಲೆಯಮೇಲೆ, ಏಳು ಹೆಡೆಗಳ ಒಂದು ಘಟಸರ್ಪವು, ಫೂತ್ಕಾರಮಾಡುತ್ತಾ, ಕಚ್ಚುವುದಕ್ಕೆ ಬರುವಂತೆ ಭಯಂಕರ ದೃಷ್ಟಿಯಿಂದ ತನ್ನನ್ನೇ ನೋಡುತ್ತಲೂ ಇದ್ದಂತೆ ಕಾಣಿಸಿತು. ಒಡನೆ ಭಯಾಕ್ರಾಂತಳಾಗಿ ಚೀತ್ಕಾರಮಾಡಿ ನೆಲದಮೇಲೆ ಬಿದ್ದು ಸ್ವಲ್ಪಹೊತ್ತಿನಮೇಲೆ ಎದ್ದು ಮಂಚದಕಡೆ ನೋಡಲಾಗಿ, ತನ್ನ ಪತಿಯು ಅಗ್ನಿಜ್ವಾಲೆಯಂತೆ ದೇದೀಪ್ಯಮಾನರಾಗಿ ಪ್ರಕಾಶಿಸುತ್ತಿರುವಂತೆ ಕಾಣಿಸಿದರು. ಅಪೂರ್ವವಾದ ಈ ನೋಟಗಳನ್ನುನೋಡಿ ಭಯಗೊಂಡು, ಅಲ್ಲಿ ನಿಲ್ಲಲಾರದೆ, ಬಾಗಿಲು - ಬಾಗಿಲೆಂದು ಅಟಿಕೊಳ್ಳಲು, ಹೊರಗಿದ್ದವರು

— — — — — — — — —

ವುದಿಲ್ಲ. ಅಲ್ಲದೆ, ಇನ್ನೂ ಕೇವಲ ತಾರುಣ್ಯದಲ್ಲಿ ಸಂಸಾರ ಪ್ರವೇಶಕಾಲದಲ್ಲೇ ಇಬ್ಬರು ಕನ್ಯೆಯರನ್ನು ಲಗ್ನಮಾಡಿವುದೂ, ಅವರಿಗೆ ಸ್ತ್ರೀಯೊಂದಿಗೆ ಪ್ರಥಮ ಸಮಾಗಮಕಾಲದಲ್ಲೇ ಈ ಸ್ತ್ರೀಯರನ್ನೂ ಏಕಕಾಲದಲ್ಲೇ ಶಯ್ಯಾಗೃಹಕ್ಕೆ ಕಳುಹಿಸಿದರೆಂಬುದು ಸಮಂಜಸವೆಂದೂ, ಲೌಕಿಕಕ್ಕೆ ಸಾಧುವೆಂದೂ ತೋರುವುದಿಲ್ಲ. ಈ ಕಥದ ಪ್ರಾರಂಭಕ್ಕೆ ಕೊಟ್ಟಿರುವ ಚಿತ್ರವು, ಬೃಹಜ್ಜಯತೀರ್ಥ ವಿಜಯ ಈ ಶ್ಲೋಕದ ಮತ್ತು ಪ್ರಚಾರದಲ್ಲಿರುವ 'ದಯದಿ ಪಾಲಿಸೋ ಜಯತೀರ್ಥರಾಯಾ' ಮುಂತಾದ ಕೀರ್ತನೆಗಳ ಆಧಾರದಿಂದ ರಚಿತವಾದುದಾಗಿತೋರುತ್ತದೆ. ಹಾಗೆ ಅವರಿಗೆ ಇಬ್ಬರು ಭಾರ್ಯೆಯರಿದ್ದರೂ ಇಬ್ಬರನ್ನ ತ್ಯಜಿಸಿದರು ಎಂಬ ವಿಚಾರವನ್ನೇ ಒತ್ತಿ ಹೇಳಬೇಕಾಗಿದ್ದಲ್ಲಿ, ಅವರಗ್ನಿಸಾಕ್ಷಿಕವಾಗಿ ಕೈಹಿಡಿದ ತಮ್ಮ ಗೃಹಲಕ್ಷ್ಮಿಯನ್ನೂ, ತಮಗೆ ಪಿತೃಪಾಪರ್ಯವಾಗಿ ಪ್ರಾಪ್ತವಾಗಿದ್ದ ರಾಜ್ಯ-ಐಶ್ವರ್ಯ ಎಂಬ ಭಾಗ್ಯಲಕ್ಷ್ಮಿಯನ್ನೂ ವಿರಕ್ತರಾಗಿ ತ್ಯಜಿಸಿಸಿದರು ಎಂದು ಹೇಳಿದರೆ ಏನೂ ಪ್ರತ್ಯವಾಯವಾಗುವುದಿಲ್ಲ. ಪ್ರತ್ಯಕ್ಷ ಅವರ ಬಳಿಯಲ್ಲೇ- ಅವರ ನಿಕಟಸಂಬಂಧದ ಇದ್ದು, ಅವರ ಸಂಬಂಧವಾದ ಸಕಲ ವಿಚಾರಗಳನ್ನೂ ಚೆನ್ನಾಗಿ ಪರಿಗೊಂಡಿರುವರೆಂದು ನಂಬಬಹುದಾದ ಅವರ ಶಿಷ್ಯರು - ಶ್ರೀ ವ್ಯಾಸತೀರ್ಥವಚನದಲ್ಲಿ ವಿಶ್ವಾಸವಿಡುವುದಾದರೆ, ಅವರು ಪಾಣಿಗ್ರಹಣಮಾಡಿದುದಬ್ಬ ಪತ್ನಿಯನ್ನೇ ಎಂದು ನಿಸ್ಸಂಶಯವಾಗಿ ಹೇಳಬಹುದಾಗಿದೆ.

ಇದೇನು ಅನಾಹುತವೋ ಎಂದು ಬಾಗಿಲು ತೆರೆದರು. ಒಡನೆ ಭಯಕ್ಕೆ ಕಾರಣವೇನೆಂದು ಕೇಳಲು, ಗರ್ಭಿಣಿಯಾದ ಆ ಯುವತೀಮಣಿಯು ತಾನು ನೋಡಿದ ಅಪೂರ್ವ ನೋಟಗಳನ್ನು ಕುರಿತು ವಿವರಿಸಿದಳು. ಆ ಮಾತುಗಳನ್ನು ಕೇಳಿದ ಸಕಲರೂ ಪರಮಾಶ್ಚರ್ಯಪಟ್ಟು, ಶಯನಗೃಹ ವನ್ನು ಹೊಕ್ಕು ನೋಡಲು, ಎಂದಿನಂತೆ ಧ್ಯಾನಮಗ್ನರಾಗಿ ಕುಳಿತಿದ್ದ ಯೋಗೀಶ್ವರರಾದ ಜಯತೀರ್ಥಮುನಿವರ್ಯರು ದೃಷ್ಟಿಗೋಚರರಾದರು. ಬಂಧುಜನರೆಲ್ಲರೂ, ಆ ಯತೀಶ್ವರರ ಮಹಿಮೆಯನ್ನು ಕೊಂಡಾಡಿದರು. ಯತ್ಯಾಶ್ರಮದಲ್ಲಿ ದೀಕ್ಷಿತರಾದ ಅವರನ್ನು ಕರೆತಂದು ಸಂಸಾರಿಯಾಗುವಂತೆ ತಂದೆಯು ನಿರ್ಬಂಧಗೊಳಿಸಿದುದಕ್ಕಾಗಿ ಹೀಗಾಯಿತೆಂದು ಮತ್ತೆ ಕೆಲವರೆಂ ದರು. ಎಲ್ಲರೂ ಆಶ್ಚರ್ಯ ಸಂತೋಷಗಳ ಭರದಲ್ಲಿ, ರಘುನಾಥರಾಯನನ್ನು -ಅಂತಹ ಮಹಾಮಹಿಮನಾ ಮಗನನ್ನು ಪಡೆದುದಕ್ಕಾಗಿ ಅಭಿನಂದಿಸ ಬೇಕೋ ಅಥವ ಸಂಸಾರಕೆ ಇಂತಹ ಆಪತ್ತು ಒದಗಿದುದಕ್ಕಾಗಿ ಆತನ ವಿಷಯದಲ್ಲಿ ಅನುತಾಪಪಡಬೇಕೋ ತಿಳಿಯದೆ, ತಮ್ಮ ತಮ್ಮ ಮನಬಂ ದಂತೆ ಹೇಳಿಕೊಂಡು ತೊಲಗಿರು ಆ ದಿನ ರಾತ್ರಿಯೇ ರಘುನಾಥರಾಯನಿ ಗೊಂದು ಸ್ವಪ್ನವಾಗಿ ಅದರ-' ಎಲೋ, ನಿನ್ನೀ ಮಗನು ಈ ಕೆಲಸಕ್ಕಾ ಗಿಯೇ ಜನ್ಮವೆತ್ತಿ ಬಂದಿನಾದುದರಿಂದ ಈ ಆಶ್ರಮವನ್ನು ಕೆಡಿಸಲು ಪ್ರಯತ್ನಮಾಡಬೇಡ. ಜೋ' ಎಂದು ಹೇಳಿದಂತಾಯಿತು. ರಘುನಾಥ ರಾಯನು ಎಚ್ಚತ್ತು ಏನಾಡಬೇಕೆಂದು ತೋರದೆ, ವ್ಯಸನವು ಮೇರೆ ಮೀರುವಂತಿರಲು -' ಅಕ್ಕ! ನಾನಿನ್ನೇನುಮಾಡಲಿ? ಯಾವ ದೇವರಿಗೆ ಮರೆಬೀಳಲಿ? ನನಗಿನ್ನಾರಿಕ್ಕು? ವೃದ್ಧಾಪ್ಯದಲ್ಲಿ ಹುಟ್ಟಿದ ಈ ಒಬ್ಬ ಮಗನೂ ಹೀಗಾಗಬೇಕೆ?, ಇದು ದೈವಸಂಕಲ್ಪವಲ್ಲದೆ ಬೇರೇನು? ಹೀಗೆ ವಿಧಿಯೇ ನನ್ನ ತಲೆಮೇಲೆ ಕಲ್ಲೆತ್ತಿಹಾಕಿ, ನಮ್ಮ ವಂಶವನ್ನು ಮುಳುಗಿಸಬೇಕೆಂದು ಕಂಕೊಟ್ಟಿರುವಲ್ಲಿ ಹುಲುಮನುಜನಾದ ನಾನೇನು ಮಾಡಬಲ್ಲೆನು?" ಎಂದಮುಂತಾಗಿ ಶೋಕಿಸುತ್ತಾ, ನಿರಾಸೆಯಿಂದ ಮುಂದೇನುಮಾಡಲೆಂದು ಮಗನನ್ನೇ ಪ್ರಶ್ನಿಸಿದನು ಜಯತೀರ್ಥರು -ನನ್ನನ್ನು ಎಂದಿನಂತೆ ನಗುರುಗಳಬಳಿಗೆ ಕಳುಹಿಸಿಬಿಡಿರೆಂದು ನುಡಿದು ಸುಮ್ಮನಾದರು. ತರುವಾಯುಪಾಯರಹಿತನಾಗಿ, ಆ ಮಗನನ್ನು ಹಿಂದೆ

ಕರೆತಂದಿದ್ದಂತೆಯೇ ಪಾಲಕಿಯಲ್ಲಿ ಕುಳ್ಳಿರಿಸಿಕೊಂಡು, ಅಕ್ಷೋಭ್ಯತೀರ್ಥರ ಬಳಿಗೆ ಪ್ರಯಾಣಮಾಡಿ, ಅವರ ಪಾದಗಳಿಗೆ ಸಾಷ್ಟಾಂಗನಮಸ್ಕಾರಮಾಡಿ, 'ಸ್ವಾಮಿಾ, ನಾನು ತಮ್ಮ ಪಾದಕ್ಕೆ ಮಹಾಪರಾಧಮಾಡಿದ್ದೇನೆ. ನನ್ನ ಮಗನಮೇಲಿನ ವ್ಯಾಮೋಹೋದ್ರೇಕದಿಂದ ದೇಹದಮೇಲೆ ಸ್ಮೃತಿತಪ್ಪಿದಂತಾಗಿ, ಹಲವು ನೀಚಮಾತುಗಳಿಂದ ತಮ್ಮನ್ನು ನಿಂದಿಸಿದ್ದೇನೆ. ನನ್ನ ಸರ್ವಾಪರಾಧಗಳನ್ನೂ ಕ್ಷಮಿಸಿ ದಯಮಾಡಿ ಕಾಪಾಡಬೇಕು' ಎಂದು ಪುನಃ ಪುನಃ ನಮಸ್ಕರಿಸುತ್ತಾ, ಮನೆಯಲ್ಲಿ ನಡೆದ ಸಕಲ ವೃತ್ತಾಂತಗಳನ್ನೂ ನಿವೇದಿಸಿದನು. ಶ್ರೀ ಅಕ್ಷೋಭ್ಯತೀರ್ಥರು ಈ ವಿಚಾರಗಳನ್ನೆಲ್ಲ ಜ್ಞಾನದೃಷ್ಟಿಯಿಂದ ಈ ಮೊದಲೇ ತಿಳಿದವರಾಗಿದ್ದುದರಿಂದ, ಆತನನ್ನು ಉಚಿತ ವಚನಗಳಿಂದ ಸಮಾಧಾನಗೊಳಿಸಿ, ಕೇವಲ ಶ್ರೀಹರಿಸಂಕಲ್ಪಕ್ಕೆ ಬದ್ಧವಾಗಿ ಸಾಗುತ್ತಿರುವ ಈ ಸಂಸಾರದಲ್ಲಿನ ಮೇಲುಕೀಳುಗಳು ಸುಖದುಃಖಗಳು, ಮುಂತಾದುವುಗಳಿಗಾಗಿ ಹಿಗ್ಗಿ ಮರುಗದೆ, ಕ್ರಮಕ್ರಮವಾಗಿ ವೈರಾಗ್ಯಭಾವವನ್ನು ಅಭಿವೃದ್ಧಿಪಡಿಸಿಕೊಳ್ಳಬೇಕೆಂದು ಹಿತಬೋಧೆಮಾಡಿ, ಫಲಮಂತ್ರಾಕ್ಷತೆಗಳನ್ನು ಅನುಗ್ರಹಿಸಿ, ಆತನನ್ನು ಹಿಂದಕ್ಕೆ ಮನೆಗೆ ಕಳುಹಿಸಿದರು.

ಸನ್ಯಾಸಸ್ವೀಕಾರವಾದಮೇಲೂ, ಮೇಲ್ಕಂಡಂತೆ ಬಲವಂತವಾಗಿ ನಿಷೇಕಸಂಬಂಧದಿಂದ ಕೆಲವು ಗೃಹಸ್ಥಧರ್ಮದ ಕರ್ಮಗಳು ನಡೆಯಿಸಲ್ಪಟ್ಟುದರಿಂದ ತದ್ದೋಷಪರಿಹಾರಾರ್ಥವಾಗಿ, ಶ್ರೀಮಜ್ಜಯತೀರ್ಥರಿಗೆ ಕೆಲವು ವಿಧ್ಯುಕ್ತ ಪ್ರಾಯಶ್ಚಿತ್ತಗಳನ್ನು ಮಾಡಿಸಿ, ಶ್ರೀ ಅಕ್ಷೋಭ್ಯತೀರ್ಥರು, ಅವರನ್ನು ಪುನಃ - ಶ್ರೀಮನ್ಮಧ್ವಾಚಾರ್ಯಕರಾರ್ಚಿತ ಶ್ರೀಮೂಲರಾಮಾರ್ಚನೆಯ ಕಾರ್ಯದಲ್ಲಿ ನಿಯೋಜಿಸಿದರು. ಹೀಗೆ ಆಕಸ್ಮಿಕವಾಗಿ ಮಧ್ಯದಲ್ಲಿ ಪ್ರಾಪ್ತನಾಗಿದ್ದ ವಿಘ್ನವು ಶ್ರೀಹರಿಕೃಪೆಯಿಂದ ನಿವಾರಣೆಯಾಗಲು ಶ್ರೀಮಜ್ಜಯತೀರ್ಥರು, ಉಜ್ವಲತೇಜಸ್ಸಂಪನ್ನರಾಗಿ, ಮುಂದೆ ತಮ್ಮ ಸನ್ಯಾಸಧರ್ಮದಲ್ಲಿ ಲೇಶಮಾತ್ರವೂ ವ್ಯತ್ಯಾಸವನ್ನು ತಂದುಕೊಳ್ಳದೆ ಶ್ರೀಹರಿ-ಗುರುಸೇವಾತತ್ಪರರಾಗಿದ್ದರು.



## ಅಧ್ಯಾಯ ೬ 'ವಾದಿನಿಗ್ರಹಣ-ಗ್ರಂಥರಚನೆ'

ಶ್ರೀಮನ್ಮಧ್ವಾಚಾರ್ಯರು ಶ್ರೀವೇದವ್ಯಾಸರನ್ನು ಅನುಸರಿಸಿ ಸೇವಿಸಿಕೊಂಡಿದ್ದಂತೆ, ಶ್ರೀಮಜ್ಜಯತೀರ್ಥರಾದರೂ ಶ್ರೀ ಅಕ್ಷೋಭ್ಯತೀರ್ಥರನ್ನು ಗುರುವರ್ಯರೆಂದು ನಂಬಿ, ವಿನಯವಿಧೇಯತೆಗಳಿಂದ ಸೇವೆಮಾಡಿಕೊಂಡಿದ್ದರು. ಶ್ರೀ ಅಕ್ಷೋಭ್ಯತೀರ್ಥರು, ತಮ್ಮ ಶಿಷ್ಯರ ಚೇತನಯೋಗ್ಯತೆಯನ್ನು ತಿಳಿದವರಾದುದರಿಂದ ಅವರಲ್ಲಿ ಪರಮವಿಶ್ವಾಸವನ್ನಿಟ್ಟು, ತಮ್ಮ ತಪೋಮಹಿಮೆಯಿಂದ ಸಕಲಶಾಸ್ತ್ರಪುರಾಣಾದಿಗಳ ರಹಸ್ಯಗಳೂ ಕರತಲಾಮಲಕವಾಗಿ ಬೋಧವಾಗುವಂತೆ ಅನುಗ್ರಹಮಾಡಿದರು. ಜಯತೀರ್ಥರು ಅತ್ಯಲ್ಪಕಾಲದಲ್ಲೇ ಅದ್ವಿತೀಯ ಪಾಂಡಿತ್ಯದಿಂದಲೂ, ಗ್ರಂಥರಚನಾಸಾಮರ್ಥ್ಯದಿಂದಲೂ ಸಕಲ ವಿದ್ವಾಂಸವೃಂದದ ಗಮನವನ್ನೂ ಆಕರ್ಷಿಸತಕ್ಕವರಾಗಿ, ತಮ್ಮ ಗುರುಗಳ ಮನಸ್ಸಿಗೆ ಪರಮಾನಂದವನ್ನುಂಟುಮಾಡುತ್ತಿದ್ದರು.

ಶ್ರೀಮಜ್ಜಯತೀರ್ಥರ ವಿದ್ಯಾವಿನಯಾದಿಗಳ ಕೀರ್ತಿಸೌರಭವು ದಶದಿಕ್ಕುಗಳಿಗೂ ವ್ಯಾಪಿಸುತ್ತಿರಲು, ಅದ್ವೈತಶಾಸ್ತ್ರ ಪಂಡಿತರನೇಕರು ಅವರಲ್ಲಿ ಬಂದು ವಾದಮಾಡಲಿಚ್ಛಿಸಿದರು. ಹಾಗೆ ಅವರೊಂದಿಗೆ ಪ್ರಾರಂಭಕ್ಕೆ ವಾದಮಾಡಿದವರಲ್ಲಿ ಭೈರವಸೋಮಯಾಜಿಗಳೆಂಬುವರೊಬ್ಬರು ಸುಪ್ರಸಿದ್ಧರು. ಜಯತೀರ್ಥರು ತಮ್ಮ ವಾದಶಕ್ತಿಯಿಂದಲೂ, ಯುಕ್ತಿಯುಕ್ತವಾದ ಶಾಸ್ತ್ರಾಧಾರ ಪ್ರಮಾಣಗಳನ್ನು ಕೊಟ್ಟು ಪರವಾದಿಯ ಪ್ರಶ್ನಕೋಟಿಗಳನ್ನು ಖಂಡಿಸುವ ಜಾಣ್ಮೆಯಿಂದಲೂ, ಆತನನ್ನು ನಿರುತ್ತರನನ್ನಾಗಿಸಿ ಗೆಲಿದು ದ್ವೈತಸಿದ್ಧಾಂತವೇ ಸತ್ಯವಾದುದೆಂದು ಸ್ಥಾಪಿಸಿದರು ತಮ್ಮ ಶಿಷ್ಯರ ಈ ಪ್ರತಿಭೆಯನ್ನು ಕಂಡು ಶ್ರೀ ಅಕ್ಷೋಭ್ಯತೀರ್ಥರು ಪರಮಸಂತೋಷಭರಿತರಾಗಿ, ಮಠದ ಸರ್ವಾಧಿಪತ್ಯವನ್ನೂ ತಮ್ಮಾ ಶಿಷ್ಯೋತ್ತಮರ ಅಧೀನಕ್ಕೊಳಪಡಿಸಿ, ತಾವು ಯರಗೋಳವೆಂಬ ಪರ್ವತದ ಒಂದು ಗುಹೆಯನ್ನಾಶ್ರಯಿಸಿ ತಪೋನಿರತರಾಗಿರುತ್ತಿದ್ದರು. ಶ್ರೀ ಜಯತೀರ್ಥರಾದರೋ, ಮಧ್ವಮತಸಿದ್ಧಾಂತಪ್ರಚಾರವನ್ನು ಕುರಿತು, ತಮ್ಮ ಗುರುಗಳಿಂದ ಆದ ಆಜ್ಞೆಯನ್ನನುಸರಿಸಿ ಸಂಚಾರಕ್ಕಾಗಿ ಹೊರಟು, ಅಲ್ಲಲ್ಲಿ ಎದು

ರಾದ ವಾದಿಗಳನ್ನು ಜಯಿಸಿ, ತಪ್ತಮುದ್ರಾಧಾರಣೆಯಿಂದ ಶಿಷ್ಯವೃಂದವನ್ನು ಪವಿತ್ರರನ್ನಾಗಿಮಾಡುತ್ತ, ತಮ್ಮ ದಿವ್ಯ ಬೋಧನೆಗಳಿಂದ ಸಜ್ಜನರ ಮನಸ್ಸಿನಲ್ಲಿದ್ದ ಸಂಶಯಗಳನ್ನು ದೂರೀಕರಿಸಿ, ಶ್ರೀಹರಿಸರ್ವೋತ್ತಮತ್ವ ಮತವನ್ನು ಪ್ರಚಾರಮಾಡುತ್ತ, ಆಗಾಗ್ಗೆ ತಮ್ಮ ಗುರುಗಳ ಸಾನ್ನಿಧ್ಯಕ್ಕೆ ಪ್ರಯಾಣಮಾಡಿ, ಅವರಿಗೆ ತಮ್ಮ ಕಾರ್ಯಗಳನ್ನು ಕುರಿತು ವಿಜ್ಞಾಪಿಸುತ್ತಾ ಇದ್ದರು ಹರಿವಾಯುಗಳ ಅನುಗ್ರಹದಿಂದ, ತಮ್ಮ ಕರಕಮಲ ಸಂಜಾತರಾದ ಶ್ರೀ ಜಯತೀರ್ಥರು ಅಷ್ಟುಮಟ್ಟಿಗೆ ಅಭಿವೃದ್ಧಿಗೆ ಬಂದುದನ್ನು ಕಂಡು ಸಂತುಷ್ಟರಾದ ಶ್ರೀ ಅಕ್ಷೋಭ್ಯತೀರ್ಥರು, ಅವರಿಗೆ-'ನೀವು ಸರ್ವಜ್ಞಾಚಾರ್ಯಕೃತ ಸರ್ವಮೂಲ ಗ್ರಂಥಗಳಿಗೆ ಟೀಕಾರಚನೆಮಾಡಿರಿ' ಎಂದು ಆಜ್ಞಾಪಿಸಿದರು.

ಶ್ರೀಮಜ್ಜಯತೀರ್ಥರು ಗುರ್ವಾಜ್ಞೆಯನ್ನನುಸರಿಸಿ ಸರ್ವಮೂಲ ಗ್ರಂಥಗಳಿಗೆ ಟೀಕಾರಚನೆಮಾಡಲು ಉದ್ಯೋಗಿಸಿದ ವೇಳೆಯಲ್ಲಿ ಅವರಿಗೆ ವಿದ್ಯಾಭಿಮಾನಿಯಾದ ಸರಸ್ವತೀದೇವಿಯ ಅನುಗ್ರಹವಾಯಿತೆಂಬ ವಿಚಾರವನ್ನು ಕುರಿತು, ಶ್ರೀ ವ್ಯಾಸತೀರ್ಥಕೃತ ಜಯತೀರ್ಥ ವಿಜಯದಲ್ಲಿ ಒಂದು ವಿಚಿತ್ರ ಸಂಗತಿಯು ಹೇಳಲ್ಪಟ್ಟಿದೆ. ಶ್ರೀಗಳು ಭೀಮರಥೀತೀರದಲ್ಲಿ ಒಂದಾನೊಂದು ಸರಸ್ವತೀ ದೇವಾಲಯದಲ್ಲಿಳಿದುಕೊಂಡು ತಮ್ಮ ಗುರುಗಳ ಆಜ್ಞೆಯನ್ನು ನೆರವೇರಿಸುವಷ್ಟು ಶಕ್ತಿಸಾಮರ್ಥ್ಯಗಳನ್ನು ತಮಗೆ ಅನುಗ್ರಹಿಸಬೇಕೆಂದು, ತಮ್ಮ ಉಪಾಸ್ಯಮೂರ್ತಿಯಾದ ಶ್ರೀರಾಮಚಂದ್ರನನ್ನೂ ಶ್ರೀ ವಾಯುದೇವರನ್ನೂ ಪ್ರಾರ್ಥಿಸುತ್ತಿರಲು, ಧ್ಯಾನಮಗ್ನರಾಗಿ ದೇಹಪರವಶರಾಗಿದ್ದ ಅವರಿಗೆ ಸರಸ್ವತೀದೇವಿಯು ಪ್ರತ್ಯಕ್ಷಳಾಗಿ ಒಂದು ಕಂಠಾಣಿಯನ್ನೂ ಒಂದು ಅಡಕೆಯ ಗೋಟನ್ನೂ ಕೊಟ್ಟು ಅದೃಶ್ಯವಾದಳಂತೆ! ತಮ್ಮ ಧ್ಯಾನದಲ್ಲಿ ಅಕಸ್ಮಾತ್ತಾಗಿ ದೃಗ್ಗೋಚರಳಾದ ಆ ತೇಜೋಮಯ ಮೂರ್ತಿಯು ಒಡನೆ ಅಂತರ್ಧಾನವಾದುದನ್ನು ಕಂಡು ಗಾಬರಿಗೊಂಡಂತಾಗಿ ಅವರು ಬಹಿರ್ಮುಖರಾಗಲು ಕಂಠಾಣಿಯೂ ಅಡಕೆಯಗೋಟೂ ಕೈಯಲ್ಲಿದ್ದುದನ್ನು ಕಂಡು ಪರಮಾನಂದಗೊಂಡು, ತಮ್ಮ ಕಾರ್ಯವು ಭಗವಚ್ಚಿತ್ತಕ್ಕೆ ಬಂದಿತೆಂದು ಭಾವಿಸಿ, ಶ್ರೀ ಹರಿಸ್ಮರಣಪೂರ್ವಕ ಗ್ರಂಥರಚನೆಗೆ ಪ್ರಾರಂಭಿಸಿದರು.

ಶ್ರೀಮಜ್ಜಯತೀರ್ಥರು ಶ್ರೀಮನ್ಮಧ್ವಾಚಾರ್ಯರ ಶ್ರೀಮದ್ಬ್ರಹ್ಮ ಸೂತ್ರಭಾಷ್ಯಕ್ಕೆ **ತತ್ವಪ್ರಕಾಶಿಕಾ** ಎಂಬ ಹೆಸರಿನಿಂದಲೂ, ಶ್ರೀ ಗೀತಾ ಭಾಷ್ಯಕ್ಕೆ **ಪ್ರಮೇಯದೀಪಿಕಾ** ಎಂಬ ಹೆಸರಿನಿಂದಲೂ, ಶ್ರೀ ಗೀತಾ ತಾತ್ಪರ್ಯಕ್ಕೆ **ನ್ಯಾಯದೀಪಿಕಾ** ಎಂಬ ಹೆಸರಿನಿಂದಲೂ ವ್ಯಾಖ್ಯಾನಗಳನ್ನೂ ಅಣುವ್ಯಾಖ್ಯಾನವೆಂಬ ಗ್ರಂಥಕ್ಕೆ ಶ್ರೀಮನ್ನ್ಯಾಯಸುಧಾ ಎಂಬ ಹೆಸರಿನಿಂದ ಟೀಕೆಯನ್ನೂ ರಚಿಸಿದರು ಅಲ್ಲದೆ, ಶ್ರೀಮದಾಚಾರ್ಯರ, ತತ್ವಸಂಖ್ಯಾನ, ತತ್ವವಿವೇಕ, ತತ್ತ್ವೋದ್ಯೋತ, ಮಾಯಾವಾದ ಖಂಡನ, ಈ ಗ್ರಂಥಗಳಿಗೆ ವಿವರಣೆಯನ್ನು ರಚಿಸಿ ಅವುಗಳ ಪಾಠವನ್ನು ಸುಬೋಧವನ್ನಾಗಿಸಿದರು. ಮತ್ತು ಪ್ರಮಾಣಲಕ್ಷಣಾದಿ ಗ್ರಂಥಗಳಿಗೆ ವ್ಯಾಖ್ಯಾನಮಾಡಿ, ಋಗ್ಭಾಷ್ಯ, ನ್ಯಾಯವಿವೃತ್ತಿ, ಕರ್ಮನಿರ್ಣಯ, ಷಟ್ಪ್ರಶ್ನೋಪನಿಷದ್ಭಾಷ್ಯ, ಈಶಾವಾಸ್ಯೋಪನಿಷದ್ಭಾಷ್ಯ ಮುಂತಾದ ಗ್ರಂಥಗಳಿಗೆಲ್ಲ ಟೀಕೆಗಳನ್ನು ರಚಿಸಿದರು. ಅಲ್ಲದೆ, ಪ್ರಮಾಣಪದ್ಧತಿ, ವಾದಾವಳಿ, ಪದ್ಯಮಾಲಾ ಎಂಬ ಮೂರು ಸ್ವತಂತ್ರ ಗ್ರಂಥಗಳನ್ನು ರಚನೆಮಾಡಿದರೆಂದೂ ಪ್ರಖ್ಯಾತವಾಗಿದೆ. ಶ್ರೀಮಜ್ಜಯತೀರ್ಥರ ಟೀಕಾ-ವ್ಯಾಖ್ಯಾನಗಳ ಸಹಾಯವಿಲ್ಲದಿದ್ದರೆ, ಶ್ರೀ ಸರ್ವಜ್ಞರಾಯರ ಗ್ರಂಥಗಳು, ಚಿಪ್ಪಿನಾರುಗಳ ಒಳಗಡಗಿರುವ ಕೊಬ್ಬರಿಯಂತೆ ಲೋಕಕ್ಕೆ ಸುಲಭಸಾಧ್ಯವಾಗುತ್ತಿರಲಿಲ್ಲವೆಂಬುದು ಸಾಮಾನ್ಯರ ಮಾತಲ್ಲ - ಪಂಡಿತಾಭಿಪ್ರಾಯ. ಹೀಗಿರುವಲ್ಲಿ ಶ್ರೀಮಜ್ಜಯತೀರ್ಥರಿಂದ ಶ್ರೀಮಧ್ವಾಚಾರ್ಯಕೃತಗ್ರಂಥಗಳಿಗೂ, ದ್ವೈತಸಿದ್ಧಾಂತಕ್ಕೂ, ತನ್ಮೂಲಕ ಲೋಕಕ್ಕೂ ಆಗಿರುವ ಅನುಪಮ ಉಪಕಾರವನ್ನು ಇಷ್ಟೇ ಎಂದು ನಮ್ಮ ಕ್ಷುದ್ರಲೇಖನಿಯು ಎಷ್ಟುಮಾತ್ರ ಹೊಗಳಿ ನಿರ್ಣಯಿಸೀತು ?

ಶ್ರೀಮಜ್ಜಯತೀರ್ಥರು ಹೀಗೆ ಅಗಾಧ ಪರಿಶ್ರಮಮಾಡಿ, ತಮ್ಮ ಗುರುದರ್ಶನಮಾಡಿ, ಆ ಗ್ರಂಥಗಳನ್ನು ಅವರಿಗೆ ಶ್ರವಣಮಾಡಿಸಿ ಸಮರ್ಪಿಸಬೇಕೆಂದು ಉದ್ದೇಶಿಸಿ ಯರಗೋಳಗುಹೆಗೆ ಪ್ರಮಾಣಮಾಡಿದ್ದರು. ಆ ಪರ್ವತದ ಒಂದಾನೊಂದು ಗುಹೆಯೊಳಗಡೆ ಮನೋಹರವಾಗಿದ್ದ ಒಂದಾನೊಂದು ನದೀತೀರದ ಪ್ರಶಾಂತಸ್ಥಳದಲ್ಲಿ ಶ್ರೀ ಅಕ್ಷೋಭ್ಯತೀರ್ಥರು ತಪೋನಿರತರಾಗಿ ಕುಳಿತಿರಲು, ಶ್ರೀಜಯತೀರ್ಥರು ಅವರನ್ನು ಕಂಡು ಭಕ್ತಿಭಾವದಿಂದ ನಾರಾಯಣ ಸ್ಮರಣಪೂರ್ವಕ ನಮಸ್ಕಾರಮಾಡಿ, ಅವರ ಆಜ್ಞೆ

ಯಿಂದ ಸಮೀಪದಲ್ಲಿ ಕುಳಿತು, ತಮ್ಮ ವ್ಯಾಖ್ಯಾನಗಳನ್ನೆಲ್ಲ ಪಠಿಸಿ ಅವರಿಗೆ ಶ್ರವಣಮಾಡಿಸಿದರು. ಗುರುಗಳು ಅವುಗಳನ್ನು ಸಾವಧಾನವಾಗಿ ಕೇಳಿ ಪರಮಾನಂದಗೊಂಡು, ಹಾಗೆ ಆ ಮಹತ್ಕಾರ್ಯಮಾಡಿ, ಭಗವದನುಗ್ರಹಕ್ಕೆ ಪಾತ್ರರಾದ ಅವರನ್ನು ಬಿಡಲಾರದೆ ಕೆಲಕಾಲ ತಮ್ಮ ಬಳಿಯಲ್ಲೇ ಇಟ್ಟು ಕೊಂಡಿದ್ದು - ತರುವಾಯ ದೇಹಾವಸಾನಕಾಲವು ಸಮೀಪಿಸುತ್ತಿರಲು ಅಲ್ಲಿಂದ ಹೊರಟು, ಕಾಗಿಣೀ ನದೀತೀರದ ಮಳಖೇಡ ಎಂಬ ಗ್ರಾಮದ ಸಮೀಪಕ್ಕೆ ಬಂದು ಅಲ್ಲಿ ಒಂದಾನೊಂದು ಮಾರ್ಗಶೀರ್ಷ ಕೃಷ್ಣ ಪಂಚಮೀ ಪುಣ್ಯತಿಥಿಯಲ್ಲಿ ಶ್ರೀರಾಮಪದಧ್ಯಾನಾಸಕ್ತರಾಗಿ ವೃಂದಾವನಸ್ಥರಾದರು. ಇವರ ವೃಂದಾವನವು ಕಾಗಿನೀ ನದೀದಡದ ಮಳಖೇಡದಲ್ಲಿ ಭಕ್ತಾಭೀಷ್ಟಫಲಪ್ರದಾಯಕವಾಗಿ ಈಗಲೂ ಇದೆ.

ಶ್ರೀ ಅಕ್ಷೋಭ್ಯತೀರ್ಥರು ವೃಂದಾವನಸ್ಥರಾದಮೇಲೆ, ಶ್ರೀಮಜ್ಜಯತೀರ್ಥರು ಮಳಖೇಡೆಯಲ್ಲೇ ಕೆಲಕಾಲ ತಮ್ಮ ಗುರುಗಳ ವೃಂದಾವನವನ್ನು ಪೂಜೆಮಾಡುತ್ತಲೂ ಶಿಷ್ಯರಿಗೆ ತಮ್ಮ ಭಾಷ್ಯಾದಿಗಳನ್ನು ಬೋಧಿಸುತ್ತಲೂ ವಾಸಿಸಿದ್ದರು. ಶ್ರೀ ಜಯತೀರ್ಥರ ಗ್ರಂಥರಚನಾ ಶೈಲಿಯು ಮನೋಹರವಾದುದೆಂದೂ, ಅಮೋಘವಾದುದೆಂದೂ ಪ್ರಖ್ಯಾತವಾಗಿದೆ. ಅವರ ಪೂರ್ವಪಕ್ಷವಿಧಾನವೂ, ಅನುವಾದಮಾಡಿ ಸಿದ್ಧಾಂತೀಕರಿಸುವ ಸಾಮರ್ಥ್ಯವೂ ಅನುಪಮವಾದುವೆಂದು ಕೊಂಡಾಡಲ್ಪಟ್ಟಿದೆ. ತಮ್ಮ ಸಮ್ಮುಖದಲ್ಲಿ ಕುಳಿತು ವಾದಮಾಡುವ ಅದ್ವೈತಿಗಳ ಮನಸ್ಸಿನಲ್ಲಿ ಸ್ಫುರಿಸುವ ಸಂದೇಹಗಳನ್ನು ಅವರು ಭ್ರಾಂತಿಗೊಳ್ಳುವಂತೆ ಪೂರ್ವಭಾವಿಯಾಗಿ ತಾವೇ ಹೇಳಿಕೊಂಡು, ಅವುಗಳನ್ನು ಖಂಡಿಸಿ, ಸಿದ್ಧಾಂತಸ್ಥಾಪನೆಮಾಡುವಲ್ಲಿ ಶ್ರೀಮಜ್ಜಯತೀರ್ಥರನ್ನು ಮೀರಿಸುವವರಾಗಲೀ ಅವರಿಗೆ ಸಮಾನರಾದವರಾಗಲೀ ಆಗ್ಗೆ ಯಾರೂ ಇರಲಿಲ್ಲ. ಅವರ ವಾಕ್ಯಸರಣಿಯಾದರೋ ಅರ್ಥಗಾಂಭೀರ್ಯ - ಯುಕ್ತಿಚಾತುರ್ಯ ಗರ್ಭಿತವಾದುದಾಗಿ, ದ್ರಾಕ್ಷಾಪಾಕದಿಂದ ಸುಮನೋಹರವೆನ್ನಿಸುವಂತಿರುವುದು. ವಿದ್ಯಾಭಿಮಾನಿಯಾದ ಸಾಕ್ಷಾತು ಸರಸ್ವತಿಯೇ ಒಲಿದು ಕೈಗೆ ಲೇಖನಿಯನ್ನಿತ್ತು ಬರೆಯಿಸಿರುವಲ್ಲಿ ಇನ್ನು ಅವರ ಶೈಲಿಯ - ಅದರಲ್ಲಿ ರಸಾವಿರ್ಭಾವದ ವಿಚಾರವನ್ನೆತ್ತಿ ವರ್ಣಿಸುವುದೇನಿದೆ? ಶ್ರೀಮದಾಚಾರ್ಯಕೃತ ಗ್ರಂಥಗಳು ಆಗ ಟೀಕಾಕ್ಷ

ತ್ವಾದರಿಂದ ಹೀಗೆ ವ್ಯಾಖ್ಯಾನ ಮಾಡಲ್ಪಡದಿದ್ದಲ್ಲಿ, ಅವುಗಳ ನಿಶ್ಚಯಸಿದ್ಧಾಂತವೂ, ದ್ವೈತಸಿದ್ಧಾಂತದ ನಿಶ್ಚಯವೂ ಲೋಕದಲ್ಲಿ ಪ್ರಚಾರಕ್ಕೆ ಬಾರದೆ, ಶ್ರೀಮನ್ಮಧ್ವಾಚಾರ್ಯರ ಅಗಾಧ ಪ್ರಯತ್ನವೂ ಸಾರ್ಥಕವಾಗದೆ, ಈಗ್ಗೆ, ದ್ವೈತಸಿದ್ಧಾಂತವೂ ಎಂಬುದೊಂದಿದ್ದಿತು ಎಂಬಂತಹ ಸ್ಥಿತಿಯು ಪ್ರಾಪ್ತವಾಗುತ್ತಿತ್ತೆನ್ನಲು ಅಡ್ಡಿಯಿಲ್ಲ.

ತಮ್ಮ ಗುರುಗಳು ವೃಂದಾವನಸ್ಥರಾದಮೇಲೂ ಶ್ರೀಮಜ್ಜಯತೀರ್ಥರು ಯರಗೋಳದ ಗುಹೆಯಲ್ಲೇ ವಾಸಿಸಿದ್ದು ಸಮೀಪದ ಗ್ರಾಮದಲ್ಲಿ ಶಿಷ್ಯರು ಮಧುಕರ ವೃತ್ತಿಯಿಂದ ತಂದ ಆಹಾರ ಸಾಮಗ್ರಿಯನ್ನು ಶ್ರೀ ಮೂಲರಾಮರಿಗೆ ನಿವೇದಿಸಿ ತಾವು ಭೋಜನಮಾಡುವರು, ತತ್ಪ್ರಸಾದವನ್ನೇ ಶಿಷ್ಯರೂ ಪರಿಗ್ರಹಿಸುವರು. ಹೀಗೆ ಸಾದಾಜೀವನ ಮತ್ತು ಉನ್ನತ ಚಿಂತನದ ತತ್ವವನ್ನು ಪಾಲಿಸುತ್ತಾ ಗ್ರಂಥರಚನೆ, ದೇವತಾರಾಧನೆ, ಪಾಠಪ್ರವಚನ, ತಪಸ್ಸು ಮುಂತಾದ ಕಾರ್ಯಗಳಲ್ಲಿ ಮಗ್ನರಾಗಿದ್ದರು. ಆ ಕಾಲದಲ್ಲೇ ಅವರಿಗೆ ಶ್ರೀ ವಿದ್ಯಾರಣ್ಯರೊಂದಿಗೆ ಸಮಾಗಮವಾಯಿತೆಂದು ಒಂದು ಸಂಗತಿಯು ಹೇಳಲ್ಪಟ್ಟಿದೆ. ಶ್ರೀಮಟ್ಟೀಕಾಚಾರ್ಯರಿಂದ ದ್ವೈತಸಿದ್ಧಾಂತ ಪ್ರತಿಪಾದನೆಗಾಗಿ ನಡೆದಿದ್ದ ಅಗಾಧ ಗ್ರಂಥರಚನೆ ವಾದಿನಿಗ್ರಹ ಮುಂತಾದುವುಗಳ ವಿಚಾರವನ್ನು ತಿಳಿದ ಶ್ರೀ ವಿದ್ಯಾರಣ್ಯರು, ಅವರಿದ್ದ ಯರಗೋಳ ಗುಹೆಯ ಪ್ರಾಂತಕ್ಕೆ ಬಂದು, ತಮ್ಮ ಪರಿವಾರವನ್ನೆಲ್ಲ ದೂರದಲ್ಲ ಬಿಟ್ಟು, ಏಕಾಂಗಿಗಳಾಗಿ ಗುಹಾದ್ವಾರಕ್ಕೆ ಬಂದು- 'ಅಂತಃ ಕಃ' ಎಂದರೆ, 'ಒಳಗೆ ಯಾರು!' ಎಂದು ಪ್ರಶ್ನಿಸಿದರಂತೆ! ಒಡನೆ ಒಳಗಿನಿಂದ ಧೈರ್ಯಮೇರುಗಳಾದ ಶ್ರೀ ಜಯತೀರ್ಥರು- 'ಅಹಂ'-'ನಾನು' ಎಂದು ಪ್ರತ್ಯುತ್ತರವಿತ್ತು, ಅತಿಥಿಯನ್ನು ಸ್ವಾಗತೀಕರಿಸಿದರು. ವಿದ್ಯಾರಣ್ಯರು ಒಳಹೊಕ್ಕರು. ಉಭಯ ವಿದ್ವಾಂಸರಿಗೂ ವಂದನೆ ಪ್ರತಿವಂದನೆಗಳಾದುವು! ಶ್ರೀ ವಿದ್ಯಾರಣ್ಯರು, 'ಪೂಜ್ಯರಾದ ತಾವು ಶ್ರೀ ಮಧ್ವಾಚಾರ್ಯಕೃತ ಭಾಷ್ಯಾದಿಗಳಿಗೆ ಟೀಕೆಗಳನ್ನು ಬರೆದಿದ್ದೀರೆಂದು ಕೇಳಿದೆ-' ಎಂದು ಜಯತೀರ್ಥರನ್ನು ಶ್ಲಾಘಿಸಿದರು. ಶ್ರೀ ಜಯತೀರ್ಥರಾದರೋ, ಆ ಮಾತನ್ನು ಬದಿಗಿಟ್ಟು- ಪ್ರಮಾಣಲಕ್ಷಣವೆನ್ನುವ ಶ್ರೀಮನ್ಮಧ್ವಾಚಾರ್ಯರ ಒಂದು ಚಿಕ್ಕ ಗ್ರಂಥವನ್ನು ತೆಗೆದು ಅವರ ಕೈಯಲ್ಲಿಟ್ಟರು. ವಿದ್ಯಾರಣ್ಯರು ಆ ಗ್ರಂಥವನ್ನು ಆಮೂ

ಲಾಗ್ರವಾಗಿ ನೋಡಿ, ಆದರ ಅರ್ಥಮಾಡಿಕೊಳ್ಳಬೇಕೆಂದು ಎಷ್ಟು ಪ್ರಯತ್ನಮಾಡಿದರೂ ಸಾಧ್ಯವಾಗದಿರಲು,-'ಇದೇನು, ಉನ್ಮತ್ತ ಪ್ರಲಪಿತವಾಗಿರುವ ಇದೊಂದು ಮಹಾಗ್ರಂಥವೋ!' ಎಂದರಂತೆ. ಒಡನೆ ಶ್ರೀಮಜ್ಜಯತೀರ್ಥರು, ತಾವು ಆ ಗ್ರಂಥಕ್ಕೆ ರಚಿಸಿದ್ದ ಟೀಕೆಯನ್ನು ಕೈಗೆಕೊಡಲು, ಶ್ರೀ ವಿದ್ಯಾರಣ್ಯರು ಓದಿನೋಡಿ, ಆದರ ಅರ್ಥ ಸ್ವಾರಸ್ಯವನ್ನು ಗ್ರಹಿಸಿ, ಅವರ ಮೇಧಾಶಕ್ತಿಯನ್ನೂ ವಿದ್ಯಾವೈಭವವನ್ನೂ ಕಂಡು ಬಹಳವಾಗಿ ಆನಂದಿಸಿದರು. ತರುವಾಯ ಶ್ರೀಮಟ್ಟೀಕಾಕೃತ್ಪಾದರಿಂದ ರಚಿತವಾದ ನ್ಯಾಯಸುಧಾ, ತತ್ವಪ್ರಕಾಶಿಕೆ ಮುಂತಾದ ಗ್ರಂಥಗಳನ್ನೆಲ್ಲ ನೋಡಿ ಪರಮಾಶ್ಚರ್ಯಪಟ್ಟು, ಗುಣಗ್ರಹಣಶೀಲರಾದುದರಿಂದ ಅವರ ವಿದ್ವತ್ತಿಗಾಗಿ ಆ ಮಹಾನುಭಾವರನ್ನು ಯೋಗ್ಯರೀತಿಯಿಂದ ಗೌರವಿಸತಕ್ಕುದು ತಮ್ಮ ಕರ್ತವ್ಯವೆಂದು ತಿಳಿದು, ತಾವು ಹತ್ತಿಕೊಂಡು ಬಂದಿದ್ದ ಆನೆಯಮೇಲೆ ಅವರನ್ನು ಕೂರಿಸಿ, ಅವರಿಂದ ರಚಿತವಾದ ಅಮೋಘ ಗ್ರಂಥಗಳನ್ನೆಲ್ಲ ಇಟ್ಟು ಸಕಲ ವಾದ್ಯವೈಭವಗಳೊಂದಿಗೆ ಊರಲ್ಲೆಲ್ಲ ಮೆರೆವಣಿಗೆಮಾಡಿಸಿ, ತಮ್ಮನ್ನೂ, ಇತರ ಅದ್ವೈತವಾದಿಗಳನ್ನೂ ಜಯಿಸಿದ ಅವರಿಗೆ ಜಯತೀರ್ಥರೆಂಬ ನಾಮಧೇಯವು ಸಾರ್ಥಕವಾದುದೆಂದು ಹೊಗಳಿದರು.

ವಿದ್ಯಾನಗರೀಸಂಸ್ಥಾನದ ವಿದ್ವತ್-ಸಚಿವಶಿರೋಮಣಿಯಿಂದ ಅಷ್ಟುಮಟ್ಟಿನ ಗೌರವಕ್ಕೆ ಪಾತ್ರರಾದರೂ, ಶ್ರೀಮಟ್ಟೀಕಾಚಾರ್ಯರು, ಗಂಭೀರವಾದ ಸಮುದ್ರವನ್ನನುಕರಿಸುತ್ತ ಲೇಶಮಾತ್ರವೂ ಹೆಮ್ಮೆಗೊಳ್ಳದೆ, ಎಂದಿನಂತೆ ಆ ಯರಗೋಳದ ಗುಹೆಯಲ್ಲೇ, ಶಿಷ್ಯರ ಮಾಧುಕರದಿಂದಲೇ ಉಪಜೀವಿಸಿಕೊಂಡು, ಶ್ರೀಹರಿಸೇವೆ, ಪಾಠಪ್ರವಚನ, ಗ್ರಂಥರಚನ ಕಾರ್ಯಗಳನ್ನು ಸಾಗಿಸಿಕೊಂಡಿದ್ದರು. ಆದರೆ, ರತ್ನವು ಹರುಕುಬಟ್ಟೆಯಲ್ಲಿ ಕಟ್ಟಿಟ್ಟಮಾತ್ರಕ್ಕೆ ಅದರ ಪ್ರಕಾಶವನ್ನು ಕಳೆದುಕೊಂಡೀತೆ ? ಅವರ ಅಗಾಧ ಮಹಿಮೆಯು ಪ್ರಕಾಶಿತವಾಗುವ ಒಂದು ಸಂದರ್ಭವು ಒದಗಿತು. ಅದೇ ಪರ್ವತಪ್ರಾಂತದ ಒಂದು ಸ್ಥಳದಲ್ಲಿ ಒಬ್ಬ ಶೂದ್ರಪ್ರಭುವು ಒಂದು ಸೇತುವೆಯನ್ನು ಕಟ್ಟಲುದ್ದೇಶಿಸಿ, ಎಷ್ಟು ಸಾರಿ ಪ್ರಯತ್ನಿಸಿದರೂ, ಸೇತುವೆಯ ಕಂಭಗಳು ನಿಲ್ಲದೆ ಕುಸಿದುಹೋಗುತ್ತಿದ್ದುವಂತೆ! ಇದನ್ನು ಕಂಡು, ಅವನು ಏನುಮಾಡಬೇಕೆಂದು ಯೋಚಿಸುತ್ತಿರುವಲ್ಲಿ ಒಂದು ದಿನ ರಾತ್ರಿ

ಅವನಿಗೆ ಒಂದು ಸ್ವಪ್ನವಾಗಿ ಅದರಲ್ಲಿ - ಅಯ್ಯಾ ಇಲ್ಲೇ ಯರಗೊಳದ ಗುಹೆಯಲ್ಲಿರುವ ಯತೀಶ್ವರರ ಕೈಯಿಂದ ಒಂದು ಮುಷ್ಟಿ ಮಣ್ಣನ್ನು ಹಾಕಿಸಿ ತರುವಾಯ ನೀನು ಸೇತುವೆಯನ್ನು ಕಟ್ಟು; ಅದು ನಿಲ್ಲುತ್ತದೆ' ಎಂದು ಹೇಳಿದಂತಾಯಿತಂತೆ! ಒಡನೆ ಆತನು ಎಚ್ಚತ್ತು, ಗುಹಾಸಮೀಪವನ್ನು ಸೇರಿ, ಶ್ರೀಗಳವರಿಗೆ ಸಾಷ್ಟಾಂಗನಮಸ್ಕಾರಮಾಡಿ, ತನ್ನ ಉದ್ಯಮವನ್ನೂ ತನಗಾದ ಸ್ವಪ್ನವನ್ನೂ ತಿಳಿಸಿ, ಅನುಗ್ರಹಮಾಡಬೇಕೆಂದು ಪ್ರಾರ್ಥಿಸಿದನು. ಶ್ರೀ ಜಯತೀರ್ಥರು, ಆತನ ಪ್ರಾರ್ಥನೆಯನ್ನು ಅಂಗೀಕರಿಸಿ, ಹಾಗೆಯೇ ಒಂದು ಮುಷ್ಟಿ ಮಣ್ಣನ್ನು ಹಾಕಿ, ಕೃಪಾಪೂರ್ವಕ ಆಶೀರ್ವದಿಸಿದರಂತೆ! ತರುವಾಯ, ಅದರಮೇಲೆ ಕಟ್ಟಿದ ಕಂಭವು ಶಾಶ್ವತವಾಗಿ ನಿಂತಿತೆಂದೂ, ಆ ಸೇತುವೆಯು ಈಗಲೂ ಇದೆಯೆಂದೂ ಹೇಳುತ್ತಾರೆ.

ಶ್ರೀಮಜ್ಜಯತೀರ್ಥರು, ಶ್ರೀಮಧ್ವಾಚಾರ್ಯರ ಗ್ರಂಥಗಳೆಲ್ಲಕ್ಕೂ ವ್ಯಾಖ್ಯಾನಮಾಡಲಿಲ್ಲ. ಅವರು ಭಾಷ್ಯಮಾಡಿದ ದಶೋಪನಿಷತ್ತುಗಳಲ್ಲಿ ಈಶಾವಾಸ್ಯ ಮತ್ತು ಷಟ್ಪ್ರಶ್ನೋಪನಿಷತ್ತು, ಎಂಬೀ ಎರಡಕ್ಕೆ ಮಾತ್ರವೇ ವ್ಯಾಖ್ಯಾನಮಾಡಿದರು. ಮಿಕ್ಕವುಗಳಿಗೆಲ್ಲ ಅವರ ಶಿಷ್ಯರಾದ ಶ್ರೀವ್ಯಾಸತೀರ್ಥರು ಲಘುವ್ಯಾಖ್ಯಾನಮಾಡಿದ್ದಾರೆ. ಶ್ರೀಟೀಕಾಕೃತ್ಪಾದರ ಶಿಷ್ಯರಲ್ಲೂ ಘನಪಂಡಿತರಿದ್ದರು. ಅವರಲೊಬ್ಬರಾದ ಶ್ರೀ ವಿಜಯಧ್ವಜಾಚಾರ್ಯರೆಂಬುವರು, ಶ್ರೀಮದ್ಭಾಗವತ ಗ್ರಂಥಕ್ಕೆ ದಿವ್ಯ ವ್ಯಾಖ್ಯಾನಮಾಡಿ, ಅಗಾಧ ಲೋಕೋಪಕಾರಮಾಡಿದರು. ಹೀಗೆ ಶ್ರೀಮಜ್ಜಯತೀರ್ಥರ ವಾದಿನಿಗ್ರಹಣ - ಗ್ರಂಥರಚನಾದಿಕಾರ್ಯಗಳು ಅವರಿಗೆ ಆಚಂದ್ರಾರ್ಕ ಕೀರ್ತಿಯನ್ನು ತಂದಿತ್ತು, ಅವರನ್ನು ಚಿರಜೀವಿಯನ್ನಾಗಿಸಿವೆ.



## ಉ ಪ ಸಂ ಹಾ ರ

ದ್ವೈತಸಿದ್ಧಾಂತಸ್ಥಾಪನಾಚಾರ್ಯರಾದ ಶ್ರೀಮನ್ಮಧ್ವಾಚಾರ್ಯರು ಮತ್ತು, ಅವರ ಗ್ರಂಥಗಳಿಗೆ ಟೀಕೆಗಳನ್ನು ರಚಿಸಿದ ಶ್ರೀಮಜ್ಜಯತೀರ್ಥ ಯತೀಶ್ವರರ ಜನನ, ಸನ್ಯಾಸಗ್ರಹಣ ಮತ್ತು ನಿರ್ಯಾಣ ಇವುಗಳು

ನಡೆದ ಗೊತ್ತಾದ ಸಂವತ್ಸರವಾವುದೆಂದು ಪಂಡಿತಮಂಡಲಿಯಲ್ಲಿ ವಿಶೇಷ ಚರ್ಚೆಯಾಗಿ, ಇನ್ನೂ ಯಾವುದೂ ಗೊತ್ತಾದ ಸಂವತ್ಸರವೆಂದು ನಿರ್ಧಾರವಾದಂತಿಲ್ಲ. ಮಠಾದಿಗಳಲ್ಲಿರುವ ನಿರಾಧಾರವಾದ ಕೆಲವು ಪರಂಪರಾಪಟ್ಟಿಗಳು ತೋರಿಸುವ ಕಾಲವು, ದೇಶಚರಿತ್ರೆಯಲ್ಲಿ ಕೊಡುವ ಕಾಲಕ್ಕೆ ಅನೇಕ ಸಂದರ್ಭಗಳಲ್ಲಿ ತಾಳೆಬರುವುದಿಲ್ಲ ಆದುದರಿಂದ ಸದ್ಯಃ, ದೇಶಚರಿತ್ರೆಯಲ್ಲಿ ರಾಜಕೀಯವಾಗಿ ದೊರೆವಕಾಲದ ಆಧಾರವನ್ನು ಹಿಡಿದೇ ಈ ಯತೀಶ್ವರರ ಜನನಾದಿ ಕಾಲಗಳನ್ನು ಗೊತ್ತುಹಚ್ಚತಕ್ಕದು ಯುಕ್ತವೆಂದು ತೋರುತ್ತದೆ.

ಶ್ರೀವಿದ್ಯಾರಣ್ಯರು ಕರ್ಣಾಟಕಸಿಂಹಾಸನ ಸ್ಥಾಪನೆಮಾಡಿ, ರಾಜನಾದ ಮೊದಲನೇ ಹರಿಹರರಾಯನಿಗೆ ಪ್ರಧಾನಸಚಿವರಾಗಿ ನಿಂತುದು ಕ್ರಿ. ಶ. ೧೩೩೯ರಲ್ಲೆಂದು ಗೊತ್ತಾಗಿ ತಿಳಿಯಲು ಅವಕಾಶವಿದೆ. ವಿದ್ಯಾರಣ್ಯರೊಂದಿಗೆ ಶ್ರೀ ಅಕ್ಷೋಭ್ಯತೀರ್ಥರು ವಾದಮಾಡಿದರೆಂಬುದು ನಿಶ್ಚಯವೃತ್ತಾಂತವಾದುದರಿಂದ ಆ ಕಾಲವನ್ನು ಈ ಮೂಲಕ ಗೊತ್ತುಹಚ್ಚಲು ಸಾಧ್ಯವುಂಟು. ಶ್ರೀಮನ್ಮಧ್ವಾಚಾರ್ಯರು ಅದೃಶ್ಯರಾದ ತರುವಾಯ ಅವರ ಶಿಷ್ಯಂದಿರಾದ ಶ್ರೀ ಪದ್ಮನಾಭತೀರ್ಥರು, ಶ್ರೀ ನರಹರಿತೀರ್ಥರು, ಮಾಧವತೀರ್ಥರು ಎಂಬ ಮೂವರು ಯತಿಗಳು ಕ್ರಮವಾಗಿ ಏಳು, ಒಂಬತ್ತು, ಮತ್ತು ಹದಿನೇಳು ವರ್ಷಗಳಂತೆ ಸಂಸ್ಥಾನವನ್ನು ಆಳಿದ ತರುವಾಯ ಅಕ್ಷೋಭ್ಯತೀರ್ಥರು ಸನ್ಯಾಸಸ್ವೀಕಾರಮಾಡಿದ್ದಾರೆ ಎಂದರೆ ಶ್ರೀಮನ್ಮಧ್ವಾಚಾರ್ಯರ್ಯರು ಅದೃಶ್ಯರಾದ ಮೂವತ್ತೂರು ವರ್ಷಗಳ ತರುವಾಯ ಶ್ರೀ ಅಕ್ಷೋಭ್ಯತೀರ್ಥರು ಪೀಠಾರೋಹಣಮಾಡಿದಂತಾಯಿತು. ಇವರು ಹದಿನೇಳುವರ್ಷಕಾಲವಿದ್ದು, ತರುವಾಯ ಶ್ರೀಮಜ್ಜಯತೀರ್ಥರಿಗೆ ಪೀಠವನ್ನು ಬಿಟ್ಟುಕೊಟ್ಟರೆಂದು ಉಲ್ಲೇಖವಿರುವುದರಿಂದ, ಶ್ರೀವಿದ್ಯಾರಣ್ಯರಿಗೂ, ಅಕ್ಷೋಭ್ಯತೀರ್ಥರಿಗೂ ಈ ಹದಿನೇಳುವರ್ಷಗಳೊಳಗಾಗಿಯೇ ವಾದನಡೆದಿರಬೇಕೆಂಬುದು ಸಿದ್ಧವಾಗುತ್ತದೆ. ಶ್ರೀಮನ್ಮಧ್ವಾಚಾರ್ಯರು ಒಂದಾನೊಂದು ವಿಳಂಬಿ ಸಂವತ್ಸರದಲ್ಲಿ ಜನಿಸಿ, ಪಿಂಗಳ ಸಂವತ್ಸರದಲ್ಲಿ ಅದೃಶ್ಯರಾದರೆಂದು ಖಚಿತವಾದ ದಾಖಲೆಯಿರುವುದರಿಂದಲೂ, ಸಮೀಪದ ಅಂತಹ ಒಂದು ಪಿಂಗಳಸಂವತ್ಸರವು ಶಾ. ಶಕೆಯು ೧೨೩೯ (ಕ್ರಿ.ಶ.೧೩೧೭) ನೆಯದೇ ಆಗುವುದರಿಂದಲೂ, ಶ್ರೀಮನ್ಮಧ್ವಾಚಾರ್ಯರು ಶಕೆ ೧೧೬೦ (ಕ್ರಿ.

ಶ. ೧೨೩೮)ನೆಯ ವಿಳಂಬಿ ಸಂವತ್ಸರದಲ್ಲಿ ಜನಿಸಿ, ಶಕೆ ೧೨೩೯ನೆಯ (ಕ್ರಿ. ಶ. ೧೩೧೭) ಪಿಂಗಳ ಸಂವತ್ಸರದಲ್ಲಿ ಅದೃಶ್ಯರಾದರೆಂದು ನಿರ್ಬಾಧಕವಾಗಿ ಹೇಳಬಹುದಾಗಿದೆ. ಅವರ ತರುವಾಯ ಸರಿಯಾಗಿ ೫೦ ವರ್ಷಕ್ಕೆ ಶ್ರೀ ಜಯತೀರ್ಥರು ಸನ್ಯಾಸಗ್ರಹಣಮಾಡಿ ಪೀಠಾಧಿಪತ್ಯವನ್ನು ಪಡೆದುದು. ಎಂದರೆ ಅವರ ಆಶ್ರಮಸ್ವೀಕಾರ ಕಾಲವು ಕ್ರಿ ಶ. ೧೩೬೭ ಎಂತಲೂ, ಅವರು ತರುವಾಯ ಕೇವಲ ಹನ್ನೆರಡು ವರ್ಷಗಳು ಮಾತ್ರವೇ ಭೂಮಿಯಲ್ಲಿದ್ದುದರಿಂದ ಅವರ ನಿರ್ಯಾಣವು ಕ್ರಿ. ಶ. ೧೩೭೯(ನೆಯ ಸಂ|ಕ್ಕೆ ಸರಿಯಾದ ವಿಭವ ಸಂ|ದ ಶ್ರಾವಣ ಬ. ಪಂಚಮಿ)ಎಂತಲೂ ಸಿದ್ಧವಾಗುತ್ತದೆ. ಅವರು ಸನ್ಯಾಸಸ್ವೀಕಾರಕಾಲದಲ್ಲಿ ತುಂಬು ಯೌವನದಲ್ಲಿದ್ದು, ಕೇವಲ ಮೂವತ್ತೆರಡುವರ್ಷಕಾಲ ಮಾತ್ರವೇ ಅವರ ಆದ್ಯಂತ ಜೀವಿತಕಾಲವೆಂದಿರುವುದರಿಂದ ಅವರು ಕ್ರಿ. ಶ. ೧೩೪೭ರ ಸುಮಾರಿನಲ್ಲಿ ಜನನವಾಗಿರಬಹುದೆಂದೂ ಹೇಳಲಭ್ಯಂತರವಿಲ್ಲವೆಂದು ತೋರುತ್ತದೆ

ಶ್ರೀಹರಿಗುರುಗಳ ಪರಮಾನುಗ್ರಹಕ್ಕೆ ಪಾತ್ರರಾಗಿ, ಕೇವಲ ಹನ್ನೆರಡುವರ್ಷಕಾಲದೊಳಗಾಗಿಯೇ ಆಚಂದ್ರಾರ್ಕ ಕೀರ್ತಿಪ್ರದವಾದಂತಹ ಮಹತ್ಕಾರ್ಯವನ್ನು ಸಾಧಿಸಿದ ಶ್ರೀಮಜ್ಜಯತೀರ್ಥಯತಿವರ್ಯರು, ತಾವು ಪರಂಧಾಮಕ್ಕೆ ತೆರಳುವ ಕಾಲವು ಸಮೀಪಿಸುತ್ತಿದೆಯೆಂಬುದನ್ನು ತಿಳಿದವರಾಗಿ, ತಮ್ಮ ಶಿಷ್ಯರಲ್ಲೊಬ್ಬರಾದ ಶ್ರೀ ವಿದ್ಯಾಧಿರಾಜತೀರ್ಥರೆಂಬುವರಿಗೆ ಶ್ರೀ ರಾಮಚಂದ್ರಸ್ವಾಮಿಯ ಪೂಜಾಧಿಕಾರವನ್ನೊಪ್ಪಿಸಿ, ಕಾಗಿಣೀನದೀ ತೀರದ ಮಳಖೇಡಿಯೆಂಬ ಸ್ಥಳದಲ್ಲೀ, ತಮ್ಮ ಗುರುಗಳ ವೃಂದಾವನ ಸಮೀಪದಲ್ಲೀ ವೃಂದಾವನಸ್ಥರಾಗಿ ಅದ್ಯಾಪಿ, ಆರಾಧಕ ಭಕ್ತಕೋಟಿಯಿಂದ ಸೇವಾಸ್ವೀಕಾರಮಾಡುತ್ತಿದ್ದಾರೆ.

ಮಹಾನುಭಾವರಾದ ಶ್ರೀಮಜ್ಜಯತೀರ್ಥಯತಿವರ್ಯರ ಕೃಪಾಪಾಂಗವು ಸದಾ ಭಕ್ತಸಂತಾಪನಿವಾರಕವಾಗಿದ್ದು, ಜಗತ್ತಿನಲ್ಲಿ ಶ್ರೀ ಹರಿಭಕ್ತಿಯನ್ನೂ, ನಿಷ್ಕಾಮಸೇವಾಭಾವನೆಯನ್ನೂ, ಆಸ್ತಿಕತೆಯನ್ನೂ ಅಭಿವೃದ್ಧಿಗೊಳಿಸಲು ಶಕ್ತವಾಗಿರಲಿ. ಶ್ರೀರಾಮಚಂದ್ರಸ್ವಾಮಿಯು ಕಟಾಕ್ಷಿಸಿ ನಮ್ಮ ಈ ಸದಿಚ್ಛೆಯನ್ನು ಪ್ರಸಾದಿಸಲಿ

ತಥಾಸ್ತು.

———